# ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು - ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ



ಸಂಶೋಧಕ:

**ಡಿ. ಕೆ. ನಟರಾಜ**

ಮಾರ್ಗದರ್ಶಕರು:

**ಡಾ|| ಸಾಂಬ ಮೂರ್ತಿ**

ಪ್ರವಾಚಕರು

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವ ವಿದ್ಯಾಲಯ, ಹಂಪಿ





ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೮

# ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು - ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕ:

**ಡಿ. ಕೆ. ನಟರಾಜ**





ಮಾರ್ಗದರ್ಶಕರು :

**ಡಾ॥ ಸಾಂಬ ಮೂರ್ತಿ**

ಪ್ರವಾಚಕರು

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವ ವಿದ್ಯಾಲಯ , ಹಂಪಿ










ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ , ಹಂಪಿ

೨೦೦೮

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಡಿ. ಕೆ. ನಟರಾಜ ಇವರು, 'ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು - ಒಂದು ಅಧ್ಯಯನ ' ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಇಡಿಯಾಗಿಯಾಗಲೀ , ಬಿಡಿ ಲೇಖನಗಳಾಗಿಯಾಗಲೀ ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : ೭-೫-೨೦೦೮
ಸ್ಥಳ : ವಿದ್ಯಾರಣ್ಯ

(ಡಾ॥ ಸಾಂಬಮೂರ್ತಿ)
ಮಾರ್ಗದರ್ಶಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩೨೭೬

# ಸಂಶೋಧಕರ ಪ್ರಮಾಣ ಪತ್ರ

**'ಬೆಂಗಳೂರು ಗ್ರಾಮಂತರ ಜಿಲ್ಲೆಯ ಸ್ಥಳನಾಮಗಳು - ಒಂದು ಅಧ್ಯಯನ'** ಎಂಬ ಈ ಪಿಎಚ್.ಡಿ. ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಪ್ರಾಧ್ಯಾಪಕರಾದ **ಡಾ|| ಸಾಂಬಮೂರ್ತಿ**ಯವರ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿ, ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ನನ್ನ ಸ್ವಂತ ಅಧ್ಯಯನದಿಂದ ಪ್ರಸ್ತುತ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದು, ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದೂ, ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದೂ ಪ್ರಮಾಣೀಕರಿಸುತ್ತೇನೆ.



ದಿನಾಂಕ : ೭-೫-೨೦೦೮
ಸ್ಥಳ : ವಿದ್ಯಾರಣ್ಯ

(ಡಿ. ಕೆ. ನಟರಾಜ)
ಸಂಶೋಧಕ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದ ಭಾಷಾಧ್ಯಯನ ವಿಭಾಗದಲ್ಲಿ ಪಿಎಚ್.ಡಿ. ಮಾಡಲು ಅನುವು ಮಾಡಿಕೊಟ್ಟ ಕುಲಪತಿಗಳಾದ ಡಾ॥ ಎಂ. ಮುರಿಗೆಪ್ಪನವರಿಗೆ, ಹಿಂದಿನ ಕುಲಪತಿಗಳಾಗಿದ್ದ ಡಾ॥ ವಿವೇಕ್ ರೈ ರವರಿಗೆ ಹಾಗೂ ಹಿರಿಯರೂ ಗುರುಗಳೂ ವಿದ್ವಾಂಸರೂ ಆದ ಡಾ॥ ಕೆ.ವಿ. ನಾರಾಯಣ್‌ರವರಿಗೆ,

ವಿಶ್ವವಿದ್ಯಾಲಯದ ಪ್ರಭಾರ ಕುಲಸಚಿವರಾದ ಡಾ॥ ಹಿ. ಚಿ. ಬೋರಲಿಂಗಯ್ಯನವರಿಗೆ, ಹಿಂದಿನ ಕುಲಸಚಿವರಾದ ಡಾ॥ ಕರಿಗೌಡ ಬೀಚನಹಳ್ಳಿಯವರಿಗೆ,

ಪಿಎಚ್.ಡಿ. ವಿಷಯದ ಆಯ್ಕೆ, ಮೂಲಭೂತ ಸಿದ್ಧತೆ, ಆಕರ ಗ್ರಂಥಗಳನ್ನು ಸೂಚಿಸಿ, ಸಂದೇಹಗಳನ್ನು ಪರಿಹರಿಸಿ, ಕರಡುಪ್ರತಿಗಳನ್ನು ತಿದ್ದಿ ನೀಡುತ್ತಾ ಆತ್ಮೀಯತೆಯಿಂದ ಮಾರ್ಗದರ್ಶನ ನೀಡಿದ ಕನ್ನಡ ಭಾಷಾಧ್ಯಯನ ವಿಭಾಗದ ಪ್ರವಾಚಕರಾದ ಡಾ॥ ಸಾಂಬಮೂರ್ತಿಯವರಿಗೆ,

ಅಧ್ಯಯನದ ಮೊದಲಿನಿಂದಲೂ ಪೂರಕವಾದ ಸಲಹೆಗಳನ್ನು ನೀಡುತ್ತಾ, ಸಹಕಾರವನ್ನು ನೀಡಿದ ಅಧ್ಯಯನಾಂಗದ ನಿರ್ದೇಶಕರೂ, ಭಾಷಾಧ್ಯಯನ ವಿಭಾಗದ ಹಿರಿಯ ಪ್ರಾಧ್ಯಾಪಕರೂ ಆದ ಡಾ॥ ಡಿ. ಪಾಂಡುರಂಗ ಬಾಬುರವರಿಗೆ, ಹಿಂದಿನ ನಿರ್ದೇಶಕರಾದ ಡಾ॥ ಟಿ.ಆರ್. ಚಂದ್ರಶೇಖರ್‌ರವರಿಗೆ,

ಕನ್ನಡ ಭಾಷಾಧ್ಯಯನ ವಿಭಾಗದಲ್ಲಿ ಸಂಶೋಧನೆಗೆ ಸಂಬಂಧಿಸಿದಂತೆ ಸೂಕ್ತ ಸಲಹೆಗಳನ್ನು ನೀಡುತ್ತಾ ಅಧ್ಯಯನಕ್ಕೆ ಸಹಕಾರವನ್ನು ನೀಡಿದ, ವಿಭಾಗದ ಮುಖ್ಯಸ್ಥರಾದ ಡಾ॥ ಪಿ. ಮಹದೇವಯ್ಯನವರಿಗೆ, ಪ್ರವಾಚಕರಾದ ಡಾ॥ ಅಶೋಕ ಕುಮಾರ ರಂಜೇರಾ ರವರಿಗೆ, ಹಾಗೂ ಸಿಬ್ಬಂದಿ ವರ್ಗದವರಾದ ಶ್ರೀ ವೀರೇಶ್‌ರವರಿಗೆ,

ಹಸ್ತಪ್ರತಿ ವಿಭಾಗದ ಡಾ॥ ಎಫ್.ಟಿ. ಹಳ್ಳಿಕೇರಿಯವರಿಗೆ, ಡಾ॥ ರವೀಂದ್ರನಾಥ್‌ರವರಿಗೆ, ಶಾಸನಶಾಸ್ತ್ರ ವಿಭಾಗದ ಡಾ॥ ಪರಮಶಿವಮೂರ್ತಿಯವರಿಗೆ, ಪ್ರೊ॥ ಸಿ. ವೆಂಕಟೇಶ್‌ರವರಿಗೆ,

ಅಧ್ಯಯನದಲ್ಲಿ ಸಹಕರಿಸಿದ ಪ್ರೊ॥ ಸುಬ್ಬಣ್ಣ ರೈ ರವರಿಗೆ, ಪ್ರಸಾರಾಂಗ ನಿರ್ದೇಶಕರಾದ ಡಾ॥ ಮಲ್ಲೇಪುರಂ ಜಿ. ವೆಂಕಟೇಶ್‌ರವರಿಗೆ, ಡಾ॥ ಸುಜ್ಞಾನಮೂರ್ತಿ ಹಾಗೂ ಶ್ರೀಯುತ ಪೂವಯ್ಯನವರಿಗೆ,

ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ಆಕರ ಗ್ರಂಥಗಳನ್ನು ಅಧ್ಯಯನ ಮಾಡಲು ಅನುವು ಮಾಡಿಕೊಟ್ಟ ಗ್ರಂಥಾಲಯದ ಎಲ್ಲಾ ಅಧಿಕಾರಿಗಳಿಗೆ,

ಆರ್. ಸಿ. ಕಾಲೇಜಿನಲ್ಲಿ ಪ್ರೋತ್ಸಾಹದ ಮಾತುಗಳನ್ನಾಡಿದ ಪ್ರೊ॥ ಎಸ್. ಮರಿಯಮ್ಮನವರಿಗೆ, ಪ್ರೊ॥ ಸಿ. ಸುಶೀಲಾ ಬೋಪಯ್ಯನವರಿಗೆ, ಪ್ರೊ॥ ಎ.ಆರ್. ತ್ರಿಪುರಾರವರಿಗೆ ಹಾಗೂ ಆತ್ಮೀಯರಿಗೆ,

ಅಧ್ಯಯನಕ್ಕೆ ಬೇಕಾದ ಸಿದ್ಧತೆಗೆ ಸಹಕರಿಸಿದ ಆತ್ಮೀಯ ಸ್ನೇಹಿತರಾದ ಡಾ॥ ಜೆ. ಕರಿಯಪ್ಪ ಮಾಳಗಿ ಹಾಗೂ ಡಾ॥ ಶಿಂಧೆ ಜಯಕುಮಾರ್‌ರವರಿಗೆ,

ಆತ್ಮೀಯ ಸ್ನೇಹಿತರಾದ ಕೆ.ಎಸ್. ರಮೇಶ್‌ಬಾಬು, ನರಸಿಂಹರಾಜು, ಪ್ರಭಾಕರ್, ಗಂಗಾಧರ್, ಮುನಿರಾಜ್, ನಾಗರಾಜ್, ರಾಘವನ್, ಶೇಖರ್, ಹೆಚ್.ಕೆ. ಮುರಳೀಧರ್, ವಿಜಯಧ್ವಜರಾವ್, ವೆಂಕಟೇಶ ಅಯ್ಯರ್, ಉಮಾಶಂಕರ್‌ರವರಿಗೆ,

ಪಿಎಚ್.ಡಿ. ಮಾಡಲು ಪ್ರತ್ಯಕ್ಷವಾಗಿ ಪ್ರೋತ್ಸಾಹ ನೀಡಿದ ಅಪ್ಪ ಶ್ರೀ ಡಿ. ಎಸ್. ಕೃಷ್ಣಮೂರ್ತಿ, ಅಮ್ಮ ಜಯಮ್ಮ, ಪ್ರತಿಯೊಂದು ಕಾರ್ಯದಲ್ಲೂ ಬೆನ್ನೆಲುಬಾಗಿರುವ ಶೋಭಾ, ಮುದ್ದು ಮಾತಿನ ಪುಟಾಣಿಗಳಾದ ಸಿಂಧೂ ಹಾಗೂ ಸಮೀರ ಇವರಿಗೆ,

ಪರೋಕ್ಷವಾಗಿ ಪ್ರೋತ್ಸಾಹ ನೀಡಿದ ಶ್ರೀ ಸುಬ್ಬಣ್ಣ, ಶ್ರೀಪಾದ್, ಜ್ಯೋತಿ, ಸ್ಫೂರ್ತಿ, ಶ್ರೀಧರ್, ವಿಜಯ, ಮಹೇಂದ್ರ, ಶ್ರೀಲಕ್ಷ್ಮಿ, ಕೌಶಿಕ್, ಕಾವ್ಯ, ಐಸಿರಿ, ಬೃಂದಾ ಇವರುಗಳಿಗೆ,

ಆತ್ಮೀಯ ಸ್ನೇಹಿತರಾದ ಪ್ರೊ॥ ರಾಮಚಂದ್ರಯ್ಯ, ಕೆ. ವೆಂಕಟೇಶ್, ಪ್ರೊ॥ ಬಾಲರಾಜ್, ಪ್ರೊ॥ ನಿಂಗಮಾರಯ್ಯ, ಪ್ರೊ॥ ಡಿ.ಕೆ. ಧನಂಜಯ, ಡಾ॥ ಸೋಮಶೇಖರ್, ತೆಲುಗು ಉಪನ್ಯಾಸಕರಾದ ಪ್ರೊ॥ ರಾಜ್ ಇವರಿಗೆ,

ಮಹಾಪ್ರಬಂಧವನ್ನು ಅಂದವಾಗಿ ಮುದ್ರಿಸಿಕೊಟ್ಟ ಕ್ರಿಯೇಟಿವ್ ಗ್ರಾಫಿಕ್ಸ್‌ನ ಶ್ರೀ ಆರ್.ವಿ. ಜ್ವಾಲೇಂದ್ರರವರಿಗೆ

ನನ್ನನ್ನು ರೂಪಿಸಿದ ದೇವನಹಳ್ಳಿಯ ಸಮಸ್ತ ಬಂಧುಗಳಿಗೆ, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಅಧ್ಯಯನದಲ್ಲಿ ಸಹಕಾರ ನೀಡಿದ ಪಂಡಿತ-ಪಾಮರರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ.

೦೭-೦೫-೨೦೦೮ **ಡಿ. ಕೆ. ನಟರಾಜ**

# ಸಂಕೇತಾಕ್ಷರಗಳು

೧. ಬೆಂ - ಬೆಂಗಳೂರು ತಾಲ್ಲೂಕು

೨. ಕ - ಕನಕಪುರ ತಾಲ್ಲೂಕು

೩. ಚ - ಚನ್ನಪಟ್ಟಣ ತಾಲ್ಲೂಕು

೪. ದೇ - ದೇವನಹಳ್ಳಿ ತಾಲ್ಲೂಕು

೫. ದೊ - ದೊಡ್ಡಬಳ್ಳಾಪುರ ತಾಲ್ಲೂಕು

೬. ನೆ - ನೆಲಮಂಗಲ ತಾಲ್ಲೂಕು

೭. ಮಾ - ಮಾಗಡಿ ತಾಲ್ಲೂಕು

೮. ರಾ - ರಾಮನಗರ ತಾಲ್ಲೂಕು

೯. ಹೊ - ಹೊಸಕೋಟೆ ತಾಲ್ಲೂಕು

೧೦. ಕ.ಸಾ.ಪ. - ಕನ್ನಡ ಸಾಹಿತ್ಯ ಪರಿಷತ್ತು

೧೧. ಬೆಂ.ವಿ.ವಿ. - ಬೆಂಗಳೂರು ವಿಶ್ವವಿದ್ಯಾ ಲಯ

೧೨. ಕ.ಸ. - ಕರ್ಮಧಾರಯ ಸಮಾಸ

೧೩. ವಿ.ಪ್ರ. - ವಿಭಕ್ತಿ ಪ್ರತ್ಯಯ

೧೪. ಶಾ.ರೂ. - ಶಾಸನೋಕ್ತ ರೂಪ

೧೫. ಶಾ.ಸ. - ಶಾಸನ ಸಂಖ್ಯೆ

೧೬. ಪ್ರ.ಸಂ. - ಪ್ರಧಾನ ಸಂಪಾದಕರು

೧೭. ಕಿ.ನಿ. - ಕಿಟ್ಟೆಲ್ ನಿಘಂಟು

೧೮. ಕ.ಕ.ಇಂ.ನಿ. - ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು

# ಪರಿವಿಡಿ

೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನ ವಿಧಾನ ಮತ್ತು ಅನುಭವ

## ಪ್ರವೇಶ

ಪ್ರಾಚೀನ ಮಾನವನ ಬೌದ್ಧಿಕ ಶಕ್ತಿ ಬೆಳೆಯುತ್ತಿದ್ದಂತೆ, ತನಗೆ ಅವಶ್ಯವಿರುವ ಮೂಲಭೂತ ವಸ್ತುಗಳನ್ನು ಪೂರೈಸಿಕೊಳ್ಳುವ ಸಾಮರ್ಥ್ಯ ಗಳಿಸಿಕೊಂಡನು. ಪ್ರಕೃತಿಯಲ್ಲಿನ ವಸ್ತುಗಳನ್ನು ಬಳಸಿಕೊಂಡು ಸಾಧ್ಯವಾದಷ್ಟೂ ರಕ್ಷಣಾತ್ಮಕವಾಗಿ ಜೀವಿಸಲು ಪ್ರಾರಂಭಿಸಿದನು. ನಂತರದಲ್ಲಿ ಕೃತಕ ನಿರ್ಮಾಣಗಳ ಮೂಲಕ ತನ್ನ ರಕ್ಷಣೆಯನ್ನು ಮಾಡಿಕೊಂಡನು. ಇದು ಪ್ರಾಚೀನ ಮಾನವನ ನಿರ್ಮಾಣದ ಘಟ್ಟವಾಗಿದ್ದಿತು. ಹರಿಯುವ ನದಿಗೆ ಹಾಕಿದ ಅಡ್ಡಗೋಡೆ, ಬಿಸಿಲು-ಮಳೆಗಳಿಂದ ರಕ್ಷಿಸಿಕೊಳ್ಳಲು ಮಾಡಿಕೊಂಡ ವಾಸಸ್ಥಳ ನಿರ್ಮಾಣ, ಕೃಷಿಗೆ ಬೇಕಾದ ಸೌಲಭ್ಯಗಳನ್ನು ರೂಪಿಸಿಕೊಂಡದ್ದು , ಬೇಕಾದ ಆಹಾರವನ್ನು ಪಡೆಯುವಿಕೆ, ಬೆಂಕಿಯನ್ನು ಉಪಯೋಗಿಸಿಕೊಂಡ ರೀತಿ - ಮುಂತಾದವು ನಿರ್ಮಾಣದ ಘಟ್ಟದಲ್ಲಿನ ಪ್ರಾಚೀನ ಮಾನವನ ಅನ್ವೇಷಣೆಗಳಾಗಿದ್ದಿತು. ಈ ಅನ್ವೇಷಣೆಗಳಿಂದ ಪ್ರಾಚೀನ ಮಾನವನ ಅಲೆಮಾರಿತನ ಜೀವನ ಅಂತ್ಯವಾಗಿ ಒಂದು ಕಡೆ ನೆಲೆಯೂರಿದೆ.

ಮಾನವನ ದೇಹದಲ್ಲಿನ ಅಂಗಾಂಗಗಳ ಮೂಲಭೂತ ಕಾರ್ಯಗಳು, ಜೀವನಾವಶ್ಯಕತೆ ಪೂರೈಸಿಕೊಳ್ಳುವುದಕ್ಕೆ ಸಹಾಯಕವಾಗಿವೆ. ಅವುಗಳಲ್ಲಿನ ಕೆಲವು ಅಂಗಗಳನ್ನು ಬಳಸಿಕೊಂಡು 'ಭಾಷೆ'ಯನ್ನು ಸೃಷ್ಟಿಸಿಕೊಂಡದ್ದು ಮಾನವನ ಮಹತ್ವವಾದ ಅನ್ವೇಷಣೆಯಾಗಿದೆ. ಭಾಷೆಯನ್ನು ಸೃಷ್ಟಿಸಿಕೊಂಡಿರುವಿಕೆಯು ಮಾನವ ಮತ್ತು ಪ್ರಾಣಿ ಪ್ರತ್ಯೇಕಗೊಳ್ಳಲು ಒಂದು ಸಾಧನವಾಗಿದೆ. ಭಾಷೆಯನ್ನು ವ್ಯವಹಾರಕ್ಕೆ ಮಾತ್ರ ಬಳಸದೆ, ತಾನು ಬಳಸುವ, ತನ್ನ ಸುತ್ತಮುತ್ತಲಿನ ಎಲ್ಲಾ ವಸ್ತುಗಳನ್ನು, ವ್ಯಕ್ತಿಗಳನ್ನು, ಸ್ಥಳಗಳನ್ನು, ಪ್ರಾಣಿಗಳನ್ನು ಪ್ರತ್ಯೇಕವಾಗಿ ಗುರುತಿಸಲು ಪ್ರಾರಂಭಿಸಿದನು. ಈ ರೀತಿ ಪ್ರತ್ಯೇಕವಾಗಿ ಗುರುತಿಸಿಕೊಳ್ಳಲು ಬಳಸಿಕೊಂಡ 'ಸಂಕೇತ'ವನ್ನು 'ಹೆಸರು' ಎಂದು ಕರೆಯಬಹುದು. ಹೀಗೆ 'ಹೆಸರು ನೀಡುವಿಕೆ' ವಿಧಾನವನ್ನು "ನಾಮನಿರ್ದೇಶನ", "ನಾಮಕರಣ" ಎಂದು ಕರೆಯಲಾಗಿದೆ. ಹೆಸರು ನೀಡುವಿಕೆಗೆ ಬಳಸುವ ವಸ್ತುಗಳು (Themes) ವೈವಿಧ್ಯತೆಗಳಿಂದ ಕೂಡಿದೆ. ತನ್ನ ಕಣ್ಮುಂದೆ ಇರುವ, ಮರೆಯಾಗಿರುವ ವಸ್ತು, ವ್ಯಕ್ತಿ ಹಾಗೂ ಸ್ಥಳವನ್ನು ಗುರುತಿಸಿಕೊಳ್ಳಲು ಅಥವಾ ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಲು ಹೆಸರು ನೀಡುವಿಕೆಯು ಪ್ರಯೋಜನಕಾರಿಯಾಯಿತು.

ನಾಮನಿರ್ದೇಶನ ಪ್ರಕ್ರಿಯೆಯಲ್ಲಿ ಮುಖ್ಯವಾಗಿ ಮೂರು ವಿಧಗಳನ್ನು ಗುರುತಿಸಬಹುದು. ವಸ್ತುಗಳಿಗೆ ನೀಡಿದ ಹೆಸರು ''ವಸ್ತುನಾಮಗಳು'', ವ್ಯಕ್ತಿಗಳಿಗೆ ನೀಡಿದ ಹೆಸರು ''ವ್ಯಕ್ತಿನಾಮಗಳು'' ಹಾಗೂ ಸ್ಥಳಗಳಿಗೆ ನೀಡಿದ ಹೆಸರನ್ನು ''ಸ್ಥಳನಾಮಗಳು'' ಎಂದು ಕರೆಯಲಾಗಿದೆ. ವ್ಯಕ್ತಿನಾಮಗಳು ವೈಯುಕ್ತಿಕವಾಗಿದ್ದು, ಸ್ಥಳನಾಮಗಳು ಒಂದು ಸಮೂಹಕ್ಕೆ ಸೇರಿದವುಗಳಾಗಿವೆ.[೨] 'ವ್ಯಕ್ತಿನಾಮಗಳು' ವ್ಯಕ್ತಿಯ ಜೊತೆಯಲ್ಲಿಯೇ ಮರೆಯಾಗಬಹುದು. 'ಸ್ಥಳನಾಮಗಳು' ಶಾಶ್ವತವಾಗಿ ಉಳಿದಿರುತ್ತವೆ. ಸ್ಥಳನಾಮವು ಕಿವಿಗೆ ಕೇಳಿಸಿಕೊಂಡ ಕೂಡಲೇ, ನಾವು ಕಂಡು-ಕೇಳಿದ ಆ ಊರಿನ ಭೌಗೋಳಿಕ, ಸಾಮಾಜಿಕ, ಧಾರ್ಮಿಕ ಹಾಗೂ ಜೀವನ ವಿಧಾನಗಳೆಲ್ಲವೂ ನಮ್ಮ ಕಲ್ಪನೆಗೆ ಬರುವಂತೆ ಪ್ರೇರೇಪಿಸುವ ವಿಶಿಷ್ಟ ಶಕ್ತಿಯನ್ನು ಒಳಗೊಂಡಿರುತ್ತದೆ. ಮಾನವನ ವಾಸದ ನೆಲೆಗಳಾಗಿದ್ದ ಹಟ್ಟಿ, ಹಳ್ಳಿ, ಗ್ರಾಮ ಮುಂತಾದವುಗಳ ನಿರ್ಮಾಣವು ''ಸಾಮಾಜಿಕ ವಿಕಾಸದ ಮಹತ್ವದ ಹಂತ. ಅನಾಗರಿಕ ಮಾನವರು ನಾಗರಿಕತೆಯೆಡೆಗೆ ಮುನ್ನಡೆದ ಹೆಜ್ಜೆಯನ್ನದು ಗುರುತಿಸುತ್ತದೆ.''[೩] ಒಂದು ನಾಡಿನ ವಿವರಗಳನ್ನು ತಿಳಿಯಲು ಊರ ಹೆಸರುಗಳು ಅತ್ಯಂತ ಮಹತ್ವದ ಸಾಧನವಾಗಿದೆ.

ಭಾಷೆಯ ಆರಂಭದ ಘಟಕಗಳು 'ನಾಮಗಳು' (ಹೆಸರುಗಳು) ಆಗಿರುತ್ತವೆಂಬುದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ.[೪] ಆದುದರಿಂದ ನಾಮಾಧ್ಯಯನವು ಮಹತ್ವಪಡೆದುಕೊಂಡಿದೆ. ಸ್ಥಳನಾಮಾಧ್ಯಯನವು ಮಾನವನ ಇತಿಹಾಸವನ್ನು, ಭಾಷಾ ಬೆಳವಣಿಗೆಯನ್ನು, ಭೌಗೋಳಿಕ ಸ್ಥಿತಿಯನ್ನು ತಿಳಿಯಲು ಸಹಾಯಕವಾಗಿದೆ.

'ಹೆಸರುಗಳು' ಭಾಷೆಯಲ್ಲಿನ 'ಸಂಕೇತ'ಗಳಾಗಿದ್ದು, ಮಾನವನ ಮನಸ್ಸಿನಲ್ಲಿ ಭಾವನೆಗೆ ಅವಕಾಶ ಮಾಡಿಕೊಡುವ 'ವಿಶಿಷ್ಟ ಶಕ್ತಿಯನ್ನು ಹೊಂದಿದೆ. ವಸ್ತುವಿನ, ವ್ಯಕ್ತಿಯ ಹಾಗೂ ಸ್ಥಳದ ಹೆಸರುಗಳು, ಅವುಗಳ ಗುಣಸ್ವರೂಪವನ್ನು ಅನನ್ಯವಾದ ವೈಶಿಷ್ಟ್ಯಗಳನ್ನು ಹಾಗೂ ಸಂಸ್ಕೃತಿಯ ಸತ್ವಗಳನ್ನು ಪ್ರತಿಬಿಂಬಿಸುವ ಗುಣವನ್ನು ಹೆಸರುಗಳು ಹೊಂದಿರುತ್ತವೆ.[೫] ಆಯಾ ಕಾಲದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಭೌತಿಕ ಸ್ಥಿತಿಗಳಿಗನುಗುಣವಾಗಿ ಹೆಸರುಗಳು ಸೃಷ್ಟಿಯಾಗಿರುತ್ತವೆ. ಒಂದು ಸ್ಥಳದಿಂದ ಮತ್ತೊಂದು ಸ್ಥಳವನ್ನು ಪ್ರತ್ಯೇಕಿಸಿಕೊಳ್ಳಲು ಸ್ಥಳನಾಮಗಳು ಸಹಾಯಕವಾಗಿವೆ. ಸ್ಥಳನಾಮಗಳು ನಿರ್ದಿಷ್ಟ ಭೂ ಪ್ರದೇಶವನ್ನು ಗುರುತಿಸುವ 'ಸಂಕೇತ'ಗಳಾಗಿ ಕಾರ್ಯ ನಿರ್ವಹಿಸುತ್ತಿರುತ್ತವೆ. ಇವುಗಳು ಸಮಾಜದ ಮೂಲಘಟಕಗಳಾಗಿವೆ. ''ಸ್ಥಳನಾಮಗಳ ಸೃಷ್ಟಿ ಪುರಾತನ ಕಾಲದ ಜೀವಸೃಷ್ಟಿಯೊಂದಿಗೆ ಬೆಳೆದು ಬಂದದ್ದು.''[೬] ಹೆಸರನ್ನು ಸೂಚಿಸುವ ಪದಗಳೂ 'ನಾಮಪದ' ಪದಗಳ ಗುಂಪಿಗೇ ಸೇರುತ್ತವೆ.

ರೂಢಿಯಿಂದ ಬಂದ ಹೆಸರುಗಳು 'ರೂಢನಾಮ'ಗಳೆಂದೂ, ಮಾನವನಿಂದ ನಾಮಕರಣಗೊಂಡ ಹೆಸರುಗಳನ್ನು ಅಂಕಿತನಾಮಗಳೆಂದೂ, ವಸ್ತುವಿನ ಗುಣಕ್ಕೆ ಅನ್ವಯಿಸುವ ಹೆಸರುಗಳನ್ನು ಅನ್ವರ್ಥನಾಮಗಳೆಂದೂ, ಭಾವನೆಗಳನ್ನು ಸೂಚಿಸುವ ನಾಮಗಳು ಭಾವನಾಮಗಳೆಂದೂ, ವಸ್ತುಗಳ ಗುಂಪಿಗೆ ಇಟ್ಟ ಹೆಸರುಗಳನ್ನು ಸಂಘನಾಮಗಳೆಂದೂ ಗುರುತಿಸಬಹುದು.

''ಯಾವುದೇ ಭಾಷೆಯ ಆರಂಭದ ಘಟಕಗಳು ನಾಮ''ಗಳೇ ಆಗಿವೆಯೆಂದು ವಿದ್ವಾಂಸರು ಹೇಳುತ್ತಾರೆ.[೭] ''ನಾಮಮೂಲಸ್ಯ ವ್ಯವಹಾರ ಹೇತುಃ'' - ಎಲ್ಲಾ ವ್ಯವಹಾರಗಳಿಗೂ ಹೆಸರುಗಳೇ ಮೂಲವೆಂಬುದು. ದೇವರುಗಳು

ಬೃಹಸ್ಪತಿಯ ಅಭಿಪ್ರಾಯವಾಗಿದೆ. ಸಮೂಹದಿಂದ ವ್ಯಕ್ತಿಯನ್ನು ಪ್ರತ್ಯೇಕಿಸಿಕೊಳ್ಳಲು ಇರುವ ಸಾಧನವೆಂದರೆ ವ್ಯಕ್ತಿನಾಮಗಳು. ವ್ಯಕ್ತಿನಾಮಗಳು ಅಸಂಖ್ಯಾತ ಹಾಗೂ ವೈವಿಧ್ಯಮಯವಾದುದು. ವ್ಯಕ್ತಿನಾಮಗಳನ್ನು ವ್ಯಕ್ತಿನಾಮ ಮತ್ತು ಕುಟುಂಬನಾಮಗಳೆಂದು ಪ್ರತ್ಯೇಕಿಸಬಹುದು. ಆದರೆ ಎಲ್ಲಾ ಹೆಸರುಗಳಲ್ಲಿಯೂ ಕುಟುಂಬನಾಮ ಇರುವುದಿಲ್ಲ. ವ್ಯಕ್ತಿನಾಮಗಳು ಒಂದು ಕುಟುಂಬದ ಸಾಂಸ್ಕೃತಿಕ ಹಿನ್ನೆಲೆ ಹಾಗೂ ಮನೋಭಾವವನ್ನು ಒಳಗೊಂಡಿರುತ್ತವೆ. ವ್ಯಕ್ತಿನಾಮಗಳ ಅಧ್ಯಯನವನ್ನು 'ವ್ಯಕ್ತಿನಾಮಾಧ್ಯಯನ ಶಾಸ್ತ್ರ'ವೆಂದು ಕರೆಯಬಹುದು. ವ್ಯಕ್ತಿನಾಮ ಸೃಷ್ಟಿಯ ಹಿಂದೆ ಮಾನವನ ಬೌದ್ಧಿಕತೆಯ ಆಲೋಚನೆಯಿರುತ್ತದೆ. ಪೂರ್ವದ ವ್ಯಕ್ತಿನಾಮಗಳಲ್ಲಿ ಕುಲನಾಮ, ಜಾತಿ, ವೃತ್ತಿ, ಲಿಂಗ ಮುಂತಾದ ಅಂಶಗಳು ಅಡಕವಾಗಿರುತ್ತಿತ್ತು. ಆಧುನಿಕ ವ್ಯಕ್ತಿನಾಮಗಳು ಯಾದೃಚ್ಛಿಕವಾಗಿದ್ದು, ಮೇಲಿನ ಲಕ್ಷಣಗಳನ್ನು ಗುರುತಿಸಲು ಸಾಧ್ಯವಿಲ್ಲ. ಸಾಂಪ್ರದಾಯಿಕವಾದ ಹೆಸರುಗಳಲ್ಲಿ ಇಂತಹ ಲಕ್ಷಣಗಳನ್ನು, ಸ್ಥಳನಾಮಗಳಂತೆಯೇ ವಿಶಿಷ್ಟಾಂಶ ಹಾಗೂ ಸಾಮಾನ್ಯ ವಾರ್ಗಿಕಗಳನ್ನು ಗುರುತಿಸಬಹುದು.

ಪ್ರಾಚೀನ ಮಾನವನು ತಾನು ವಾಸವಾಗಿದ್ದ ಸ್ಥಳಕ್ಕೆ, ತಾನೇ ಹೆಸರನ್ನು ನೀಡಿದುದಕ್ಕಿಂತ ಮುಖ್ಯವಾಗಿ ನೆರೆಹೊರೆಯವರು ಈ ಸ್ಥಳವನ್ನು ಗುರುತಿಸಲು ಪ್ರಯತ್ನಿಸಿರುವ ಸಾಧ್ಯತೆ ಇದೆ. ಸುತ್ತಮುತ್ತಲಿನ ಸ್ಥಳವನ್ನು ಗುರುತಿಸಿಕೊಳ್ಳಲು ಆ ಪ್ರದೇಶದಲ್ಲಿನ ವಿಶೇಷ ಲಕ್ಷಣಗಳನ್ನು ಸಂಕೇತಗಳನ್ನಾಗಿ ಬಳಸಿಕೊಂಡಿರುತ್ತಾನೆ. ಈ ಸಂಕೇತಗಳು ಪ್ರಕೃತಿಯಲ್ಲಿನ ಬೆಟ್ಟಗುಡ್ಡ, ಕಾಡು, ನದಿ, ದಿಕ್ಕು ಹಾಗೂ ಜನರ ಕಸುಬು, ಜನಜೀವನ ಮುಂತಾದವುಗಳಾಗಿವೆ. ಸ್ಥಳ ನಾಮಗಳಲ್ಲಿ ಬಳಕೆಯಾಗಿರುವ ವಸ್ತುಗಳು (Themes) ಆ ಪ್ರದೇಶಕ್ಕೆ ನೇರ ಅಥವಾ ಪರೋಕ್ಷವಾಗಿ ಸಂಬಂಧಿಸಿದ್ದಾಗಿರುತ್ತಿತ್ತೇ ಹೊರತು ಯಾದೃಚ್ಛಿಕವಾದುದಾಗಿರಲಿಲ್ಲ.[೭] ಸ್ಥಳನಾಮ ನಿರ್ದೇಶನದಲ್ಲಿ ಭೌಗೋಳಿಕ ಅಂಶಗಳು ಅತ್ಯಂತ ಮೊದಲಿನ ಬಳಕೆಯಾಗಿವೆ.[೮] ನಂತರದಲ್ಲಿ ವ್ಯಕ್ತಿನಾಮಗಳನ್ನು ಬಳಸಿಕೊಂಡು ಸ್ಥಳನಾಮ ನಿರ್ದೇಶನ ಮಾಡಲಾಗಿದೆ. ತನಗೆ ಅವಶ್ಯವಿರುವ ಸ್ಥಳಗಳಿಗೆ ಮಾತ್ರ ನಾಮನಿರ್ದೇಶನ ಮಾಡುವ ಪ್ರವೃತ್ತಿಯನ್ನು ಮಾನವನು ಅನುಸರಿಸಿದ್ದಾನೆ. ಮಾನವನು ವಾಸಿಸುವ ಸ್ಥಳಗಳನ್ನು 'ವಸತಿಸೂಚಿ ಸ್ಥಳನಾಮ'ಗಳೆಂದು, ಇತರೆ ಪ್ರದೇಶವನ್ನು 'ನಿರ್ವಸತಿ ಪ್ರದೇಶಗಳೆಂದು ಪ್ರತ್ಯೇಕಿಸಲಾಗಿದೆ.

ಹೆಸರುಗಳನ್ನು ವ್ಯಾಕರಣ ಪದ್ಧತಿಗನುಸಾರವಾಗಿ ಅಧ್ಯಯನ ಮಾಡುವ ಶಾಸ್ತ್ರವನ್ನು 'ನಾಮಾಧ್ಯಯನ ಶಾಸ್ತ್ರ'ವೆಂದು ಕರೆಯಲಾಗಿದೆ. ನಾಮಾಧ್ಯಯನ ಶಾಸ್ತ್ರದ ಒಂದು ಭಾಗವೇ ಸ್ಥಳನಾಮಾಧ್ಯಯನ ಶಾಸ್ತ್ರವಾಗಿದೆ. ಸ್ಥಳನಾಮಾಧ್ಯಯನ ಶಾಸ್ತ್ರವನ್ನು ಇಂಗ್ಲಿಷ್‌ನಲ್ಲಿ 'ಟೊಪೊನಮಿ' ಎಂದು ಕರೆಯಲಾಗಿದ್ದು, 'ಟೋಪೋಸ್' ಮತ್ತು 'ನೊಮಸ್' ಎಂಬ ಗ್ರೀಕ್ ಪದಗಳಿಂದ 'ಟೊಪೊನಮಿ' ಪದ ನಿಷ್ಪನ್ನವಾಗಿದೆ. 'ಟೋಪೋಸ್' – 'ಸ್ಥಳ'ವನ್ನು ಹಾಗೂ 'ನೊಮಸ್' – 'ಅಧ್ಯಯನ' ಎಂಬ ಅರ್ಥವನ್ನು ಸೂಚಿಸುತ್ತವೆ. 'ಟೊಪೋನಮಿ' (ಟೊಪೋನಿಮಿ) ಪದಕ್ಕೆ 'ಒಂದು ಪ್ರದೇಶದ ಸ್ಥಳಗಳ ಹೆಸರುಗಳು', 'ಸ್ಥಳನಾಮ', 'ಊರು ಹೆಸರುಗಳು', ಎಂಬ ಅರ್ಥಗಳಿವೆ.[೯]

ಸ್ಥಳನಾಮಗಳಲ್ಲಿನ ವಿಶಿಷ್ಟ ಅಂಶಗಳ ಬಳಕೆಗೆ ಯಾವುದೋ ನಿರ್ದಿಷ್ಟ ಕಾರಣವಿರುತ್ತದೆ. ಭೌಗೋಳಿಕ, ಚಾರಿತ್ರಿಕ, ಪುರಾತತ್ವ ಹಾಗೂ ಜಾನಪದೀಯ ವಸ್ತುವನ್ನು ತನ್ನ ಒಡಲಿನಲ್ಲಿ ಸ್ಥಳನಾಮ ಒಳಗೊಂಡಿರುತ್ತದೆ. ಭೌಗೋಳಿಕ

ಹಿನ್ನೆಲೆಯಲ್ಲಿನ ಸ್ಥಳನಾಮಗಳಲ್ಲಿ, ತನ್ನ ಪರಿಸರದ ಬೆಟ್ಟ-ಗುಡ್ಡ ಹಳ್ಳ-ದಿಣ್ಣೆ, ಮಣ್ಣಿನ ಗುಣ, ಸ್ವಾಭಾವಿಕ ಸ್ಥಿತಿ - ಮುಂತಾದ ಲಕ್ಷಣಗಳನ್ನು ಒಳಗೊಂಡಿರುತ್ತದೆ. ಚಾರಿತ್ರಿಕ ಹಿನ್ನೆಲೆಯಲ್ಲಿ ಸೃಷ್ಟಿಯಾದ ಸ್ಥಳನಾಮಗಳು, ಪೂರ್ವೇತಿಹಾಸ, ಆಡಳಿತ, ರಾಜಮನೆತನ ವಿವರ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಸ್ಥಿತಿ, ಪ್ರದೇಶಗಳ ವಿಸ್ತಾರವನ್ನು ಪ್ರತಿಬಿಂಬಿಸುತ್ತವೆ. ಸ್ಥಳನಾಮ ಸೃಷ್ಟಿಯ ಹಿನ್ನೆಲೆಯು ಗಿಡ-ಮರ, ಪ್ರಾಣಿ-ಪಕ್ಷಿ, ವ್ಯಕ್ತಿನಾಮಗಳು, ಧಾರ್ಮಿಕ ಕಾರಣಗಳು, ಜಾತಿ-ಬುಡಕಟ್ಟು ವೃತ್ತಿ, ಸೈನಿಕ ಕೇಂದ್ರಗಳು, ದಿಕ್ಕುಗಳು, ವಿವಿಧ ಮನೆತನಗಳ ವಿವರವನ್ನು ಒಳಗೊಂಡಿರುತ್ತವೆ. ಸ್ಥಳನಾಮಗಳ ಸಾಂಸ್ಕೃತಿಕ ಲಕ್ಷಣಗಳನ್ನು ಪಾಣಿನಿಯು ಗುರುತಿಸಿದ್ದಾನೆ.[೧೦] ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಸ್ಥಳನಾಮಗಳ ವೈಜ್ಞಾನಿಕ ಅಧ್ಯಯನವು ಪ್ರಾರಂಭವಾಯಿತು.

ಜರ್ಮನಿಯ ಗಾತ್‌ಫ್ರೀಡ್ ವಿಲ್‌ಹೆಲ್ಮ್ ಲೀಬ್ನಿಜ್ ವೈಜ್ಞಾನಿಕ ವಿಧಾನದಲ್ಲಿ ಇಂಗ್ಲಿಷ್ ಸ್ಥಳನಾಮಗಳನ್ನು ಅಧ್ಯಯನ ಮಾಡಿದ ಶ್ರೇಷ್ಠ ವಿದ್ವಾಂಸರಾಗಿದ್ದಾರೆ. ''ಸ್ಥಳನಾಮಗಳು ಅರ್ಥಗರ್ಭಿತವಾದವುಗಳೆಂದೂ, ಅವುಗಳ ಪ್ರಾಚೀನ ರೂಪಗಳಿಂದ ಅರ್ಥವನ್ನು ನಿರ್ಣಯಿಸ ಬಹುದೆಂದು''[೧೧] ಅಭಿಪ್ರಾಯಪಟ್ಟಿದ್ದಾರೆ. ಇಂಗ್ಲೆಂಡಿನ ಸ್ಕೀಟ್, ಎ.ಎಚ್. ಸ್ಮಿತ್, ಗಾರ್ಡಿನರ್, ಆಟ್ಲ, ಸ್ಟ್ಯೂಟನ್ ಡೌಜತ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಸ್ಥಳನಾಮಶಾಸ್ತ್ರದ ಮಹತ್ವವನ್ನು ಎತ್ತಿಹಿಡಿದಿದ್ದಾರೆ. ಭಾರತದಲ್ಲಿ ನಿಧಾನಗತಿಯಲ್ಲಿ ಸ್ಥಳನಾಮ ಅಧ್ಯಯನವು ಪ್ರಾರಂಭವಾದರೂ, ಹೆಚ್ಚಿನ ಮಹತ್ವ ದೊರೆಯಿತು. ವಿಶ್ವವಿದ್ಯಾಲಯದ ಅನೇಕ ವಿಭಾಗಗಳು ಹಾಗೂ ಇತರೆ ಸಂಸ್ಥೆಗಳು ಸ್ಥಳನಾಮ ವ್ಯಾಸಂಗಕ್ಕೆ ಉತ್ತೇಜನ ನೀಡುತ್ತಿವೆ. ಶಂ.ಬಾ. ಜೋಶಿಯವರು ಸಂಸ್ಕೃತಿಯ ಚಹರೆಯನ್ನು ಗುರುತಿಸುವುದರ ಮೂಲಕ ಕನ್ನಡದ ಗಡಿಯನ್ನು ಗುರುತಿಸುವ ಪ್ರಯತ್ನ ಮಾಡಿದರು. ಮಾನವ ಜೀವನದ ಆರಂಭಕಾಲದ ನೆಲೆಗಳನ್ನು ಗುರುತಿಸುತ್ತಾ, ಹೆಸರುಗಳಿಗೆ ಮಹತ್ವ ತಂದುಕೊಟ್ಟ ಪ್ರಯತ್ನ ಕರ್ನಾಟಕದಲ್ಲಿ ಸ್ಥಳನಾಮಾಧ್ಯಯನದ ಆರಂಭದ ಘಟ್ಟವಾಯಿತು. ಕೆಮ್ತೂರು ರಘುಪತಿಭಟ್ಟರು, 'ತುಳುನಾಡಿನ ಸ್ಥಳನಾಮಗಳು' ಎಂಬ ವಿಷಯದ ಸಂಶೋಧನೆಯನ್ನು ಮಾಡಿದ ನಂತರ, ಕನ್ನಡ ಭಾಷೆಯ ಸ್ಥಳನಾಮಾಧ್ಯಯನದಲ್ಲಿ ವಿವಿಧ ಆಯಾಮಗಳು ಕಂಡುಬಂದವು. ಸ್ಥಳನಾಮಗಳನ್ನು ಭಾಷಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವಿಕೆಯ ಅವಶ್ಯಕತೆ ಇದೆಯೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

## ೧.೧ ಉದ್ದೇಶ

''ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು - ಒಂದು ಅಧ್ಯಯನ'' - ಇದು ಸಂಶೋಧನಾ ಮಹಾ ಪ್ರಬಂಧದ ಶೀರ್ಷಿಕೆಯಾಗಿದೆ. ಬೆಂಗಳೂರು ಕರ್ನಾಟಕದ ರಾಜಧಾನಿಯಾಗಿ, ಹೆಚ್ಚಿನ ವಿಸ್ತಾರ ಹಾಗೂ ಜನಸಾಂದ್ರತೆಯನ್ನು ಹೊಂದಿರುವ ಜಿಲ್ಲಾ ಹಾಗೂ ಆಡಳಿತ ಕೇಂದ್ರವಾಗಿ ಬೆಳೆದಿದೆ. ಹಿಂದಿನಿಂದಲೂ ಬೆಂಗಳೂರು ಐತಿಹಾಸಿಕವಾಗಿ ಹಾಗೂ ರಾಜಕೀಯವಾಗಿ ಮಹತ್ವವನ್ನು ಪಡೆದಿದ್ದ ಕೇಂದ್ರಸ್ಥಳವಾಗಿದೆ. ವಸತಿ ಪ್ರದೇಶವಾಗಿದ್ದ ಬೆಂಗಳೂರು, ಬ್ರಿಟಿಷರ ಹಾಗೂ ಮೈಸೂರು ಅರಸರ ಆಡಳಿತ ಕೇಂದ್ರವಾಗಿದ್ದಿತು. ಸ್ವಾತಂತ್ರ್ಯಾನಂತರದಲ್ಲಿ ಬೆಂಗಳೂರು, ನಗರ ಜಿಲ್ಲೆಯ ಮೂರು ಹಾಗೂ ಗ್ರಾಮಾಂತರ ಜಿಲ್ಲೆಯ ಎಂಟು ತಾಲ್ಲೂಕುಗಳು ಸೇರಿ ಜಿಲ್ಲಾ ಆಡಳಿತ ಕೇಂದ್ರ ಹಾಗೂ ಕರ್ನಾಟಕದ ರಾಜಧಾನಿಯಾಯಿತು. ಬಹು ವ್ಯಾಪ್ತಿಯ ಹಾಗೂ ಹೆಚ್ಚಿನ ಜನಸಾಂದ್ರತೆಯ

ದೃಷ್ಟಿಯಿಂದ ೧೯೮೬ರಲ್ಲಿ 'ಬೆಂಗಳೂರು' ನಗರ ಹಾಗೂ ಗ್ರಾಮಾಂತರ ಜಿಲ್ಲೆಯೆಂದು ಎರಡು ಪ್ರತ್ಯೇಕ ಜಿಲ್ಲೆಗಳಾಗಿ ವಿಂಗಡಿಸಲಾಗಿದೆ. ಬೆಂಗಳೂರು ನಗರವನ್ನು ಉತ್ತರ ಹಾಗೂ ದಕ್ಷಿಣ ತಾಲ್ಲೂಕುಗಳೆಂದು ವಿಂಗಡಿಸಿಕೊಂಡು, ಆನೇಕಲ್ ತಾಲ್ಲೂಕನ್ನು ಸೇರಿಸಿಕೊಂಡು 'ಬೆಂಗಳೂರು ನಗರ' ಜಿಲ್ಲೆಯನ್ನಾಗಿ ರೂಪಿಸಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ದೇವನಹಳ್ಳಿ, ದೊಡ್ಡಬಳ್ಳಾಪುರ, ಚನ್ನಪಟ್ಟಣ, ಕನಕಪುರ, ರಾಮನಗರ, ಮಾಗಡಿ, ನೆಲಮಂಗಲ ಹಾಗೂ ಹೊಸಕೋಟೆ ಸೇರಿದಂತೆ ಎಂಟು ತಾಲ್ಲೂಕುಗಳನ್ನು ಒಳಗೊಂಡಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ೩೫ ಹೋಬಳಿ ಕೇಂದ್ರಗಳನ್ನೊಳಗೊಂಡಿದ್ದು, ಕರ್ನಾಟಕದ ಆಗ್ನೇಯ ಭಾಗದಲ್ಲಿದೆ. ಪೂರ್ವೋತ್ತರ ದಿಕ್ಕುಗಳಲ್ಲಿ ಕೋಲಾರ, ಪಶ್ಚಿಮದಲ್ಲಿ ತುಮಕೂರು, ದಕ್ಷಿಣದಲ್ಲಿ ಮೈಸೂರು, ನೈರುತ್ಯದಲ್ಲಿ ಮಂಡ್ಯ, ಆಗ್ನೇಯದಲ್ಲಿ ತಮಿಳುನಾಡಿನ ಧರ್ಮಪುರಿ ಜಿಲ್ಲೆಗಳಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಆವೃತ್ತಗೊಂಡಿದೆ. ಆದುದರಿಂದ ಕನ್ನಡ ಭಾಷೆಯ ಮೇಲೆ ತೆಲುಗು, ತಮಿಳು ಭಾಷೆಯ ಪರಸ್ಪರ ಪ್ರಭಾವ ಹೊಂದಿದ ಉಪಭಾಷೆಗಳನ್ನು ಈ ಭಾಗಗಳಲ್ಲಿ ಗುರುತಿಸಬಹುದಾಗಿದೆ. ಈ ಭಾಷೆಯ ಪ್ರಭಾವ ಭಾಷೆ ಮೇಲೆ ಮಾತ್ರವಲ್ಲದೆ, ಜನಜೀವನ, ವ್ಯಕ್ತಿನಾಮ, ಸ್ಥಳನಾಮ ಹಾಗೂ ಧಾರ್ಮಿಕ ಆಚರಣೆ ಮುಂತಾದವುಗಳ ಮೇಲೆಯೂ ನಡೆದಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳಲ್ಲಿನ ವಿಶಿಷ್ಟ ಘಟಕದ ಹಿನ್ನೆಲೆಯಲ್ಲಿ, ಸ್ಥಳನಾಮಗಳ ನಿಷ್ಪತ್ತಿಯ ಅಧ್ಯಯನ ಮಾಡುವುದು ಅವಶ್ಯವಾಗಿದ್ದಿತು. ಪ್ರಸ್ತುತ ಮಹಾಪ್ರಬಂಧದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಅನುಲಕ್ಷಿಸಿದಂತೆ ಅಧ್ಯಯನ ಮಾಡಲಾಗಿದೆ. ಅಧ್ಯಯನಕ್ಕೆ ತೊಡಗಿಕೊಂಡಾಗ, ಇಲ್ಲಿಯವರೆಗಿನ ಉಪಲಬ್ಧ ಕೃತಿಗಳಲ್ಲಿನ ಮಾಹಿತಿ, ಪ್ರಕಟಿತ ಸಂಶೋಧನಾ ನಿಬಂಧಗಳನ್ನು ಗಮನಿಸಲಾಗಿದೆ.

ಬೆಂಗಳೂರು ಗ್ರಾಮಾಂತರಜಿಲ್ಲೆಯ ಸ್ಥಳನಾಮಗಳ ಅಧ್ಯಯನವನ್ನು ಪ್ರಸ್ತುತ ಸಂಶೋಧನೆಯು ಒಳಗೊಂಡಿದೆ. ಅಧ್ಯಯನಕ್ಕೆ ಸಂಬಂಧಪಟ್ಟಂತೆ ಅಧ್ಯಾಯಗಳನ್ನು ವಿಂಗಡಿಸಿಕೊಂಡಿದ್ದು, ಸಂಶೋಧನೆಗೆ ಒಳಗು ಮಾಡಿಕೊಂಡಿರುವ ಅಂಶಗಳನ್ನು ವಿವರಿಸಲಾಗಿದೆ.

ಬೆಂಗಳೂರು ಗ್ರಾಮಾಂತರ ಪ್ರದೇಶವು ಅನೇಕ ಪಾಳೆಯಗಾರರು, ರಾಜರು ಹಾಗೂ ಬ್ರಿಟಿಷರ ಆಡಳಿತಕ್ಕೆ ಒಳಗಾಗಿದ್ದಿತು. ಈ ಕಾರಣದಿಂದಾಗಿ ಸ್ಥಳನಾಮಗಳು ಸ್ಥಿತ್ಯಂತರಗೊಂಡಿವೆ. ಸಂಸ್ಕೃತೀಕರಣ, ಪುನರ್ನಾಮಕರಣ, ಹ್ರಸ್ವೀಕರಣ, ಅನ್ಯಭಾಷಾ ಪ್ರಭಾವ ಮುಂತಾದವು ಸ್ಥಳನಾಮಗಳ ಸ್ಥಿತ್ಯಂತರಕ್ಕೆ ಕಾರಣವಾಗಿದ್ದು, ಪ್ರಸ್ತುತ ಮಹಾಪ್ರಬಂಧದಲ್ಲಿ ಈ ಕುರಿತು ಅಧ್ಯಯನ ಮಾಡಲಾಗಿದೆ.

ಪ್ರಸ್ತುತ ಮಹಾಪ್ರಬಂಧದಲ್ಲಿ 'ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳನ್ನು ವಿವಿಧ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಒಂಬತ್ತು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನ ನಡೆಸಲಾಗಿದೆ.

ಮೊದಲನೆಯ ಅಧ್ಯಾಯ ಪ್ರಸ್ತುತ ವಿಷಯದ ಅಧ್ಯಯನದ ಉದ್ದೇಶ, ಅಧ್ಯಯನಕ್ಕೆ ಒಳಗು ಮಾಡಿಕೊಂಡಿರುವ ವ್ಯಾಪ್ತಿ ಪರಿಮಿತಿ, ಅಧ್ಯಯನದಲ್ಲಿ ಅಳವಡಿಸಿಕೊಂಡಿರುವ ವಿಧಾನಗಳು ಹಾಗೂ ಕ್ಷೇತ್ರಕಾರ್ಯ ಅನುಭವ ವಿವರಗಳನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ಸ್ಥಳನಾಮಸಾಹಿತ್ಯಕ್ಕೆ ಸಂಬಂಧಿಸಿದಂತೆ ಈಗಾಗಲೇ ನಡೆದಿರುವ ಅಧ್ಯಯನಗಳನ್ನು ಗಮನಿಸಿ, ಪ್ರಕಟವಾಗಿರುವ ಕೃತಿಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಅಪ್ರಕಟಿತ ಎಂ.ಫಿಲ್. ಪ್ರಬಂಧ ಹಾಗೂ ಪಿಎಚ್.ಡಿ. ಮಹಾಪ್ರಬಂಧಗಳನ್ನು ಅಧ್ಯಯನದಲ್ಲಿ ಗಮನಿಸಲಾಗಿದೆ. ತಾಲ್ಲೂಕುಗಳನ್ನು ಪರಿಚಯಿಸುವ ಕೈಪಿಡಿಗಳನ್ನು ಗ್ರಹಿಸಲಾಗಿದೆ. ಭಾರತೀಯ ಸ್ಥಳನಾಮ ಸಂಸ್ಥೆಯು ಪ್ರಕಟಿಸಿರುವ ವಾರ್ಷಿಕ ಸಂಚಿಕೆಗಳನ್ನು ಗುರುತಿಸಿ ಅವಶ್ಯಕತೆ ಇರುವ ಕೆಲವು ಲೇಖನಗಳ ಪಟ್ಟಿಯನ್ನು ನೀಡಲಾಗಿದೆ. ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಗುವ ತ್ರೈಮಾಸಿಕ ಸಂಚಿಕೆ 'ಸಾಧನೆ'ಯಲ್ಲಿ ಪ್ರಕಟವಾಗಿರುವ ಲೇಖನಗಳನ್ನು ಗ್ರಹಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಸ್ಥಳನಾಮ ಅಧ್ಯಯನದಿಂದಾಗುವ ಪ್ರಯೋಜನಗಳನ್ನು ಗುರುತಿಸಲಾಗಿದೆ. ಸ್ಥಳನಾಮಗಳ ವೈಶಿಷ್ಟ್ಯಗಳನ್ನು ಕುರಿತು ವಿದ್ವಾಂಸರ ಅಭಿಪ್ರಾಯಗಳನ್ನು ನೀಡಲಾಗಿದೆ. ಸ್ಥಳನಾಮಗಳಲ್ಲಿ ಕಂಡುಬರುವ ವಿವಿಧ ವಾರ್ಗಿಕಗಳನ್ನು ಗುರುತಿಸಿ, ಅವುಗಳನ್ನು ಪ್ರತ್ಯೇಕ ಪಟ್ಟಿ ಮಾಡಿ, ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ಅಧ್ಯಯನ ಮಾಡಲು ವರ್ಗೀಕರಣ ವಿಧಾನವನ್ನು ಸಿದ್ಧಪಡಿಸಿಕೊಳ್ಳಲಾಗಿದೆ. ಕೆಲವು ವಿದ್ವಾಂಸರು ವಿಂಗಡಿಸಿಕೊಂಡಿರುವ ವರ್ಗೀಕರಣ ವಿಧಾನಗಳನ್ನು ಗುರುತಿಸಲಾಗಿದೆ. ಅಧ್ಯಯನ ವ್ಯಾಪ್ತಿ ಪ್ರದೇಶದ ಭೌಗೋಳಿಕ, ಸಾಂಸ್ಕೃತಿಕ, ಭಾಷಿಕ ಸ್ಥಿತಿಯನ್ನು ಸ್ಥೂಲವಾಗಿ ವಿವರಿಸಲಾಗಿದೆ. ವ್ಯಾಪ್ತಿಗೆ ಒಳಪಟ್ಟಿರುವ ತಾಲ್ಲೂಕು ಕೇಂದ್ರಗಳ ಸ್ಥಳನಾಮ ವಿಶ್ಲೇಷಣೆ ಹಾಗೂ ತಾಲ್ಲೂಕು ಕೇಂದ್ರಗಳ ಹಿನ್ನೆಲೆಯನ್ನು ಈ ಅಧ್ಯಯನವು ಒಳಗೊಂಡಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಸ್ಥಳನಾಮಗಳಲ್ಲಿ ಕಂಡುಬರುವ ಭಾಷಿಕ ಲಕ್ಷಣಗಳನ್ನು ಗುರುತಿಸಲಾಗಿದೆ. ಸ್ಥಳನಾಮಗಳಲ್ಲಿ ಬಳಕೆಯಾಗಿರುವ ಘಟಕಗಳಲ್ಲಿನ ಪರಿಮಾಣವನ್ನು ಇಲ್ಲಿ ಗುರುತಿಸಲಾಗಿದೆ. ಸ್ಥಳನಾಮಗಳಲ್ಲಿ ಒಂದು, ಎರಡು ಹಾಗೂ ಎರಡಕ್ಕಿಂತ ಹೆಚ್ಚು ಘಟಕಗಳನ್ನು ಹೊಂದಿರುವ ಮಾದರಿಗಳನ್ನು ಅಧ್ಯಯನದಲ್ಲಿ ಗುರುತಿಸಿ ವಿಶ್ಲೇಷಿಸಲಾಗಿದೆ. ವಿಶಿಷ್ಟ (ನಿರ್ದಿಷ್ಟ) ಹಾಗೂ ವಾರ್ಗಿಕಗಳೆರಡನ್ನೂ ಈ ಸ್ಥಳನಾಮಗಳಲ್ಲಿ ಗುರುತಿಸಲಾಗಿದೆ. ವಾರ್ಗಿಕಗಳೇ ನಿರ್ದಿಷ್ಟಗಳಾಗಿ ಬಳಕೆಯಾಗಿರುವುದರ ಮಾದರಿಗಳನ್ನು ಗುರುತಿಸಿ ವಿಶ್ಲೇಷಣೆ ಮಾಡಲಾಗಿದೆ. ಸಂಸ್ಕೃತ ಭಾಷೆಯ ಪ್ರಭಾವ ಸ್ಥಳನಾಮಗಳ ಮೇಲೆ ಇರುವುದನ್ನು ಗುರುತಿಸಲಾಗಿದ್ದು, ಈ ರೀತಿ 'ಸಂಸ್ಕೃತೀಕರಣ'ಗೊಂಡ ಸ್ಥಳನಾಮಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಸ್ಥಳನಾಮಗಳನ್ನು ಬದಲಾಯಿಸಿ ಮರುನಾಮಕರಣ ಮಾಡಿರುವುದನ್ನು, 'ಪುನರ್ನಾಮಕರಣ' ಶೀರ್ಷಿಕೆಯಡಿಯಲ್ಲಿ ಪಟ್ಟಿಮಾಡಿ ಅಧ್ಯಯನ ಮಾಡಲಾಗಿದೆ. ಹ್ರಸ್ವೀಕರಣಗೊಂಡ ಸ್ಥಳನಾಮಗಳನ್ನು ಅಧ್ಯಯನಕ್ಕೆ ಒಳಗು ಮಾಡಲಾಗಿದ್ದು, ಇಂಗ್ಲಿಶ್ ಅಕ್ಷರವನ್ನು ನಿರ್ದಿಷ್ಟಗಳನ್ನಾಗಿ ಬಳಸಿಕೊಂಡಿರುವುದರ ಮಾದರಿಗಳನ್ನು ಗುರುತಿಸಲಾಗಿದೆ. ಸ್ಥಳನಾಮಗಳ ಉಚ್ಚಾರಣಾರೂಪ (ಬಳಕೆಯ ರೂಪ)ಗಳನ್ನು ಗುರುತಿಸಲಾಗಿದೆ. ಬರವಣಿಗೆಯಲ್ಲಿ ಶಿಷ್ಟರೂಪವಿರುತ್ತದೆಯಾದರೂ ಉಚ್ಚಾರಣೆಯಲ್ಲಿ ಅಕ್ಷರಗಳು ಲೋಪವಾಗುವಿಕೆಯನ್ನು ಗುರುತಿಸಲಾಗಿದೆ. ಶಿಷ್ಟ ರೂಪದ ಸ್ಥಳನಾಮಗಳನ್ನು ಅಕ್ಷರಸ್ಥ ಹಾಗೂ ಅನಕ್ಷರಸ್ಥ ಸಮುದಾಯದವರ ಉಚ್ಚಾರಣೆಯ ನಡುವಿನ ವ್ಯತ್ಯಾಸದ ಮಾದರಿಗಳನ್ನು ಪಟ್ಟಿಮಾಡಲಾಗಿದೆ. ಸ್ವರಾಂತ್ಯ ಹಾಗೂ ವ್ಯಂಜನಾಂತ್ಯವಾಗಿರುವ

ವಾರ್ಗಿಕಗಳನ್ನು ಗುರುತಿಸಲಾಗಿದೆ. ಮಹಾಪ್ರಾಣಾಕ್ಷರದಿಂದ ಆರಂಭವಾಗುವ ಸ್ಥಳನಾಮಗಳನ್ನು ಗುರುತಿಸಿದ್ದು, ಛ, ಝ ಹಾಗೂ ಫ ವ್ಯಂಜನ ಹೊರತಾಗಿ ಬೇರೆ ಯಾವುದೇ ಮಹಾಪ್ರಾಣಾಕ್ಷರವೂ ಬಳಕೆಯಾಗದಿರುವುದು ಈ ಅಧ್ಯಯನದ, ಇದರ ಜೊತೆಗೆ ಪದಮಧ್ಯೆ ಠ, ಥ, ಫ, ಧ, ಭ ಮಹಾಪ್ರಾಣಾಕ್ಷರಗಳು ವಿಶೇಷವಾಗಿ ಬಳಕೆಯಾಗಿವೆ. ತೆಲುಗು ಭಾಷೆಯ ಪ್ರಭಾವದಿಂದ ರೂಪುಗೊಂಡ ಸ್ಥಳನಾಮಗಳನ್ನು ವಿಶ್ಲೇಷಣೆಗೆ ಒಳಗುಮಾಡಲಾಗಿದೆ. ಸಂಧಿಕಾರ್ಯ ನಡೆದಿರುವ, ಸಮಾಸ ಪದವಾಗಿರುವ, ಸಜಾತೀಯ ವಿಜಾತೀಯ ಒತ್ತಕ್ಷರಗಳನ್ನೊಳಗೊಂಡಿರುವ ಸ್ಥಳನಾಮಗಳನ್ನು ಗುರುತಿಸಲಾಗಿದೆ.

ಐದನೆಯ ಅಧ್ಯಾಯವು ಜಾತಿವಾಚಿ - ಅಂಶಗಳನ್ನು ಸೂಚಿಸುವ ಸ್ಥಳನಾಮಗಳ ಪಟ್ಟಿ ಹಾಗೂ ವಿಶ್ಲೇಷಣೆಯನ್ನು ಒಳಗೊಂಡಿದೆ. ಈ ಸ್ಥಳನಾಮಗಳಲ್ಲಿ ಬ್ರಾಹ್ಮಣ, ಲಿಂಗಾಯಿತ, ಕುರುಬ, ಗೊಲ್ಲ, ವೈಶ್ಯ, ತಿಗಳ, ನಾಯಕ, ಉಪ್ಪಾರ, ದೊಂಬ, ಗೊರವ, ವಡ್ಡ ಹಾಗೂ ಗೌಡ ಜಾತಿಯನ್ನು , ಸ್ಥಳನಾಮಗಳ ಪಟ್ಟಿಗಳನ್ನು ಹಾಗೂ ಜಾತಿಯನ್ನು ಕುರಿತು ವಿವೇಚಿಸಲಾಗಿದೆ. ಕೆಲವು ಜಾತಿವಾಚಿ ಸ್ಥಳನಾಮಗಳು ವೃತ್ತಿಸೂಚಕ ಅಂಶಗಳನ್ನು ಒಳಗೊಂಡಿರುವುದನ್ನು ವಿಶ್ಲೇಷಣೆಯಲ್ಲಿ ಗುರುತಿಸಲಾಗಿದೆ. ವೃತ್ತಿವಾಚಿ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದ್ದು , ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ವೃತ್ತಿವಾಚಿ ಸ್ಥಳನಾಮಗಳು ಜಾತಿ ಸೂಚಕ ಅಂಶಗಳನ್ನು ಒಳಗೊಂಡಿರುವುದನ್ನೂ ಗಮನಿಸಲಾಗಿದೆ.

ಸಾಮಾಜಿಕ ಅಂಶದ ಭಾಗವಾಗಿರುವ ಮಾನವನನ್ನು ಗುರುತಿಸಿಕೊಳ್ಳಲು ವ್ಯಕ್ತಿನಾಮಗಳನ್ನು ಬಳಸಿಕೊಳ್ಳಲಾಗಿದೆ. ಈ ವ್ಯಕ್ತಿ ನಾಮಗಳನ್ನು ನಿರ್ದಿಷ್ಟವಾಗಿ ಹೊಂದಿರುವ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಕೆಲವು ವ್ಯಕ್ತಿವಾಚಿ ಮಾದರಿ ಸ್ಥಳನಾಮಗಳನ್ನು ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ದೈವವಾಚಿ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದ್ದು ಪಟ್ಟಿ ಮಾಡಲಾಗಿದೆ. ದೈವವಾಚಿ ಅಂಶಗಳನ್ನು ಸೂಚಿಸುವ ಮಾದರಿ ಸ್ಥಳನಾಮಗಳನ್ನು ವಿಶ್ಲೇಷಣೆ ಮಾಡಲಾಗಿದೆ. 'ಸೂಳೆ' ಎಂಬ ಪದವು ನಿರ್ದಿಷ್ಟವಾಗಿರುವ ಜಲವಾಚಿ ಸ್ಥಳನಾಮಗಳನ್ನು ಗುರುತಿಸಲಾಗಿದೆ.

ಆರನೆಯ ಅಧ್ಯಾಯವು ಪ್ರಾಕೃತಿಕ ಲಕ್ಷಣ ಸೂಚಿಸುವ ಸ್ಥಳನಾಮಗಳ ಅಧ್ಯಯನವನ್ನು ಒಳಗೊಂಡಿದೆ. ಶಿಲಾವಾಚಿ ಸ್ಥಳನಾಮಗಳನ್ನು ಗುರುತಿಸಲಾಗಿದ್ದು , ಮಾದರಿ ಶಿಲಾವಾಚಿ ಸ್ಥಳನಾಮಗಳನ್ನು ವಿಶ್ಲೇಷಿಸಲಾಗಿದೆ. ಶಿಲಾವಾಚಿ ಅಂಶಗಳು ನಿರ್ದಿಷ್ಟ ಹಾಗೂ ವಾರ್ಗಿಕಗಳೆರಡರಲ್ಲಿಯೂ ಬಳಕೆಯಾಗಿದೆ. ಜಲವಾಚಿ ಸ್ಥಳನಾಮಗಳನ್ನು ಗುರುತಿಸಿ ಪಟ್ಟಿ ಮಾಡಲಾಗಿದ್ದು, ಮಾದರಿ ಸ್ಥಳನಾಮಗಳನ್ನು ಕುರಿತು ವಿವೇಚಿಸಲಾಗಿದೆ. ಸಸ್ಯವಾಚಿ ಸ್ಥಳನಾಮಗಳನ್ನು ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ ಗುರುತಿಸಲಾಗಿದೆ. ಮಣ್ಣಿನ ಗುಣ ಸೂಚಿಸುವ, ಲೋಹ, ಖನಿಜ ಸೂಚಕ ಸ್ಥಳನಾಮಗಳನ್ನು ಪಟ್ಟಿ ಮಾಡಲಾಗಿದ್ದು, ಮಾದರಿಗಳನ್ನು ವಿವೇಚಿಸಲಾಗಿದೆ. ತೋಟ, ಗದ್ದೆ ಸೂಚಿಸುವ ಕ್ಷೇತ್ರವಾಚಕ ಸ್ಥಳನಾಮಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಸಾಪೇಕ್ಷ ಸ್ಥಳನಾಮಗಳನ್ನು ಗುರುತಿಸಲಾಗಿದ್ದು ಇವುಗಳಲ್ಲಿ ದಿಗ್ವಾಚಕ, ಪರಿಮಾಣವಾಚಿ ಹಾಗೂ ಪೌರ್ವಾಪರ್ಯ ಅಂಶಗಳನ್ನು ಸೂಚಿಸುವ ಸ್ಥಳನಾಮಗಳನ್ನು ಗುರುತಿಸಿ ವಿಶ್ಲೇಷಣೆ

ಮಾಡಲಾಗಿದೆ. ಒಂದೇ ಹೆಸರನ್ನು ಒಳಗೊಂಡಿರುವ 'ಪ್ರತಿಕರಣ' ಸ್ಥಳನಾಮಗಳು ವಿಭಿನ್ನ ಭೌಗೋಳಿಕ ಪ್ರದೇಶಗಳಲ್ಲಿರುವುದನ್ನು ಗುರುತಿಸಲಾಗಿದೆ. ಬಣ್ಣ (ವರ್ಣ) ಸೂಚಕ ಅಂಶಗಳನ್ನು ಒಳಗೊಂಡಿರುವ ಸ್ಥಳನಾಮಗಳ ವಿವರಗಳನ್ನು ನೀಡಲಾಗಿದೆ. ವಸತಿ, ನಿರ್ವಸತಿ ಹಾಗೂ ನಿರ್ವಸಿತ ಸ್ಥಳನಾಮಗಳ ನಡುವಿನ ವ್ಯತ್ಯಾಸ ಹಾಗೂ ಇದಕ್ಕೆ ಸಂಬಂಧಿಸಿದಂತೆ ವಿವರಗಳನ್ನು ಅಧ್ಯಯನವು ಒಳಗೊಂಡಿದೆ. ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ ವಾಣಿಜ್ಯಕಗಳಾಗಿ ಬಳಕೆಯಾಗಿರುವ ನಗರ, ಪುರ, ಪಟ್ಟಣ, ಪೇಟೆ ಸೂಚಿಸುವ ಸ್ಥಳನಾಮಗಳನ್ನು ಗುರುತಿಸಿ ಪಟ್ಟಿ ಮಾಡಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಇತಿಹಾಸ ಸಂಬಂಧಿತ ಸ್ಥಳನಾಮಗಳನ್ನು ಗುರುತಿಸಲಾಗಿದೆ. ಸ್ಥಳನಾಮ ನಿಷ್ಪತ್ತಿಗೆ ಸಂಬಂಧಿತ ಅಂಶಗಳನ್ನು ನೇರವಾಗಿ ಸೂಚಿಸದಿದ್ದರೂ, ಸ್ಥಳೇತಿಹಾಸ ತಿಳಿಯಲು ಸಾಧ್ಯವಾಗುತ್ತದೆ. ಸ್ಥಳನಾಮಕ್ಕೆ ಸಂಬಂಧಪಟ್ಟಂತೆ ಇರುವ ಐತಿಹ್ಯಗಳನ್ನು ಗುರುತಿಸಿ ವಿವರಿಸಲಾಗಿದೆ.

ಪುರಾಣಕ್ಕೆ ಸಂಬಂಧಿತ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದ್ದು, ಪುರಾಣ ಸಂಬಂಧಿತ ಕಥೆಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಸ್ಥಳನಾಮಗಳನ್ನು ಗುರುತಿಸಲಾಗಿದೆ. ಶಾಸನೋಕ್ತ ಸ್ಥಳನಾಮಗಳ ಭಾಷಿಕ ರೂಪಗಳಲ್ಲಿ ಸ್ಥಿತ್ಯಂತರಗೊಂಡಿರುವುದನ್ನು ಗುರುತಿಸಲಾಗಿದೆ.

ಒಂಬತ್ತನೆಯ ಅಧ್ಯಾಯವು ಸಮಾರೋಪವಾಗಿದ್ದು, ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ದಾಖಲಿಸಲಾಗಿದೆ. ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ಕುರಿತು ವಿವರಣೆಯನ್ನು ಮಹಾಪ್ರಬಂಧವು ಒಳಗೊಂಡಿದೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನುಬಂಧವನ್ನು ನೀಡಲಾಗಿದೆ. ಈ ಅನುಬಂಧದಲ್ಲಿ, ಕ್ಷೇತ್ರ ಕಾರ್ಯದಲ್ಲಿ ಬಳಸಿಕೊಂಡಿರುವ ಪ್ರಶ್ನಾವಳಿಯ ಮಾದರಿಯನ್ನು ನೀಡಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಅಕಾರಾದಿ ಸ್ಥಳನಾಮಗಳ ಪಟ್ಟಿಯನ್ನು ಒಳಗೊಂಡಿದೆ. ಕ್ಷೇತ್ರ ಕಾರ್ಯದಲ್ಲಿ ಮಾಹಿತಿಯನ್ನು ನೀಡಿದ ವಕ್ತೃಗಳ ಪಟ್ಟಿಯನ್ನು, ಅಧ್ಯಯನಕ್ಕೆ ಸಹಾಯಕವಾದ ಗ್ರಂಥಸೂಚಿ, ನಿಯತಕಾಲಿಕೆಗಳ ಪಟ್ಟಿ ಹಾಗೂ ವಿವಿಧ ನಿಘಂಟುಗಳ ಪಟ್ಟಿಯನ್ನು ಸೇರಿಸಲಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಲ್ಲಾ ಸ್ಥಳನಾಮಗಳನ್ನು ಸಮಗ್ರ ಅಧ್ಯಯನಕ್ಕೆ ಒಳಗುಮಾಡದೇ ವಿಶಿಷ್ಟಾಂಶ ಗುಣಗಳನ್ನು ಹೊಂದಿರುವ ಪ್ರಾತಿನಿಧಿಕ ಸ್ಥಳನಾಮಗಳನ್ನು ಆಯ್ದುಕೊಂಡು ವಿಶ್ಲೇಷಿಸಲಾಗಿದೆ. ಸ್ಥಳನಾಮಗಳ ವಸ್ತುನಿಷ್ಠ ಅಧ್ಯಯನದ ದೃಷ್ಟಿಯಿಂದ ಭಾಷಿಕ, ಐತಿಹಾಸಿಕ, ಶಾಸನ, ಪೌರಾಣಿಕ, ಸಾಮಾಜಿಕ, ಪ್ರಾಕೃತಿಕ ಐತಿಹ್ಯ, ಮುಂತಾದ ವೈವಿಧ್ಯಗಳನ್ನು ಗುರುತಿಸಲಾಗಿದೆ.

## ೧.೨ ವ್ಯಾಪ್ತಿ

'ಬೆಂಗಳೂರು' ನಗರಪ್ರದೇಶವನ್ನೊಳಗೊಂಡಂತೆ ಹನ್ನೊಂದು ತಾಲ್ಲೂಕು ಕೇಂದ್ರಗಳನ್ನು ಒಳಗೊಂಡಿರುವ ಅತಿ ವಿಸ್ತಾರ ಭೂ ಪ್ರದೇಶವನ್ನೊಳಗೊಂಡ ರಾಜಧಾನಿ ಕೇಂದ್ರವಾಗಿದೆ. ಅತಿ ಜನಸಾಂದ್ರತೆಯುಳ್ಳದಾಗಿ ನಗರ ಹಾಗೂ

ಗ್ರಾಮಾಂತರ ಜಿಲ್ಲೆಗಳು ಅತಿ ವೇಗವಾಗಿ ಅಭಿವೃದ್ಧಿ ಹೊಂದುತ್ತಿದೆ. ಬೆಂಗಳೂರು ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ವಲಸೆ ಬಂದು ನೆಲೆಸುವ ಜನಗಳ ಸಂಖ್ಯೆ ಹೆಚ್ಚಾಗುತ್ತಿವೆ. ಈ ನಿಟ್ಟಿನಲ್ಲಿ ಹೊಸ ಬಡಾವಣೆಗಳು, ವಸತಿ ಪ್ರದೇಶಗಳು ಹುಟ್ಟಿಕೊಳ್ಳುತ್ತಿವೆ. ಈ ನೆಲೆಗಳಿಗೆ ಯಾದೃಚ್ಛಿಕ ನಾಮಕರಣ ಮಾಡಲಾಗುತ್ತಿದೆ.

ನಿರ್ವಸಿತ ಪ್ರದೇಶಗಳೆಲ್ಲವೂ ವಸತಿ ಪ್ರದೇಶಗಳಾಗಿ ಸ್ಥಿತ್ಯಂತರ ಹೊಂದುತ್ತಿರುವುದರಿಂದ, ಈ ಹಿಂದೆ ಹೆಸರು ನೀಡಲ್ಪಟ್ಟಿರುವ ಸ್ಥಳನಾಮಗಳು ಮರುನಾಮಕರಣಗೊಳ್ಳುತ್ತಿವೆ ಅಥವಾ ಹಳೆಯ ರೂಪದಲ್ಲಿ ವ್ಯತ್ಯಾಸಗೊಂಡು ಬಳಕೆಯಾಗುತ್ತಿವೆ.

ಪ್ರಸ್ತುತ ನಿಬಂಧವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಲ್ಲಾ ಎಂಟು ತಾಲ್ಲೂಕುಗಳ ಸ್ಥಳನಾಮಗಳ ಅಧ್ಯಯನವನ್ನು ಒಳಗೊಂಡಿದೆ. ನಗರ ಹಾಗೂ ನಗರ ಜಿಲ್ಲೆಯ ಸ್ಥಳನಾಮಗಳನ್ನು ಅಧ್ಯಯನ ವ್ಯಾಪ್ತಿಯಿಂದ ಹೊರತುಪಡಿಸಲಾಗಿದೆ. ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ, ಕನಕಪುರ, ಮಾಗಡಿ, ನೆಲಮಂಗಲ ಹಾಗೂ ರಾಮನಗರ ತಾಲ್ಲೂಕುಗಳನ್ನು ಒಳಗೊಂಡಿದೆ. ಇತ್ತೀಚೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ರಾಮನಗರ ಜಿಲ್ಲೆ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆ ಎಂದು ವಿಭಜನೆ ಮಾಡಲಾಗಿದೆ.

ವಿಶಿಷ್ಟವಾಗಿ ಪ್ರತಿ ತಾಲ್ಲೂಕಿನಲ್ಲಿರುವ ಸ್ಥಳನಾಮಗಳ ಪಟ್ಟಿ ಮಾಡಲಾಗಿದೆ. ಅವುಗಳಲ್ಲಿ ವಿಶಿಷ್ಟವಾದ ಕೆಲವು ಸ್ಥಳನಾಮಗಳನ್ನು ವಿಶ್ಲೇಷಣೆಗೆ ಒಳಗುಪಡಿಸಲಾಗಿದೆ. ಗ್ರಾಮಾಂತರ ಜಿಲ್ಲೆಯಲ್ಲಿನ ಸುಮಾರು ಮುನ್ನೂರು ಸ್ಥಳನಾಮಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಅಧ್ಯಯನ ವ್ಯಾಪ್ತಿ ಪ್ರದೇಶದ ಭೌಗೋಳಿಕ ಪರಿಸರ, ಇತಿಹಾಸ, ಜೀವನವಿಧಾನ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಭಾಷಿಕ ಅಂಶಗಳನ್ನು ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

## ೧.೩ ಅಧ್ಯಯನದ ಮಿತಿಗಳು

"ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು - ಒಂದು ಅಧ್ಯಯನ" - ಶೀರ್ಷಿಕೆಯ ಈ ಅಧ್ಯಯನದಲ್ಲಿ ವಿಷಯಕ್ಕೆ ಸಂಬಂಧಪಟ್ಟ ಉಪಲಬ್ಧ ಬರಹಗಳನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ನಿಬಂಧವು ಅತಿವ್ಯಾಪ್ತಿ ಪ್ರದೇಶವನ್ನು ಹೊಂದಿರುವುದರಿಂದ, ವಿಶಿಷ್ಟ ವರ್ಗೀಕರಣಗಳಿಗೆ ಸಂಬಂಧಿಸಿದಂತೆ ದೊರೆಯುವ ಕೆಲವು ಮಾದರಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸ್ಥಳನಾಮಗಳ ನಿಜನಿಷ್ಪತ್ತಿಯ ಪ್ರಯತ್ನದಲ್ಲಿ ಅನೇಕ ತೊಡಕುಗಳನ್ನು ಎದುರಿಸಬೇಕಾಗುತ್ತದೆ. "ಸವೆದು ಹೋದ ಅಥವಾ ಅರ್ಥ ಬದಲಾವಣೆಯಾದ ಸ್ಥಳನಾಮಗಳ ಮೂಲರೂಪಗಳನ್ನು ಕಂಡುಹಿಡಿಯಲು ಹೊರಟ ಸಂಶೋಧಕನು ಹಲವಾರು ಸಲ ಹೊಸ ಸಮಸ್ಯೆಗಳನ್ನು ಬಿಡಿಸಬೇಕಾಗುತ್ತದೆ. ದೊರೆಯುವ ಆಧಾರಗಳು ಏನೇನೂ ಸಾಕಾಗುವುದಿಲ್ಲ ಅಥವಾ ಪ್ರಯೋಜನವಾಗುವುದಿಲ್ಲ. ಜನಪದ ನಿರುಕ್ತಿಯಿಂದ ಅಥವಾ ದೊರೆತಿರುವ ರೂಪಗಳಿಂದ್ಲೇ ಅಧಿಕೃತ ಸರಿಯಾದ ನಿರ್ಣಯಗಳಿಗೆ ಬರಲು ಸಾಧ್ಯವಾಗುವುದಿಲ್ಲ".[೧೩]

ಸಮಯದ ಪರಿಮಿತಿಯೊಳಗೆ, ಸ್ಥಳನಾಮಗಳ ಮಾಹಿತಿ ಸಂಗ್ರಹಣೆಯನ್ನು ಮಾಡಿದ್ದು, ಲಭ್ಯ ಮಾಹಿತಿಗಳನ್ನು ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ.

## ೧.೪ ಅಧ್ಯಯನ ವಿಧಾನ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳನ್ನು ಕುರಿತ ಈ ಅಧ್ಯಯನದಲ್ಲಿ ಕ್ಷೇತ್ರ ಕಾರ್ಯವು ಮುಖ್ಯ ಆಕರವಾಗಿದೆ. ವಿಷಯಕ್ಕೆ ಸಂಬಂಧಿಸಿದಂತೆ ಉಪಲಬ್ಧ ಗ್ರಂಥಗಳಲ್ಲಿನ ಪೂರಕ ಮಾಹಿತಿಯನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ವಕ್ತೃಗಳ ಮೂಲಕ ಮಾಹಿತಿಯನ್ನು ಪಡೆಯಲು ಪ್ರಶ್ನಾವಳಿಯನ್ನು ಬಳಸಲಾಗಿದೆ. ವಕ್ತೃಗಳನ್ನು ಪ್ರಶ್ನಿಸುವ ಮೂಲಕ ಮಾಹಿತಿ ಸಂಗ್ರಹಣೆ ಕಾರ್ಯ ಮಾಡಲಾಗಿದೆ. ಮಾಹಿತಿ ಸಂಗ್ರಹಣೆಯಲ್ಲಿ ಪಂಡಿತ ಹಾಗೂ ಪಾಮರ ನಿಷ್ಪತ್ತಿಗಳಿಗೆ ಸಹಕಾರಿಯಾಗುವ ವಿವರಗಳನ್ನು ಪಡೆಯಲಾಗಿದೆ. ಇವುಗಳಿಗೆ ಸಂಬಂಧಿಸಿದಂತೆ ಈಗಾಗಲೇ ಲಭ್ಯವಿರುವ ಮಾಹಿತಿಯನ್ನು ಸೇರಿಸಿ ವಿಶ್ಲೇಷಿಸಲಾಗಿದೆ. ಸ್ಥಳನಾಮಗಳ ಶಿಷ್ಟರೂಪಗಳು, ಜನಬಳಕೆಯಲ್ಲಿರುವ ಉಚ್ಚಾರಣಾರೂಪಗಳು, ಊರಿನ ಹ್ರಸ್ವರೂಪಗಳು, ಹಳೆಯ ಹೆಸರುಗಳು ಹಾಗೂ ಸಂಸ್ಕೃತೀಕರಣವಾಗಿರುವಿಕೆಯನ್ನು ಅಧ್ಯಯನದಲ್ಲಿ ಗಮನಿಸಲಾಗಿದೆ.

ಊರಿನ ಭೌಗೋಳಿಕ, ಪ್ರಾಕೃತಿಕ ಪರಿಸರವನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಸ್ಥಳನಾಮಕ್ಕೆ ಸಂಬಂಧಿಸಿದಂತೆ ಊರಿನ ಪ್ರಮುಖ ಅಧಿದೇವತೆ, ಸಂಬಂಧಪಟ್ಟ ಹಬ್ಬ - ಜಾತ್ರೆಗಳು ಹಾಗೂ ಇತರ ಆಚರಣೆಗಳನ್ನು ಅಧ್ಯಯನದಲ್ಲಿ ಗಮನಿಸಲಾಗಿದೆ. ಸ್ಥಳನಾಮ ನಿಷ್ಪತ್ತಿಗೆ ಸಂಬಂಧಿಸಿದ ಚಾರಿತ್ರಿಕ, ರಾಜಕೀಯ, ಸಾಮಾಜಿಕ, ಹಾಗೂ ಸಾಂಸ್ಕೃತಿಕ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಊರಿಗೆ ಹೆಸರು ಬಂದಿರುವುದಕ್ಕೆ ಇರುವ ಐತಿಹ್ಯಗಳು, ಕಥೆಗಳು, ಜಾನಪದೀಯ ಅಂಶಗಳು ಹಾಗೂ ಮೌಖಿಕ ಪರಂಪರೆಯನ್ನು ಅಧ್ಯಯನಕ್ಕೆ ಒಳಪಡಿಸಿದೆ. ಮಾಹಿತಿ ಸಂಗ್ರಹಣಾ ಸಂದರ್ಭದಲ್ಲಿ ವಿವಿಧ ಜಾತಿಗಳು ಹಾಗೂ ವೃತ್ತಿಗಳಿಗೆ ಸಂಬಂಧಪಟ್ಟ ವ್ಯಕ್ತಿಗಳ ಭಾಷಾ ಬಳಕೆಯನ್ನು , ಸ್ಥಳನಾಮ ಉಚ್ಚಾರಣೆಗಳಲ್ಲಿನ ವ್ಯತ್ಯಾಸವನ್ನು ಗುರುತಿಸಿ, ಪೂರಕ ಮಾಹಿತಿಯನ್ನು ಪಡೆಯಲಾಗಿದೆ.

ಸ್ಥಳನಾಮ ಕುರಿತು ನಡೆದಿರುವ ಅಧ್ಯಯನಗಳಲ್ಲಿನ ವಿಶಿಷ್ಟ ಹಾಗೂ ಸಾಮಾನ್ಯ ವಾರ್ಗಿಕಗಳ ವಿಂಗಡಣೆಯನ್ನು ಗುರುತಿಸಲಾಗಿದೆ. ವಿವಿಧ ಪ್ರದೇಶಗಳಲ್ಲಿ ಬಳಕೆಯಾಗುವ ಉಪಭಾಷೆಗಳಿಗನುಗುಣವಾಗಿ ಹಾಗೂ ಸ್ಥಳನಾಮಗಳಲ್ಲಿನ ಸಾಮಾನ್ಯ ವಾರ್ಗಿಕಗಳಲ್ಲಿನ ವ್ಯತ್ಯಾಸವನ್ನು ಅಧ್ಯಯನದಲ್ಲಿ ವಿಶ್ಲೇಷಣೆಗೆ ಒಳಗು ಮಾಡಲಾಗಿದೆ.

ಅಧ್ಯಯನಕ್ಕೆ ಅವಶ್ಯಕವಾದ ಮಾದರಿ ಸ್ಥಳನಾಮಗಳ ಪಟ್ಟಿಯನ್ನು ಸಿದ್ಧಪಡಿಸಲು, ಕರ್ನಾಟಕ ಸರ್ಕಾರ ಪ್ರಕಟಿಸಿರುವ 'ಕರ್ನಾಟಕ ಗ್ರಾಮಸೂಚಿ' ಕೃತಿಯನ್ನು ಬಳಸಿಕೊಳ್ಳಲಾಗಿದೆ. ಪ್ರಕಟವಾಗಿರುವ ತಾಲ್ಲೂಕುವಾರು ಗ್ರಾಮನಾಮಗಳ ವಿಂಗಡಣೆಯಲ್ಲಿ ಬದಲಾವಣೆಗಳು ನಡೆದಿದ್ದು, ಅವುಗಳನ್ನು ಗುರುತಿಸಲು ಸಂಬಂಧಪಟ್ಟ ಅಧಿಕೃತ ವ್ಯಕ್ತಿಗಳಿಂದ ಮಾಹಿತಿ ಪಡೆಯಲಾಗಿದೆ. ಶಾಸನಗಳಲ್ಲಿನ ಉಲ್ಲೇಖಗಳು ದೇವಾಲಯ, ಮಠ ಮುಂತಾದ ಧಾರ್ಮಿಕ ವಲಯದಲ್ಲಿ ದೊರೆಯುವ ಮಾಹಿತಿಗಳನ್ನು ಉಪಲಬ್ಧ ಮಾಹಿತಿಗಳ ಜೊತೆ ವಿಶ್ಲೇಷಿಸುವುದರ ಮೂಲಕ ನಿಜ ನಿಷ್ಪತ್ತಿ ಗುರುತಿಸುವಿಕೆಯನ್ನು ಅಧ್ಯಯನವು ಒಳಗೊಂಡಿದೆ.

## ೧.೫ ಕ್ಷೇತ್ರ ಕಾರ್ಯ ಅನುಭವ

ಊರುಗಳ ಹೆಸರಿನ ಬಳಕೆಯನ್ನು ಎಲ್ಲರೂ ಬಳಸುತ್ತಾರೆ. ಆದರೆ ಊರಿನ ಹೆಸರಿನ ಸೃಷ್ಟಿಯಾಗಿರುವುದರ ಹಿನ್ನೆಲೆ ಎಲ್ಲರಿಗೂ ಅರಿವಿರುವುದಿಲ್ಲ. ಊರಿನ ಇತಿಹಾಸ, ಊರಿಗೆ ಸಂಬಂಧಪಟ್ಟ ಪರಿಸರ ಗುರುತಿಸುವಿಕೆ, ಊರಿಗೆ ಹೆಸರು ಬಂದ ಕಾರಣ - ಮುಂತಾದ ವಿಷಯಗಳನ್ನು ಅರಿತಿರುವ ಜನಗಳ ಪ್ರಮಾಣ ಅತಿ ಕಡಿಮೆಯಾದುದಾಗಿದೆ. ತಮ್ಮ ಊರಿನ ಬಗ್ಗೆ ಸಂಸ್ಕೃತಿಯ ಬಗ್ಗೆ, ಊರಿನ ಅಧಿದೇವತೆಯ ಬಗ್ಗೆ, ದೇವಾಲಯಗಳ ಬಗ್ಗೆ ಹೆಮ್ಮೆಯನ್ನು ಹೊಂದಿರುತ್ತಾರೆಯಾದರೂ, ಅದರ ಹಿನ್ನೆಲೆಯ ಬಗ್ಗೆ ಮಾಹಿತಿಯ ಕೊರತೆ ಕಾಣಬಹುದು. ಧಾರ್ಮಿಕ ಸ್ಥಳ ಪುರಾಣವಿದ್ದಲ್ಲಿ ಆ ಬಗ್ಗೆ ಹೆಚ್ಚಿನ ಅರಿವನ್ನು ಜನ ಹೊಂದಿರುತ್ತಾರೆ. ಹಬ್ಬ-ಹರಿದಿನಗಳ ಆಚರಣೆ, ಜಾತ್ರೆ ಹಾಗೂ ಇತರೆ ಸಾಂಪ್ರದಾಯಿಕ ಆಚರಣೆಗಳಲ್ಲಿ ನಂಬಿಕೆ ಇದ್ದು, ಅನುಸರಿಸುತ್ತಿರುತ್ತಾರೆ. ಆದರೆ ಸ್ಥಳನಾಮ ವಿಚಾರದಲ್ಲಿ ಅರಿವಿನ ಕೊರತೆ, ನಿರಾಸಕ್ತಿ ಕಾಣಬಹುದು. ಉಳಿದಂತೆ ಸ್ಥಳನಾಮ ನಿಷ್ಪತ್ತಿಯ ಮಾಹಿತಿಯನ್ನು ನೀಡುವವರು ತಮ್ಮ ಊರಿನ ಅಸ್ತಿತ್ವವನ್ನು ಪುರಾಣಕಥೆಗಳ, ಸ್ಥಳಮಹಿಮೆ (ಮಹಾತ್ಮೆ) ಜೊತೆಯಲ್ಲಿ ಸಮೀಕರಿಸುತ್ತಾರೆ. ಈ ರೀತಿಯ ಆಲೋಚನೆಗೆ ಮುಖ್ಯ ಕಾರಣವೆಂದರೆ, ಸ್ಥಳನಾಮದ ನಿಜ ನಿಷ್ಪತ್ತಿಯ ಮಾಹಿತಿಯ ಕೊರತೆಯಾಗಿದೆ. ಶಾಸ್ತ್ರೀಯ ನಿರೂಪಣೆಗೆ ಬೇಕಾದ ಪೂರಕ ಮಾಹಿತಿಯ ಕೊರತೆಯಿಂದ ಕಟ್ಟುಕಥೆಗಳ ಸೃಷ್ಟಿಗೆ ಕಾರಣವಾಗುತ್ತಿದೆ. ಈ ವಿಷಯದಲ್ಲಿ ವಿದ್ಯಾವಂತ ಹಾಗೂ ಅವಿದ್ಯಾವಂತರ ಸ್ಥಿತಿಗಳೆರಡೂ ಒಂದೇ ಆಗಿದ್ದು, ಕಲ್ಪನೆಯನ್ನು ಮಾಡಿಕೊಂಡು ಕಥೆ ಸೃಷ್ಟಿಸುತ್ತಾರೆ. ಮೈಸೂರು ಜಿಲ್ಲೆಯ ಊರುಗಳ ಅಧ್ಯಯನ ಕೈಗೊಂಡ ದೇ. ಜವರೇಗೌಡರು ಅಧ್ಯಯನ ಕೈಬಿಟ್ಟುದಕ್ಕೆ ಕಾರಣವನ್ನು ನೀಡುತ್ತಾ, "ತಮ್ಮ ಊರಿನ ಹೆಸರಿನ ಬಗ್ಗೆ ಸೂಕ್ತ ಮಾಹಿತಿ ನೀಡಲು ವಕ್ತೃಗಳು ದೊರೆಯದಿದ್ದುದೇ ಇದಕ್ಕೆ ಕಾರಣವೆಂದು ತಿಳಿಸುತ್ತಾರೆ."[೧೪]

ಇತ್ತೀಚೆಗೆ ಸ್ಥಳನಾಮಗಳನ್ನು ಕುರಿತ ಅಧ್ಯಯನಗಳು ಸಾಕಷ್ಟು ನಡೆಯುತ್ತಿರುವುದು ಅತ್ಯಂತ ಶ್ಲಾಘನೀಯ ವಾದುದು. ಇದರಿಂದ ಅಧ್ಯಯನಾಸಕ್ತರಿಗೆ ಹಾಗೂ ಜನಸಾಮಾನ್ಯರಿಗೆ ಪ್ರಯೋಜನವಾಗುತ್ತದೆ.

---

**ಅಡಿ ಟಿಪ್ಪಣಿಗಳು**

೧ ಡಾ॥ ಎಂ. ಚಿದಾನಂದ ಮೂರ್ತಿ, ವಾಗರ್ಥ, ಪುಟ ೧
೨ ಡಾ॥ ಕೆ. ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ, ಪುಟ ೨
೩ ಡಾ॥ ಎಂ.ಎಂ. ಕಲಬುರ್ಗಿ, ಕನ್ನಡ ನಾಮ ವಿಜ್ಞಾನ, ಪುಟ ೪
೪ ಡಾ॥ ಕೆಮ್ತೂರು ರಘುಪತಿಭಟ್ಟ, ತುಳುನಾಡಿನ ಸ್ಥಳನಾಮಗಳು, ಪುಟ ೭
೫ ಡಾ॥ ಕೆ. ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ, ಪುಟ ೧೨.
೬ ಡಾ॥ ಎಂ.ಎಂ. ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪುಟ ೪
೭ ಡಾ॥ ಅರ್ಕೆ ಮಣಿಪಾಲ, ಹೆಸರಿನಲ್ಲೇನಿದೆ? ಪುಟ ೧೭.
೮ ಡಾ॥ ಕೆ. ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ, ಪುಟ XI.
೯ ಇಂಗ್ಲಿಷ್ ಕನ್ನಡ ನಿಘಂಟು.
೧೦ ದೇ. ಜವರೇಗೌಡ, ಸ್ಥಳನಾಮ ವ್ಯಾಸಂಗ, ಪುಟ ೩೦.
೧೧ ಕೆ. ವಿಶ್ವನಾಥ, ಸ್ಥಳನಾಮಗಳು, ಪುಟ ೩೨.
೧೨ ಕ.ಸಾ.ಪ. ೬೭ನೇ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ, ಅರ್ಕಾವತಿ, ಪುಟ ೬
೧೩ ಪಿ. ಗೋಪಾಲಕೃಷ್ಣ, ಸ್ಥಳನಾಮ ಅಧ್ಯಯನಗಳು, ಪುಟ ೪೩.
೧೪ ಹಾಜಿ ದೇವೇಂದ್ರಪ್ಪ, ಆಂಧ್ರ-ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳ, ಪುಟ ೩೮.

# ೨

# ಕನ್ನಡ ಸ್ಥಳ ನಾಮಾಧ್ಯಯನ ಸಮೀಕ್ಷೆ

ಸ್ಥಳನಾಮ ಅಧ್ಯಯನವು ಎರಡು ಶತಮಾನಗಳಿಂದಲೂ ನಡೆಯುತ್ತಿದ್ದು, ೧೯ನೇ ಶತಮಾನದಿಂದೀಚೆಗೆ ಹೆಚ್ಚಿನ ಮಹತ್ವವನ್ನು ಪಡೆದಿದೆ. ಸಾಹಿತ್ಯ, ಕಲೆ, ಧರ್ಮ, ಸಂಸ್ಕೃತಿ ಮೊದಲಾದ ಶಾಸ್ತ್ರಗಳಂತೆ ಸ್ಥಳನಾಮವೂ ಒಂದು ವಿಜ್ಞಾನವಾಗಿ ಮನ್ನಣೆಯನ್ನು ಗಳಿಸಿದೆ.[೧]

ಸ್ಥಳನಾಮ ಅಧ್ಯಯನ ಮಾಡಲು ಪ್ರಾರಂಭಿಸಿದ ಮೊದಲ ಸಂಶೋಧಕ ಗಾತ್‌ಫ್ರೀಡ್ ವಿಲ್‌ಹೆಲ್ಮ್ ಲೀಬ್ನಿಜ್. ೧೮೪೦ರ ನಂತರ ಫಾಯರ್ ಸ್ವಮ್ಯಾನ್, ಐಸಾಕ್ ಟೇಲರ್, ಜಿ.ಜಿ. ಎಗ್ಲಿ ಮುಂತಾದ ಪಾಶ್ಚಿಮಾತ್ಯ ವಿದ್ವಾಂಸರು ಹೆಚ್ಚಿನ ಅಧ್ಯಯನಕ್ಕೆ ತಮ್ಮನ್ನು ತೊಡಗಿಸಿಕೊಂಡರು. ಭಾರತದಲ್ಲಿ ಬಿ.ಸಿ. ಲಾ ಮತ್ತು ಸಂಕಾಲಿಯಾ ಬರೆದಿರುವ ಪ್ರಬಂಧಗಳು ಸ್ಥಳನಾಮ ಇತಿಹಾಸದಲ್ಲಿ ವಿಶೇಷ ಮಹತ್ವವನ್ನು ಪಡೆದಿವೆ. ಕರ್ನಲ್ ಮೆಕೆಂಝಿ ಬರೆಸಿದ ಗ್ರಾಮ ಕೈಫಿಯತ್ತುಗಳು ಕರ್ನಾಟಕದ ಸ್ಥಳಪುರಾಣಗಳನ್ನೊಳಗೊಂಡಿರುವುದನ್ನು ಇಲ್ಲಿ ಉಲ್ಲೇಖಿಸಬಹುದು.[೧] ಕಿಟೆಲ್ ನಿಘಂಟು ಕೆಲವು ಊರುಗಳ ಹೆಸರುಗಳನ್ನು ಗುರುತಿಸಿದರೂ, ಅವುಗಳ ನಿಷ್ಪತ್ತಿಯ ಬಗ್ಗೆ ತಟಸ್ಥವಾಗಿದೆ. ಸಿ. ಹಯವದನ ರಾಯರು, ಮೈಸೂರು ಗೆಝೆಟಿಯರ್‌ನಲ್ಲಿನ ಕೆಲವು ನಾಮಗಳನ್ನು ಕುರಿತು ನಡೆಸಿರುವ ವಿಶ್ಲೇಷಣೆ ವಸ್ತುನಿಷ್ಠವಾಗಿಲ್ಲವಾದರೂ, ಅಧ್ಯಯನ ಮಾಡುವವರಿಗೆ ಸಹಾಯಕವಾಗಿದೆ.

ಕರ್ನಾಟಕದಲ್ಲಿ 'Place Name Society of India' ಸಂಸ್ಥೆಯು ೧೯೭೯ರಲ್ಲಿ ಪ್ರಾರಂಭವಾದ ನಂತರ, ಪ್ರತಿ ವರ್ಷವೂ ವಿಚಾರ ಸಂಕಿರಣಗಳನ್ನು ನಡೆಸುತ್ತಿದ್ದು, 'ಸ್ಥಳನಾಮ ಅಧ್ಯಯನ'ವೂ ಒಂದು 'ವಿಶಿಷ್ಟ ಅಧ್ಯಯನ ಕ್ಷೇತ್ರ'ವಾಗಿ ಪರಿಗಣಿಸಲ್ಪಟ್ಟಿದೆ. ಪ್ರತಿವರ್ಷವೂ ಮಂಡಿಸಲ್ಪಟ್ಟ ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸುತ್ತಿರುವುದು, ಹೊಸ ಅನ್ವೇಷಣೆಗಳಿಗೆ ಅವಕಾಶ ನೀಡುತ್ತಿದೆ. ಕರ್ನಾಟಕದಲ್ಲಿ ಸ್ಥಳನಾಮ ಅಧ್ಯಯನಗಳು ನಡೆದಿದ್ದು, ಈಗಾಗಲೇ ಅನೇಕ ಕೃತಿಗಳು ಪ್ರಕಟವಾಗಿವೆ. ಅನೇಕ ಸಂಶೋಧನಾ ನಿಬಂಧಗಳಿಗೆ ಎಂ.ಫಿಲ್., ಪಿಎಚ್.ಡಿ ಪದವಿಗಳನ್ನು

ವಿಶ್ವವಿದ್ಯಾಲಯಗಳು ಪ್ರಧಾನ ಮಾಡಿವೆ. ಇದರ ಜೊತೆಗೆ ಅನೇಕ ಬಿಡಿ ಲೇಖನಗಳು ನಿಯತಕಾಲಿಕೆಗಳಲ್ಲಿ ಪ್ರಕಟವಾಗುತ್ತಿವೆ.

ಸಂಶೋಧನಾ ನಿಬಂಧಗಳೆಲ್ಲವೂ ಪ್ರಕಟವಾದರೆ ಸ್ಥಳನಾಮ ಅಧ್ಯಯನಕ್ಕೆ ಇನ್ನೂ ಹೆಚ್ಚಿನ ಮಹತ್ವ ದೊರೆಯುತ್ತದೆ. ಸ್ಥಳನಾಮಕ್ಕೆ ಸಂಬಂಧಪಟ್ಟಂತೆ ನಡೆದಿರುವ ಅಧ್ಯಯನಗಳನ್ನು ಕೆಳಕಂಡ ಕೃತಿಗಳಲ್ಲಿ ಹಾಗೂ ಬರಹಗಳಲ್ಲಿ ಗುರುತಿಸಬಹುದಾಗಿದೆ.

## ೧. ಎಡೆಗಳು ಹೇಳುವ ಕಂನಾಡ ಕತೆ - ಡಾ|| ಶಂ.ಬಾ. ಜೋಶಿ - ೧೯೪೨

ಕನ್ನಡ ಭಾಷೆಯಲ್ಲಿ ಸ್ಥಳನಾಮ ಅಧ್ಯಯನಕ್ಕೆ ಪ್ರಾಶಸ್ತ್ಯ ನೀಡಿದ ಮೊದಲ ಕೃತಿಯಾಗಿದೆ. ಸ್ಥಳನಾಮಗಳ ಅಧ್ಯಯನದಿಂದ ಗತಕಾಲದ ಜೀವನ ಚರಿತ್ರೆ ಸಾಂಸ್ಕೃತಿಕ ಪರಂಪರೆ ತಿಳಿಯಬಹುದು. ನಾಮನಿರ್ದೇಶನದ ಮೂಲಕ ಅಲ್ಲಿನ ಪರಿಸರ ಹಾಗೂ ಸಂದರ್ಭವನ್ನು ಹಿಡಿದಿಡುವ ಪ್ರಯತ್ನವು ತನಗೆ ಅರಿವಿಲ್ಲದಂತೆಯೇ ಮಾಡಿರುವ ಸಾಧ್ಯತೆ ಇದೆ. ಒಂದು ಪ್ರದೇಶದ ಭೌಗೋಳಿಕ, ಸಾಮಾಜಿಕ - ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಅಂಶಗಳನ್ನು ಪ್ರತಿಬಿಂಬಿಸುವ ಶಕ್ತಿ ಸ್ಥಳನಾಮಗಳಿಗಿದೆ. ಭಾಷಾ ವಿಜ್ಞಾನ ಕ್ಷೇತ್ರಕ್ಕೆ ಸ್ಥಳನಾಮಗಳು ವಿಶೇಷವಾದ ಕೊಡುಗೆಯನ್ನು ನೀಡಿವೆ. ಊರಿನ ಹೆಸರು ಕೇಳಿಸಿಕೊಂಡ ತಕ್ಷಣ, ಆ ಊರಿಗೆ ಸಂಬಂಧಿತವಾದ ಅನೇಕ ವಿಚಾರಗಳು ಮನಸ್ಸಿನಲ್ಲಿ ಮೂಡಿಬರುತ್ತವೆ. ಎಡೆಗಳಿಗೆ ಹೆಸರು ನೀಡುವಲ್ಲಿ ಮಾನವ ಸಹಜವಾದ ಆಲೋಚನೆಗಳು ಕಂಡುಬರುತ್ತವೆ. ಒಂದೇ ರೀತಿ ಇರುವ ಹೆಸರುಗಳಲ್ಲಿನ ಹಿನ್ನೆಲೆಯು ಬೇರೆಯೇ ಆಗಿರುವ ಸಾಧ್ಯತೆಯೂ ಇರುತ್ತದೆ. ಎಡೆಗಳಲ್ಲಿನ ವಿಶಿಷ್ಟಗಳನುಸಾರವಾಗಿ ಇಪ್ಪತ್ತೆರಡು ರೀತಿಯ ವರ್ಗೀಕರಣವನ್ನು ಮಾಡಲಾಗಿದೆ. 'ಹಟ್ಟಿ'ಗಳು ಮಾನವನ ನಾಗರೀಕತೆಯ ಆರಂಭ ಕಾಲದ ವಸತಿಗಳೆಂದೂ ಊರು, ಪುರ ಮುಂತಾದುವು ಅನಂತರದಲ್ಲಿ ಬಳಕೆಯಾಗಿರುವ ಸಾಮಾನ್ಯವಾರ್ಗಿಕಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಕನ್ನಡ ನಾಡಿನಲ್ಲಿನ ವಿವಿಧ ಜನಾಂಗಗಳ ವಿಶ್ಲೇಷಣೆ ಮಾಡುತ್ತಾ, ಆ ಜನಾಂಗಗಳ ಅಸ್ತಿತ್ವವನ್ನು ಕುರಿತು ಕೃತಿಯಲ್ಲಿ ಚರ್ಚಿಸಲಾಗಿದೆ. ಕುಡುವರು, ನಾಡವರು ಹಾಗೂ ರೆಡ್ಡಿಗಳನ್ನು ಕುರಿತು ವಿವರಿಸಲಾಗಿದೆ. ಕ್ಷೇತ್ರಕಾರ್ಯಕ್ಕೆ ಮಹತ್ವ ನೀಡದೆ, ವಿಶಿಷ್ಟ ಘಟನೆಗಳ ಅಧ್ಯಯನ ಮಾಡಿರುವ ಈ ಕೃತಿಯಲ್ಲಿ ಲೇಖಕರು ತಮ್ಮ ಆಲೋಚನೆಗಳನ್ನು ಮಂಡಿಸಿದ್ದಾರೆ.

## ೨. ತುಳುನಾಡಿನ ಸ್ಥಳನಾಮಗಳು - ಡಾ|| ಕೆಮ್ತೂರು ರಘುಪತಿ ಭಟ್ಟ, ೧೯೭೯.

ಕರ್ನಾಟಕದ ತುಳು ಭಾಷೆಯ ಪ್ರದೇಶದ ಸ್ಥಳನಾಮಗಳಿಗೆ ಸಂಬಂಧಪಟ್ಟ ಸಂಶೋಧನಾ ಕೃತಿಯಾಗಿದೆ. ಸ್ಥಳನಾಮಾಧ್ಯಯನದ ವೈಜ್ಞಾನಿಕ ವಿಧಾನವನ್ನು ಅಳವಡಿಸಿಕೊಂಡ ಕೃತಿಯಾಗಿದೆ. ಈ ಕೃತಿಯು ತುಳುನಾಡಿನ ಸ್ಥಳನಾಮಗಳ ವಿಶ್ಲೇಷಣೆಯ ಜೊತೆಗೆ ಸಾಮಾನ್ಯ ವಿಷಯಗಳ ವಿವರ ಹಾಗೂ ನಿಯಮಗಳನ್ನು ಕೃತಿಯು ಒಳಗೊಂಡಿದೆ. ಒಂದು ಊರು ಮತ್ತೊಂದು ಊರಿನಿಂದ ಪ್ರತ್ಯೇಕಗೊಳಿಸಿಕೊಳ್ಳಲು 'ಸ್ಥಳನಾಮ'ಗಳು ಗುರುತುಪಟ್ಟಿಗಳಾಗಿವೆ. ಸ್ಥಳನಾಮಗಳ ಹುಟ್ಟು ರಹಸ್ಯವಾಗಿದ್ದು, ಸದಾ ಜೀವಂತವಾಗಿರುತ್ತವೆ. ಸ್ಥಳನಾಮಗಳಲ್ಲಿನ ವಿಶಿಷ್ಟ ಅಥವಾ ನಿರ್ದಿಷ್ಟ ಘಟಕಗಳಿಗೆ ಸಂಬಂಧಿಸಿದಂತೆ ವರ್ಗೀಕರಣವನ್ನು ಕೃತಿಯು ಒಳಗೊಂಡಿದೆ.

ಭೂ ಲಕ್ಷಣಗಳ ಸಾಮ್ಯತೆ, ದೈವನಾಮಗಳು ಸ್ಥಳನಾಮಗಳ ಪ್ರತಿರೂಪಗಳಿಗೆ ಕಾರಣವೆಂದು ಲೇಖಕರು ಗುರುತಿಸಿದ್ದಾರೆ. ತುಳುನಾಡಿನ ಸ್ಥಳನಾಮಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುವ ಜಲವಾಚಿ ಸೂಚಕಗಳಾದ ಅಲ್, ಆರ್, ಬೆಳ್ ಪದಗಳನ್ನು ನಿದರ್ಶನಗಳೊಂದಿಗೆ ಗುರುತಿಸಿದ್ದಾರೆ.

## ೩. ಸ್ಥಳನಾಮ ಅಧ್ಯಯನಗಳು - ಡಾ|| ಎ. ಗೋಪಾಲಕೃಷ್ಣ - ೧೯೮೨

ಸ್ಥಳನಾಮ ಅಧ್ಯಯನಾಸಕ್ತರಿಗೆ ಬೇಕಾದ ಮೂಲಭೂತ ಮಾಹಿತಿಯನ್ನೊಳಗೊಂಡಿರುವ ಆಕರ ಕೃತಿಯಾಗಿದೆ. ಸ್ಥಳನಾಮ ಅಧ್ಯಯನದ ಸಮಸ್ಯೆಗಳನ್ನು ಗುರುತಿಸಿ, ಅವುಗಳಿಗೆ ಸೂಕ್ತ ಮಾರ್ಗದರ್ಶನವನ್ನು ಕೃತಿಕಾರರು ಮಾಡಿದ್ದಾರೆ. ಸ್ಥಳನಾಮಗಳಲ್ಲಿ ಪುನರ್ನಾಮಕರಣದ ಮಾದರಿಗಳನ್ನು ಕೃತಿಯು ಒಳಗೊಂಡಿದೆ. ಕೋಲಾರ ಜಿಲ್ಲೆಯ ಸ್ಥಳನಾಮಗಳ ವಿಶೇಷತೆ, ಜಲಸೂಚಿ, ಜನಾಂಗಿಕ ಅಂಶಗಳ ವಿವರಗಳು, ದ್ವಿಭಾಷಿಕ ವಲಯದ ಸ್ಥಳನಾಮಗಳನ್ನು ಕೃತಿಯು ಒಳಗೊಂಡಿದೆ. ಚಿತ್ರದುರ್ಗ ಹಾಗೂ ಕೋಲಾರ ಜಿಲ್ಲೆಯ ಸ್ಥಳನಾಮಗಳಲ್ಲಿನ ಸಾಮ್ಯತೆಯನ್ನು ಲೇಖಕರು ಗುರುತಿಸಿದ್ದಾರೆ. ಸ್ಥಳನಾಮಗಳು ಸಂಸ್ಕೃತೀಕರಣವಾಗುವಿಕೆಯನ್ನು ಕೃತಿಯಲ್ಲಿ ವಿಶ್ಲೇಷಣೆ ಮಾಡಲಾಗಿದೆ.

## ೪. ಕೆಲವು ದೇಶನಾಮಗಳು - ಸೇಡಿಯಾಪು ಕೃಷ್ಣಭಟ್ಟ - ೧೯೭೫

ತುಳು ಭಾಷಾ ಬಳಕೆಯ ಪ್ರದೇಶ, 'ತುಳು', 'ಚೇರ', 'ಕೊಂಕಣ', 'ಪಾಂಡಿ-ಪಾಂಡ್ಯ' ಪದಗಳ ನಿಷ್ಪತ್ತಿಯ ಅಧ್ಯಯನವನ್ನು ಒಳಗೊಂಡಿದೆ. ಈ ಶಬ್ದಗಳು ದೇಶವಾಚಕ ಶಬ್ದವೆಂದು ಗುರುತಿಸಿರುವ ಲೇಖಕರು, ಅದನ್ನು ಸಮರ್ಥಿಸಲು ಉಪಭಾಷೆ, ವ್ಯಾಕರಣವನ್ನು ಪೂರಕ ಸಾಮಗ್ರಿಯಾಗಿ ಬಳಸಿಕೊಂಡಿದ್ದಾರೆ. ದ್ರಾವಿಡ ಭಾಷೆಗಳಲ್ಲಿ ಅಳ-ಕುಳಗಳ ಪ್ರಯೋಗ ಹಾಗೂ ತುಳು ಭಾಷೆಯಲ್ಲಿ ಬಳಕೆಯಾಗಿರುವ ಅಳ (ಕುಳ) ವಿವರಗಳನ್ನು ಕೃತಿಯು ಒಳಗೊಂಡಿದೆ. ಸಂಸ್ಕೃತಿಯ ಹಿನ್ನೆಲೆಯಲ್ಲಿ ಸ್ಥಳನಾಮಗಳ ಅಧ್ಯಯನವನ್ನು ಮಾಡಲಾಗಿದೆ.

## ೫. ಹೆಸರಿನಲ್ಲೇನಿದೆ? - ಡಾ|| ಆರ್ಕೆ ಮಣಿಪಾಲ - ೧೯೮೯

ಈ ಕೃತಿಯು ಕೆಮ್ತೂರು ರಘುಪತಿ ಭಟ್ಟರ 'ತುಳುನಾಡಿನ ಸ್ಥಳನಾಮಗಳು' ಅಧ್ಯಯನದ ಮುಂದುವರೆದ ಭಾಗವಾಗಿದೆ. ಸ್ಥಳ ನಾಮಾಧ್ಯಯನದ ಸಾಧ್ಯತೆ ಮತ್ತು ಸಾಧನೆ, ಸ್ವರೂಪ ಮತ್ತು ಸಮಸ್ಯೆ, ಸ್ಥಳನಾಮ ಮತ್ತು ವ್ಯಕ್ತಿನಾಮಗಳ ರಾಚನಿಕ ಅಧ್ಯಯನವನ್ನು ಕೃತಿಯು ಒಳಗೊಂಡಿದೆ. ಸ್ಥಳನಾಮಗಳಲ್ಲಿ 'ದೇಶೀಕರಣ'ದ ಪ್ರಕ್ರಿಯೆ, ದಕ್ಷಿಣಭಾರತದ ಸ್ಥಳನಾಮಗಳ ಸಮೀಕ್ಷೆ ಹಾಗೂ, ಸ್ಥಳ ನಾಮಾಧ್ಯಯನ ವಿಷಯಕ್ಕೆ ಪೂರಕ ಮಾಹಿತಿಗಳನ್ನು ಒದಗಿಸುತ್ತವೆ. ಉಡುಪಿ ತಾಲ್ಲೂಕಿನ ಸ್ಥಳನಾಮಗಳಲ್ಲಿನ ವಿಶೇಷತೆಯನ್ನು ಲೇಖಕರು ಗುರುತಿಸಿ ಅಧ್ಯಯನ ಮಾಡಿದ್ದಾರೆ.

ಸ್ಥಳನಾಮಾಧ್ಯಯನದಲ್ಲಿ ಭಾಷಾಶಾಸ್ತ್ರೀಯ ಶಿಸ್ತನ್ನು ಒಳಗೊಂಡಂತೆ ಅಧ್ಯಯನ ವಿಧಾನವನ್ನು ಅಳವಡಿಸಿಕೊಳ್ಳಬೇಕೆಂದು ಲೇಖಕರು ಸೂಚಿಸಿದ್ದಾರೆ. ಸ್ಥಳನಾಮಗಳಲ್ಲಿ ಅಡಕವಾಗಿರುವ ಪದಗಳ ಸ್ವರೂಪ ಮತ್ತು ಧ್ವನಿ ನಿಯಮರೀತ್ಯ ಪದಗಳ ಪರಿವರ್ತನೆಯಾಗುವಿಕೆಯನ್ನು ಗುರುತಿಸುವುದು ಮುಖ್ಯವೆಂಬುದು ಲೇಖಕರ ವಿಶ್ಲೇಷಣೆಯಾಗಿದೆ.

ಈ ವಾದವನ್ನು ಸಮರ್ಥಿಸಲು ಪೂರಕವಾದ ಕ್ಷೇತ್ರಕಾರ್ಯ ಅತ್ಯವಶ್ಯವಾಗಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಸ್ಥಳನಾಮಗಳಲ್ಲಿನ ವ್ಯಕ್ತಾಂಶ ಹಾಗೂ ಪ್ರತಿರೂಪಗಳು (Duplication), ಸಂಸ್ಕೃತೀಕರಣವಾಗಿರುವಿಕೆಯನ್ನು ಅಧ್ಯಯನದಲ್ಲಿ ಗುರುತಿಸಬೇಕೆಂದು ಲೇಖಕರು ವಿವರಿಸುತ್ತಾರೆ.

## ೬. ಸ್ಥಳನಾಮಗಳು - ಡಾ|| ಕೆ. ವಿಶ್ವನಾಥ - ೧೯೯೬

ಸ್ಥಳನಾಮ ಅಧ್ಯಯನಕಾರರಿಗೆ ಅವಶ್ಯವಿರುವ ವಾರ್ಗಿಕಗಳ ವಿಭಾಗ ಕ್ರಮಗಳನ್ನು ಹಾಗೂ ಮೂಲಭೂತ ಸಿದ್ಧತೆಗಳನ್ನು ಮಾಡಿಕೊಳ್ಳಬೇಕಾದುದರ ವಿವರಗಳನ್ನು ಕೃತಿಯು ಒಳಗೊಂಡಿದೆ. ಐತಿಹಾಸಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನೊಳಗೊಂಡಂತೆ ಇಲ್ಲಿ ಅಧ್ಯಯನ ಮಾಡಲಾಗಿದೆ. ಮಾನವನ ಸಮಗ್ರ ಇತಿಹಾಸ ಅರಿಯಲು ಸ್ಥಳನಾಮಗಳು ಸಹಾಯಕವಾಗಿದೆ. ಪುರಾತನ ಮಾನವರು ಊರು-ಕೇರಿ ನಿರ್ಮಾಣ ಮಾಡಿಕೊಂಡ ರೀತಿ, ವೃತ್ತಿ ಹಾಗೂ ಸಂಸ್ಕೃತಿಗಳನ್ನು ಸೃಷ್ಟಿಸಿಕೊಂಡ ರೀತಿಯನ್ನು ಕೃತಿಯು ಒಳಗೊಂಡಿದೆ. ಕರ್ನಾಟಕದ ಜಿಲ್ಲಾ ಕೇಂದ್ರಗಳ ಸ್ಥಳನಾಮ ನಿಷ್ಪತ್ತಿಯ ವಿಶ್ಲೇಷಣೆಯನ್ನು ಕೃತಿಯು ಒಳಗೊಂಡಿದೆ.

## ೭. ಸ್ಥಳನಾಮ ವಿಜ್ಞಾನ - ಡಾ|| ಎಂ.ಎಂ. ಕಲ್ಬುರ್ಗಿ - ೧೯೮೯

ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಹಾಗೂ ಭಾಷಿಕ ಸ್ತರಗಳಲ್ಲಿ ನಾಮವಿಜ್ಞಾನದ ಅಧ್ಯಯನವನ್ನು ಕೃತಿಯು ಒಳಗೊಂಡಿದೆ. ನಾಮರೂಪ ಹಾಗೂ ಅರ್ಥಕ್ಕೆ ಹೆಚ್ಚು ಮಹತ್ವ ನೀಡಿರುವ ನಾಮಾಧ್ಯಯನವು ಸಂಸ್ಕೃತಿಯ ಅಧ್ಯಯನಕ್ಕೆ ಗಮನ ನೀಡಿಲ್ಲವೆಂಬುದನ್ನು ಲೇಖಕರು ಗುರುತಿಸಿದ್ದಾರೆ. ಅಧ್ಯಯನ ವಿಧಾನ, ಉದ್ದೇಶ, ಆಕರ ಸಾಮಗ್ರಿ, ನಾಮಕರಣ ನಡೆದುಬಂದ ದಾರಿ, ನಾಮದ ರಾಚನಿಕ ಸ್ವರೂಪ ಹಾಗೂ ಆಧುನಿಕ ನಾಮಕರಣ ಕುರಿತ ವಿಷಯಗಳನ್ನು ಕೃತಿಯಲ್ಲಿ ವಿವರಿಸಲಾಗಿದೆ.

ಕುಟುಂಬನಾಮ, ಗ್ರಾಮನಾಮ ಹಾಗೂ ಗ್ರಾಮ ಸೃಷ್ಟಿ ಮತ್ತು ರಚನೆಗೆ ಸಂಬಂಧಿಸಿದಂತೆ ರಾಚನಿಕ ಸ್ವರೂಪಗಳ ವಿವರಣೆಯನ್ನು ಕೃತಿಯು ಒಳಗೊಂಡಿದೆ. ಸ್ಥಳನಾಮಗಳ ನಿಷ್ಪತ್ತಿಯಲ್ಲಿ ಪಂಡಿತ ನಿಷ್ಪತ್ತಿ, ಪಾಮರ ನಿಷ್ಪತ್ತಿ ಹಾಗೂ ನಿಜ ನಿಷ್ಪತ್ತಿ ಎಂದು ಮೂರು ವಿಭಾಗ ಮಾಡಿಕೊಂಡಲ್ಲಿ ವಸ್ತುನಿಷ್ಠ ಅಧ್ಯಯನ ಸಾಧ್ಯವೆಂದು ಲೇಖಕರು ವಿವರಿಸಿದ್ದಾರೆ.

## ೮. ವಾಗರ್ಥ - ಡಾ|| ಎಂ. ಚಿದಾನಂದ ಮೂರ್ತಿ, ೧೯೮೧

ಸ್ಥಳನಾಮ ಹಾಗೂ ವ್ಯಕ್ತಿನಾಮ ಕುರಿತ ಲೇಖನಗಳು ಈ ಕೃತಿಯಲ್ಲಿದ್ದು , ನಾಮಾಧ್ಯಯನ ಮಾಡಲು ಬೇಕಾದ ವರ್ಗೀಕರಣಗಳನ್ನು ಲೇಖನಗಳು ಒಳಗೊಂಡಿವೆ. 'ಕರ್ನಾಟಕ ಸ್ಥಳನಾಮಗಳು' ಲೇಖನವು, ಸ್ಥಳನಾಮಗಳಲ್ಲಿ ನಿರ್ದಿಷ್ಟ ಹಾಗೂ ವಾರ್ಗಿಕಗಳ ವರ್ಗೀಕರಣ, ಭಾಷಿಕ, ಸಾಮಾಜಿಕ ದೃಷ್ಟಿಯಿಂದ ಸ್ಥಳನಾಮಾಧ್ಯಯನ ಹಾಗೂ ಸ್ಥಳನಾಮಗಳ ಇತಿಹಾಸವನ್ನು ವಿಶ್ಲೇಷಿಸಿದೆ. ವರ, ವಾರ ವಾರ್ಗಿಕಗಳಿಂದ ಕೊನೆಯಾಗುವ ವಾರ್ಗಿಕಗಳ ವಿವರವನ್ನು ಕೃತಿಯು ಒಳಗೊಂಡಿದೆ. ಲಂಬಾಣಿ ತಾಂಡ್ಯಾಗಳಿಗೆ ಸಂಬಂಧಿಸಿದಂತೆ ಇರುವ ಎರಡು ಹೆಸರುಗಳ ವಿವರಣೆಗಳನ್ನು ಕೃತಿಕಾರರು ಮಾಡಿದ್ದಾರೆ. ತಮ್ಮ ಗುಂಪಿನ ನಾಯಕನ ಹೆಸರಿನಲ್ಲಿ ಲಂಬಾಣಿ ತಾಂಡ್ಯಾಗಳು ತಮ್ಮ ನೆಲೆಯನ್ನು

ಗುರುತಿಸಿಕೊಳ್ಳುವಿಕೆಯ ವಿವರವನ್ನು ನೀಡಿದ್ದಾರೆ. ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಊರ ಹೆಸರಿನ ಕೊನೆಯಂಶಗಳಾದ ಬ್ರಾಹ್ಮಣ, ಅಗ್ರಹಾರ, ಮಂಗಲ, ಆಲ, ಬೊಮ್ಮ, ಶ್ರೋತ್ರೀಯ, ಮಹಾಜನ, ಹಾರೂ (ಹಾರುವ) ಮುಂತಾದ ಪದಗಳು ಊರಿನ ಹೆಸರಿನಲ್ಲಿದ್ದರೆ, ಅವು ಬ್ರಾಹ್ಮಣರ ದಾನದ ಊರುಗಳೆಂದು ಲೇಖಕರು ವಿವರಿಸಿದ್ದಾರೆ.

'ದೇಕಟ್ಟೆ ಶಾಸನಗಳ ಊರುಗಳು - ಲೇಖನದಲ್ಲಿ ಇತಿಹಾಸಕ್ಕೆ ಸಂಬಂಧಪಟ್ಟಂತೆ ಉಲ್ಲೇಖಿತವಾಗಿರುವ ಊರುಗಳನ್ನು ಗುರುತಿಸಲಾಗಿದೆ.

## ೯. ಚನ್ನಪಟ್ಟಣ ತಾಲ್ಲೂಕಿನ ಸ್ಥಳನಾಮಗಳು - ಬೊಮ್ಮೇಗೌಡ - ೧೯೯೫

ಇದು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಶ್ರೀ ಬೊಮ್ಮೇಗೌಡರು ಸಲ್ಲಿಸಿರುವ ಅಪ್ರಕಟಿತ ಎಂ.ಫಿಲ್. ನಿಬಂಧವಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನ ಸ್ಥಳನಾಮಗಳ ಭೌಗೋಳಿಕ, ಸಾಮಾಜಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನವನ್ನು ಈ ನಿಬಂಧವು ಒಳಗೊಂಡಿದೆ. ನಿರ್ದಿಷ್ಟಗಳಿಗೆ ಅನುಗುಣವಾಗಿ ತಾಲ್ಲೂಕಿನ ಎಲ್ಲಾ ಊರುಗಳನ್ನು ವಿಂಗಡಿಸಲಾಗಿದೆ. ಕೆಲವು ಸ್ಥಳನಾಮಗಳ ಸ್ಥಳಪುರಾಣ ಹಾಗೂ ಐತಿಹ್ಯಗಳನ್ನು ನಿಬಂಧವು ಒಳಗೊಂಡಿದೆ. ಸ್ಥಳನಾಮಗಳ ಶಾಸ್ತ್ರೀಯ ಅಧ್ಯಯನಕ್ಕೆ ಹಾಗೂ ಸ್ಥಳನಾಮಗಳ ನಿಷ್ಪತ್ತಿಗೆ ಹೆಚ್ಚು ಮಹತ್ವ ನೀಡದೆ, ಸ್ಥೂಲ ಪರಿಚಯವನ್ನು ನಿಬಂಧವು ಒಳಗೊಂಡಿದೆ.

## ೧೦. ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು - ಡಾ॥ ಎ. ಸುಬ್ಬಣ್ಣ ರೈ - ೧೯೯೪

ಇದು ಮುಂಬೈ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುವ ಪಿಎಚ್.ಡಿ. ನಿಬಂಧವಾಗಿದೆ. ಐತಿಹ್ಯ ಪದದ ನಿಷ್ಪನ್ನ ಐತಿಹ್ಯ - ದಂತಕತೆ - ಸ್ಥಳಪುರಾಣದ ನಡುವಿನ ವ್ಯತ್ಯಾಸವನ್ನು ಲೇಖಕರು ಗುರುತಿಸಿದ್ದಾರೆ. ಐತಿಹಾಸಿಕ ಕುರುಹು, ಅವಶೇಷಗಳು, ಐತಿಹ್ಯಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಿದ್ದು, ನೈಜ ಘಟನೆಗಳನ್ನು ಗುರುತಿಸಲು ಸಹಾಯಕವೆಂದು ಲೇಖಕರು ವಿವರಿಸಿದ್ದಾರೆ.

ಸ್ಥಳಪುರಾಣಕ್ಕೆ ಐತಿಹಾಸಿಕ, ಸಾಮಾಜಿಕ ಸಂಗತಿಗಳು ಹೊಂದಿಕೆಯಾಗುವುದಿಲ್ಲ. ಜನಪದರ ದೃಷ್ಟಿಕೋನಗಳನ್ನು ಐತಿಹ್ಯಗಳಲ್ಲಿ ಗುರುತಿಸಬಹುದು. ಇವರನ್ನು ಸೃಷ್ಟಿಕರ್ತರು - ಪ್ರಸಾರಕರು - ಶ್ರೋತೃಗಳೆಂದು ವಿಂಗಡಿಸಿದ್ದಾರೆ. ಜೀವನದಲ್ಲಿನ ಸಂಘರ್ಷ, ಸಮಾನತೆ, ಆರ್ಥಿಕ ಸಾಧನೆ ಮತ್ತು ಸ್ವಾರ್ಥತೆ ಮುಂತಾದ ಅಂಶಗಳನ್ನು ಕೃತಿಯಲ್ಲಿ ಗುರುತಿಸಬಹುದು. ಈ ಮೂಲಕ ಸ್ಥಳನಾಮ ಅಧ್ಯಯನಕ್ಕೆ ಬೇಕಾದ ಮೂಲಭೂತ ಅಂಶಗಳನ್ನು ಅರಿಯಲು ಕೃತಿಯು ಸಹಾಯಕವಾಗಿದೆ.

## ೧೧. ಆಂಧ್ರ-ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು - ಡಾ॥ ಜಾಜಿ ದೇವೇಂದ್ರಪ್ಪ - ೨೦೦೨

ಈ ಕೃತಿಯು ಕನ್ನಡ ವಿಶ್ವವಿದ್ಯಾನಿಲಯಕ್ಕೆ, ಡಾ॥ ಜಾಜಿ ದೇವೇಂದ್ರಪ್ಪನವರು ಸಲ್ಲಿಸಿರುವ ಪಿಎಚ್.ಡಿ. ನಿಬಂಧವಾಗಿದೆ. ಕರ್ನಾಟಕ-ಆಂಧ್ರ ಗಡಿನಾಡಿನ ಸ್ಥಳನಾಮಗಳ ತೌಲನಿಕ ಅಧ್ಯಯನವಾಗಿದೆ. ಗಡಿನಾಡ ಭಾಗಗಳಲ್ಲಿ ಕ್ಷೇತ್ರಕಾರ್ಯ ಮಾಡುವ ವಿಧಾನ ಹಾಗೂ ಪೂರಕ ಪ್ರಶ್ನೆಗಳ ವಿವರಗಳನ್ನು ಲೇಖಕರು ನೀಡಿದ್ದಾರೆ.

ಕರ್ನಾಟಕದ ಬಳ್ಳಾರಿ ಜಿಲ್ಲೆ ಹಾಗೂ ಆಂಧ್ರದ ಕರ್ನೂಲು ಜಿಲ್ಲೆಯ ಗಡಿ ತಾಲ್ಲೂಕುಗಳಲ್ಲಿನ ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ ಭಾಷಿಕ ಹಾಗೂ ವಿವಿಧ ವರ್ಗೀಕರಣಗಳ ನೆಲೆಯಲ್ಲಿ ತೌಲನಿಕ ವಿವರಗಳನ್ನು ಕೃತಿಯಲ್ಲಿ ಗಮನಿಸಬಹುದು. ಕನ್ನಡ ಹಾಗೂ ತೆಲುಗು ಭಾಷೆಗಳ ಸ್ಥಳನಾಮಗಳಲ್ಲಿನ ಸಾಮ್ಯತೆ, ಪರಸ್ಪರ ಪ್ರಭಾವ, ಐತಿಹ್ಯ, ಗಾದೆ, ಒಗಟುಗಳು, ದ್ವಿಭಾಷಿಕ ವಲಯದಲ್ಲಿನ ಲಕ್ಷಣಗಳನ್ನು ಅಧ್ಯಯನವು ಒಳಗೊಂಡಿದೆ. ಸ್ಥಳನಾಮಾಧ್ಯಯನದ ಇತಿಹಾಸವನ್ನು ಗುರುತಿಸುತ್ತ, ಕನ್ನಡ ಭಾಷೆಯ ಬಹುತೇಕ ಕೃತಿಗಳು, ಬರಹಗಳು, ಉಪಲಬ್ಧ ತೆಲುಗು ಕೃತಿಗಳ ಸಮಗ್ರ ಮಾಹಿತಿಯ ಅವಲೋಕನದ ವಿವರಗಳು ಕೃತಿಯಲ್ಲಿದೆ.

### ೧೨. ಕರ್ನಾಟಕ ಗೆಝೆಟಿಯರ್-೩ - ಕರ್ನಾಟಕ ಸರ್ಕಾರದ ಪ್ರಕಟಣೆ - ೧೯೮೬

ಕರ್ನಾಟಕದ ವಿವರಗಳನ್ನೊಳಗೊಂಡಿರುವ ಮೂರನೇ ಭಾಗದಲ್ಲಿ, ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳ ವಿವರಣೆಯನ್ನು ನೀಡಲಾಗಿದೆ. ಇದು ಕೆಲವು ಸ್ಥಳನಾಮಗಳ ನಿಷ್ಪತ್ತಿಯನ್ನೂ , ವಿವರಗಳನ್ನೂ ಒಳಗೊಂಡಿದೆ. ರಾಜಕೀಯ, ಭೌಗೋಳಿಕ ಪರಿಸರ, ಪ್ರಕೃತಿ ಸೌಂದರ್ಯ, ಉದ್ದಿಮೆಗಳಿಂದ, ನೀರಾವರಿ ಯೋಜನೆಗಳಿಂದ ಖ್ಯಾತಿಯನ್ನು ಪಡೆದಿರುವ ಪ್ರಾಚೀನ ಸ್ಥಳನಾಮಗಳ ಪರಿಚಯವನ್ನು ಕೃತಿಯಲ್ಲಿ ಗಮನಿಸಬಹುದು. ಐತಿಹಾಸಿಕವಾಗಿ ಮಹತ್ವ ಪಡೆದ ಊರುಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ.

### ೧೩. ಭಾಷೆ - ವಿಶ್ವಕೋಶ, ಕನ್ನಡ ವಿಶ್ವವಿದ್ಯಾನಿಲಯ, ಸಂ. ಕೆ.ವಿ. ನಾರಾಯಣ

'ಹೆಸರುಗಳು' ಎಂಬ ಲೇಖನದಲ್ಲಿ ಡಾ|| ಕೆ.ಎಂ. ವೀರಭದ್ರ ಶರ್ಮರವರು ಸ್ಥಳನಾಮ ಹಾಗೂ ವ್ಯಕ್ತಿನಾಮ ಕುರಿತು ವಿವರಿಸಿದ್ದಾರೆ. ಸ್ಥಳನಾಮಗಳ ಪ್ರಾಥಮಿಕ ವಿವರಗಳಿಗೆ ಸಂಬಂಧಪಟ್ಟಂತೆ ಸ್ಥೂಲವಾದ ಪರಿಚಯಾತ್ಮಕ ಲೇಖನವಾಗಿದ್ದು , ವಿಶಿಷ್ಟ ಘಟಕಗಳ ವರ್ಗೀಕರಣವನ್ನು ಗುರುತಿಸಲಾಗಿದೆ.

ಭೌಗೋಳಿಕ ಸ್ಥಿತಿ, ಶಿಲಾವಾಚಿ, ಜಲವಾಚಿ, ಪ್ರಾಣಿವಾಚಿ, ಸಸ್ಯವಾಚಿ, ಸಾಮಾಜಿಕ, ಪೌರಾಣಿಕ, ಐತಿಹಾಸಿಕ ಹಾಗೂ ಧಾರ್ಮಿಕ ವಿವರಗಳನ್ನೊಳಗೊಂಡಂತೆ ಸ್ಥಳನಾಮ ನಿಷ್ಪತ್ತಿಗೆ ಕಾರಣವಾಗುವ ಅಂಶಗಳ ವಿವರಣೆಗಳನ್ನು ನೀಡಲಾಗಿದೆ. ಹೆಸರುಗಳ ಅಧ್ಯಯನಕ್ಕೆ ಮಹತ್ವ ದೊರೆಯಬೇಕೆಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

### ೧೪. ಸ್ಥಳನಾಮಗಳು : ಪರಿವರ್ತನೆ ಮತ್ತು ಪ್ರಭಾವ, ಕನ್ನಡ ವಿಶ್ವವಿದ್ಯಾಲಯ, ಸಂ. ಕೆ.ವಿ. ನಾರಾಯಣ

ಸ್ಥಳನಾಮಗಳ ಮೇಲೆ ಆಗಿರುವ ಪ್ರಭಾವಗಳು ಹಾಗೂ ಪರಿವರ್ತನೆಗಳನ್ನು ಕುರಿತ ಐದು ಲೇಖನಗಳು ಹಾಗೂ ಕರ್ನಾಟಕದಲ್ಲಿ ನಡೆದಿರುವ ಸ್ಥಳನಾಮಾಧ್ಯಯನ ಇತಿಹಾಸವನ್ನು ಕುರಿತು ಬರೆದ ಲೇಖನವನ್ನು ಒಳಗೊಂಡಿದೆ.

ಡಾ|| ಎ. ಗೋಪಾಲಕೃಷ್ಣರವರು, ಕರ್ನಾಟಕದ ಸ್ಥಳನಾಮಗಳ ಮೇಲೆ ಸಂಸ್ಕೃತ ಭಾಷೆಯ ಪ್ರಭಾವದಿಂದ, ಸ್ಥಳನಾಮ ರಚನೆಯಲ್ಲಿನ ಪರಿವರ್ತನೆಗಳನ್ನು ಗುರುತಿಸಿದ್ದಾರೆ. ಆಂಗ್ಲರ ಆಡಳಿತದ ಸಂದರ್ಭದಲ್ಲಿ, ಇಂಗ್ಲಿಷ್ ಭಾಷೆಯ ಹಾಗೂ ಸಂಸ್ಕೃತಿಯ ಪ್ರಭಾವದಿಂದ ಸೃಷ್ಟಿಯಾದ ಸ್ಥಳನಾಮಗಳನ್ನು ಡಾ|| ಪಾಂಡುರಂಗ ಬಾಬುರವರು ವಿವರಿಸಿದ್ದಾರೆ. ಕರ್ನಾಟಕದ ಸ್ಥಳನಾಮಗಳ ಮೇಲೆ ದ್ರಾವಿಡ ಭಾಷಾ ಪ್ರಭಾವಗಳನ್ನು ಡಾ|| ಎನ್.ಎಸ್.

ಅಂಗಡಿಯವರು ವಿವರಿಸಿದ್ದಾರೆ. ಮರಾಠಿ ಭಾಷೆಯ ಪ್ರಭಾವದಿಂದ ಸೃಷ್ಟಿಯಾಗಿರುವ ಸ್ಥಳನಾಮಗಳು, ಪ್ರಾಕೃತ ಶಾಸನಗಳಲ್ಲಿ ಕಂಡುಬಂದಿರುವ ಸ್ಥಳನಾಮಗಳ ವಿವರಗಳನ್ನು ಎಂ.ಜಿ. ನೇಗಿನಹಾಳ್‌ರವರು, ಇಸ್ಲಾಂ - ಉರ್ದು ಪ್ರಭಾವದಿಂದ ಸ್ಥಳನಾಮಗಳ ಬಗ್ಗೆ ಡಾ|| ಕೆ.ಎಂ. ವೀರಭದ್ರ ಶರ್ಮರವರು ವಿವರಿಸಿದ್ದಾರೆ.

### ೧೫. ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ - ಡಾ|| ವಿಶ್ವನಾಥ - ೨೦೦೦

ಡಾ|| ಕೆ. ವಿಶ್ವನಾಥರ 'ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ' ಕೃತಿಯು ಸ್ಥಳನಾಮ ಅಧ್ಯಯನ ಹಿನ್ನೆಲೆಯಲ್ಲಿರುವ ಮೂಲಭೂತ ಅಂಶಗಳನ್ನು ಹಾಗೂ ಸ್ಥಳನಾಮ ಅಧ್ಯಯನ ಹಿನ್ನೆಲೆಯಲ್ಲಿರುವ ಮೂಲಭೂತ ಅಂಶಗಳನ್ನು ಒಳಗೊಂಡಿದೆ. ಗ್ರಾಮನಾಮ ಚರಿತ್ರೆಯ ಬಗ್ಗೆ ವಿವರಿಸುತ್ತಾ, ಮಾತೃಗ್ರಾಮ ನಿರ್ಮಾಣವಾಗುವ ಮೊದಲಿನ ಇತಿಹಾಸದ ವಿವರಗಳನ್ನೂ , ಗ್ರಾಮನಾಮದ ಅರ್ಥವನ್ನೂ ಅವುಗಳ ವಿವಿಧ ವಾರ್ಗಿಕಗಳನ್ನು ಗುರುತಿಸಲಾಗಿದೆ. ನಿಸರ್ಗವಾಚಿ, ವಸತಿವಾಚಿ ಹಾಗೂ ನಿರ್ಮಾಣವಾಚಿ ಎಂದು ಮೂರು ಹಂತದಲ್ಲಿ ನಿರ್ಮಾಣಗೊಂಡಿರುತ್ತವೆಂದೂ ಅವುಗಳ ಸೃಷ್ಟಿಯ ಹಿನ್ನೆಲೆಯನ್ನು ಗುರುತಿಸಿದ್ದಾರೆ. ಕರ್ನಾಟಕ ಚರಿತ್ರೆಯಲ್ಲಿ ವಿವಿಧ ರಾಜರುಗಳ ಕಾಲದಲ್ಲಿ ನಿರ್ಮಾಣವಾಗಿರುವ ಗ್ರಾಮನಾಮಗಳ ಕುರುಹುಗಳನ್ನು ಇಲ್ಲಿ ಗುರುತಿಸಲಾಗಿದೆ. ಗ್ರಾಮನಾಮಗಳು ಸಂಸ್ಕೃತಿಯ ಭಾಗವಾಗಿದ್ದು, ಸಂಸ್ಕೃತಿಯ ವಿವಿಧತೆಯನ್ನು ನಿದರ್ಶನಗಳ ಮೂಲಕ ವಿವರಿಸಲಾಗಿದೆ. ಗ್ರಾಮನಾಮ ಅಧ್ಯಯನ ಮಾಡುವ ಸಂಶೋಧಕರಿಗೆ ಪ್ರಾಕೃತಿಕ ವಿಜ್ಞಾನದ ಪರಿಚಯ ಇರಬೇಕಾದುದರ ಆವಶ್ಯಕತೆಯನ್ನು ವಿವರಿಸಲಾಗಿದೆ.

ಹಾಸನ ಜಿಲ್ಲೆಯ ಗ್ರಾಮನಾಮಗಳಲ್ಲಿರುವ ವಿಶೇಷತೆಯನ್ನು ಗುರುತಿಸುವುದರ ಜೊತೆಗೆ ಎಲ್ಲಾ ಪ್ರದೇಶಗಳಲ್ಲಿಯೂ ಇರಬಹುದಾದ ಸಮಾನಾಂಶಗಳನ್ನು ಇಲ್ಲಿ ಗುರುತಿಸಲಾಗಿದೆ.

### ೧೬. ಕರ್ನಾಟಕ ಯಾತ್ರೆ - ಜೀರಗೆ ಕಟ್ಟಿ ಬಸವಪ್ಪ(ಕ.ಸಾ.ಪ. ಪ್ರಕಟಣೆ) - ೧೯೭೩

ಕರ್ನಾಟಕ ರಾಜ್ಯದಲ್ಲಿ ಹಿಂದೆ ಇದ್ದಂತಹ ಹತ್ತೊಂಬತ್ತು ಜಿಲ್ಲಾ ಕೇಂದ್ರಗಳ ವಿವರಗಳನ್ನೊಳಗೊಂಡಂತೆ ಹಲವು ಸ್ಥಳಗಳ ಪ್ರಸಿದ್ಧಿಗೆ ಕಾರಣವಾದ ಅಂಶಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಸ್ಥಳನಾಮ ನಿಷ್ಪತ್ತಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡದೆ, ಆ ಸ್ಥಳಗಳ ಇತಿಹಾಸ ಹಾಗೂ ಸಂಸ್ಕೃತಿ, ವ್ಯವಹಾರ, ಧಾರ್ಮಿಕ ಅಂಶಗಳನ್ನು ಸ್ಥಳ ಪರಿಚಯದ ಈ ಕೃತಿಯಲ್ಲಿ ವಿವರಣೆ ನೀಡಲಾಗಿದೆ.

ಸ್ಥಳನಾಮಗಳ ಹಿನ್ನೆಲೆ, ಪರಿಸರ, ಭೌಗೋಳಿಕ ಲಕ್ಷಣಗಳನ್ನು ತಿಳಿಸುವ ಈ ಕೃತಿಯು, ಕ್ಷೇತ್ರಕಾರ್ಯ ಮಾಡುವವರಿಗೆ ಮೂಲಭೂತ ವಿವರಗಳನ್ನು ಒದಗಿಸುತ್ತವೆ.

### ೧೭. ಕರ್ನಾಟಕ ಗ್ರಾಮಸೂಚಿ - ೧೯೮೫ (ಕನ್ನಡ ಸಂಸ್ಕೃತಿ ಇಲಾಖೆ ಪ್ರಕಟಣೆ)

'ಕರ್ನಾಟಕ ಗ್ರಾಮಸೂಚಿ'ಯು ತಾಲ್ಲೂಕು ಹಾಗೂ ಜಿಲ್ಲಾವಾರು ಸ್ಥಳನಾಮಗಳ ಪಟ್ಟಿಯನ್ನು ಒಳಗೊಂಡಿದೆ. ಬೇಚರಾಕ್ ಗ್ರಾಮ, ಈ ಸ್ಥಳನಾಮಗಳಿಗೆ ಇರುವ ಪರ್ಯಾಯ ನಾಮಗಳನ್ನು ಒಳಗೊಂಡಿದ್ದು, ತಾಲ್ಲೂಕು

ಹಾಗೂ ಜಿಲ್ಲೆಗಳ ಸ್ಥಳನಾಮಗಳ ಮರು ವಿಂಗಡಣೆಯ ವಿವರಗಳನ್ನು ಈ ಕೃತಿಯು ಒಳಗೊಂಡಿಲ್ಲ. ಸ್ಥಳನಾಮಗಳ ತಾಲ್ಲೂಕುವಾರು ಪಟ್ಟಿಯನ್ನು ಪಡೆಯಲು ಸಹಾಯಕವಾಗಿರುವ ಕೃತಿಯಾಗಿದೆ.

### ೧೮. ಜನಪ್ರಿಯ ೩೦೦ ಸ್ಥಳನಾಮಗಳು - ಬೆ.ಗೋ. ರಮೇಶ್ - ೧೯೯೪

ಕರ್ನಾಟಕ ರಾಜ್ಯದ ಜಿಲ್ಲಾ ಕೇಂದ್ರದ ಹೆಸರಿನ ನಿಷ್ಪನ್ನ, ಜಿಲ್ಲೆಯಲ್ಲಿರುವ ಹಲವು ಸ್ಥಳನಾಮಗಳ ನಿಷ್ಪನ್ನ, ಸ್ಥಳನಾಮಗಳಿಗೆ ಸಂಬಂಧಪಟ್ಟಂತೆ ಐತಿಹ್ಯ, ಇತಿಹಾಸ, ಪುರಾಣ ಹಾಗೂ ಮೌಖಿಕ ಪರಂಪರೆಗಳ ಹಿನ್ನೆಲೆಯಲ್ಲಿ ವಿವರಣೆ ನೀಡಲಾಗಿದೆ. ಇದು ಸಂಶೋಧನಾತ್ಮಕ ಕೃತಿಯಲ್ಲದಿದ್ದರೂ, ಸ್ಥಳಗಳ ಹಿನ್ನೆಲೆ ತಿಳಿಯಲು ಪೂರಕ ಮಾಹಿತಿಗಳು ದೊರೆಯುತ್ತವೆ. ಸ್ಥಳನಾಮ ನಿಷ್ಪತ್ತಿಯ ಬಗ್ಗೆ ಆಸಕ್ತಿ ಹೊಂದಿದವರಿಗೆ ಸ್ಥೂಲ ವಿವರಣೆಯನ್ನು ಕೃತಿಯು ನೀಡುತ್ತದೆ.

### ೧೯. ದೇವನಹಳ್ಳಿ ತಾಲ್ಲೂಕು ದರ್ಶನ - ಬೆ.ಕಾ. ಮೂರ್ತಿಶ್ವರಯ್ಯ - ೧೯೮೬

ಐಬಿಎಚ್ ಪ್ರಕಾಶನದ ಈ ಕೃತಿಯು ದೇವನಹಳ್ಳಿ ತಾಲೂಕಿನ ಇತಿಹಾಸ, ಐತಿಹ್ಯ, ಸಾಮಾಜಿಕ, ಸಾಂಸ್ಕೃತಿಕ, ವ್ಯಾವಹಾರಿಕ ಭೂಲಕ್ಷಣಗಳ ವಿವರಗಳನ್ನು ಒಳಗೊಂಡಿದೆ. ಇತಿಹಾಸ ಹೊರತುಪಡಿಸಿ ಉಳಿದ ಎಲ್ಲಾ ವಿವರಗಳು ಆಧುನಿಕ ವ್ಯವಸ್ಥೆಗಳಿಗೆ ಸಂಬಂಧಿಸಿವೆ.

### ೨೦. ಬೆಂಗಳೂರಿನ ಬಖೈರುಗಳು (ಸಂ. ಡಾ॥ ಜಮುನಾ ಎಂ.) ಬೆಂ. ವಿ.ವಿ. ೨೦೦೬

ಬೆಂಗಳೂರು ವಿಶ್ವವಿದ್ಯಾಲಯದ ಕೆಂಪೇಗೌಡ ಅಧ್ಯಯನ ಪೀಠದ ಮಾಲೆಯಲ್ಲಿ ಪ್ರಕಟವಾಗಿರುವ ಈ ಕೃತಿಯು ಬೆಂಗಳೂರಿನ ಇತಿಹಾಸಕ್ಕೆ ಸಂಬಂಧಪಟ್ಟಂತೆ ಹೊಸ ಮಾಹಿತಿಯನ್ನು ನೀಡಲು ಪ್ರಯತ್ನಿಸಿದೆ. ಅಜ್ಞಾತವಾಗಿದ್ದ ಅಮೂಲ್ಯ ಹಸ್ತಪ್ರತಿಗಳು ದೊರೆತಿದ್ದರಿಂದ, ಯಲಹಂಕ ನಾಡ ಪ್ರಭುಗಳು, ಮೈಸೂರು ಒಡೆಯರು, ಮರಾಠರು, ಹೈದರಾಲಿ, ಟಿಪ್ಪು ಸುಲ್ತಾನ್ ಮುಂತಾದವರ ಇತಿಹಾಸಕ್ಕೆ ಸಂಬಂಧಿಸಿದ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಅಂಶಗಳನ್ನು ಮರು ವಿಶ್ಲೇಷಿಸಲು ಸಾಧ್ಯವಾಗಿದೆ. ಐತಿಹಾಸಿಕ ಮಹತ್ವ ಪಡೆದಿರುವ ಈ ಬಖೈರುಗಳು ಯಲಹಂಕ ನಾಡಪ್ರಭು ಹಾಗೂ ಅವರ ವಂಶದ ಮೂಲ ಪುರುಷನಾದ ಜಯಗೌಡನ ಬಗೆಗಿನ ಮಾಹಿತಿ ನೀಡುತ್ತದೆ. ಮಾಗಡಿ ಪ್ರದೇಶದ ಇತಿಹಾಸ, ಕೆಲವು ಸ್ಥಳ ವಿವರಗಳಿಗೆ ಸಂಬಂಧಪಟ್ಟ ಮಾಹಿತಿಯನ್ನು ಪಡೆಯಲು ಇಲ್ಲಿನ ಬಖೈರುಗಳು ಸಹಾಯಕವಾಗಿವೆ. ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟ ಹಲವಾರು ದೇವಾಲಯಗಳ ವಿವರಗಳು ಸಾಂಸ್ಕೃತಿಕ ಅಂಶಗಳನ್ನು ಪ್ರತಿಬಿಂಬಿಸುತ್ತವೆ. ಮಾಗಡಿ ಪ್ರದೇಶದ ಕೆಲವು ಸ್ಥಳನಾಮಗಳ ಪುನರ್ನಾಮಕರಣ ಹಾಗೂ ಊರು ನಿರ್ಮಾಣದ ಬಗ್ಗೆ ವಿವರಗಳನ್ನು 'ಮಾಗಡಿ ಜಿಲ್ಲೆಯ ಚಾರಿತ್ರಿಕ ಬಖೈರು' ಲೇಖನವು ಒಳಗೊಂಡಿದೆ.

### ೨೧. ಗಡಿನಾಡಿನ ಕಿಡಿ - ಪ್ರಧಾನ ಸಂಪಾದಕರು - ವೈ.ಎಸ್.ವಿ. ಭಟ್ಟ - ೧೯೯೦

ಕೆ. ಸುಬ್ರಹ್ಮಣ್ಯ ಭಟ್ಟರ 'ಕಾಸರಗೋಡು - ಶಬ್ದೋತ್ಪತ್ತಿ ವಿಚಾರ' - ಎಂಬ ಲೇಖನವು ಈ ಕೃತಿಯಲ್ಲಿದ್ದು, 'ಕಾಸರಗೋಡು' ಸ್ಥಳನಾಮದ ಬಗ್ಗೆ ವಿವರಿಸಿದ್ದಾರೆ. ಲಭ್ಯವಿರುವ ಸಾಹಿತ್ಯಗ್ರಂಥ, ಪ್ರವಾಸ ಕಥನ ಹಾಗೂ ಇತರ ಆಕರಗಳನ್ನೂ ಸ್ಥಳನಾಮ ನಿಷ್ಪತ್ತಿಯನ್ನು ವಿಶ್ಲೇಷಿಸಿದ್ದಾರೆ.

## ೨೨. ಅರ್ಕಾವತಿ - ಸಂ. ಎಂ. ಬೈರೇಗೌಡ, ತಾ.ಸಿ. ತಿಮ್ಮಯ್ಯ - ೧೯೯೯

ಈ ಕೃತಿಯು ೬೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆಯಾಗಿದ್ದು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಇತಿಹಾಸ, ಸಂಸ್ಕೃತಿ, ನೆಲ-ಜಲ, ವೃತ್ತಿ, ವಿವಿಧ ತಾಲ್ಲೂಕುಗಳ ಪರಿಚಯಕ್ಕೆ ಸಂಬಂಧಿಸಿದಂತೆ ಲೇಖನಗಳನ್ನು ಒಳಗೊಂಡಿವೆ. ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಕೆಲವು ಲೇಖನಗಳನ್ನು ಕೃತಿಯಲ್ಲಿ ಸೇರಿಸಲಾಗಿದೆ.

ಎನ್. ವೆಂಕಟಪತಿಯವರ 'ಬೆಂಗಳೂರು ಹಿನ್ನೆಲೆ ಪರಿಚಯ' ಲೇಖನದಲ್ಲಿ 'ಬೆಂಗಳೂರು' ಸ್ಥಳನಾಮ ನಿಷ್ಪತ್ತಿಯ ಬಗ್ಗೆ ಕರಾರುವಾಕ್ಕಾದ ತೀರ್ಮಾನ ಇಲ್ಲವಾದರೂ, ಅದಕ್ಕೆ ಸಂಬಂಧಿಸಿದ ಐತಿಹಾಸಿಕ, ಐತಿಹ್ಯದ ವಿವರಗಳನ್ನು ಲೇಖನದಲ್ಲಿ ನೀಡಿದ್ದಾರೆ.[೨]

ಎಂ. ಬೈರೇಗೌಡರ, 'ಕನಕಪುರ ತಾಲ್ಲೂಕಿನ ಗ್ರಾಮದೇವತೆಗಳು ಮತ್ತು ಐತಿಹ್ಯಗಳು' ಲೇಖನವು, ಶಾಸನೋಕ್ತವಾದ ಅನೇಕ ಸ್ಥಳನಾಮಗಳನ್ನು ಒಳಗೊಂಡಿದೆ. ಸ್ಥಳನಾಮಗಳಲ್ಲಿನ ನಿರ್ದಿಷ್ಟಗಳು - ಗ್ರಾಮದೇವತೆಗಳ ಅಸ್ತಿತ್ವವನ್ನೂ, ಅಲ್ಲಿನ ಐತಿಹ್ಯಗಳಿಗೆ ಪೂರಕವಾಗಿರುವುದನ್ನು ಲೇಖನವು ವಿವರಿಸುತ್ತದೆ.

ಎಂ.ಜಿ. ನಾಗರಾಜ್‌ರವರ 'ರಾಮಗಿರಿ, ಶಿವಗಂಗೆ ಮತ್ತು ಕಲ್ಯ ಐತಿಹಾಸಿಕ ಸ್ಥಳಗಳು' ಲೇಖನವು ರಾಮನಗರಕ್ಕೆ ಸಂಬಂಧಿಸಿದಂತೆ ಜಾನಪದ, ಭೌಗೋಳಿಕ ವಿವರಗಳನ್ನು, ರಾಮಗಿರಿ ಕ್ಷೇತ್ರದ ಐತಿಹ್ಯ ಹಾಗೂ ಪರಿಸರದ ಸ್ಥಳಗಳ ಪರಿಚಯ ಒಳಗೊಂಡಿದೆ. ಶಿವಗಂಗೆಗೆ ಸಂಬಂಧಿಸಿದ ಪೌರಾಣಿಕ, ಧಾರ್ಮಿಕ ಅಂಶಗಳ ಪರಿಚಯವನ್ನೂ, ಮಾಗಡಿ-ಕಲ್ಯ ಹಿನ್ನೆಲೆಯನ್ನು ಪರಿಚಯ ಮಾಡಿಕೊಡಲಾಗಿದೆ.

ಸಿ.ಸಿ. ದ್ಯಾವಾಪಟ್ಟಣರವರ 'ಚನ್ನಪಟ್ಟಣ ತಾಲ್ಲೂಕು ದರ್ಶನ' ಲೇಖನದಲ್ಲಿ ,ಕೆಲವು ಐತಿಹಾಸಿಕ, ಸಾಂಸ್ಕೃತಿಕ ಸ್ಥಳನಾಮಗಳ ಪರಿಚಯವನ್ನು ಮಾಡಿಕೊಡಲಾಗಿದೆ.

ಪ್ರೊ|| ಮುನಿರಾಜಪ್ಪನವರ 'ಮಾಗಡಿ ತಾಲ್ಲೂಕಿನ ಇತಿಹಾಸ ಮತ್ತು ಸಂಸ್ಕೃತಿ', ಸಿ.ಎಂ. ವೀರಣ್ಣನವರ 'ದೇವನಹಳ್ಳಿ ತಾಲ್ಲೂಕಿನ ಧಾರ್ಮಿಕ ಹಿನ್ನೆಲೆ ಹಾಗೂ ಪ್ರೇಕ್ಷಣೀಯ ಸ್ಥಳಗಳು, ಕೆ. ಕೃಷ್ಣಪ್ಪನವರ 'ಹೊಸಕೋಟೆ ತಾಲ್ಲೂಕು ಸಂಕ್ಷಿಪ್ತ ದರ್ಶನ', ಎಂ.ಜಿ. ನಾಗರಾಜ್‌ರವರ 'ರಾಮನಗರ ತಾಲ್ಲೂಕಿನ ಸ್ಥಳನಾಮಗಳು' ಮೊದಲಾದ ಲೇಖನಗಳನ್ನು ಕೃತಿಯು ಒಳಗೊಂಡಿದ್ದು ಕೆಲವು ಸ್ಥಳನಾಮಗಳ ಸ್ಥೂಲ ಪರಿಚಯವನ್ನು ಕೃತಿಯು ಒಳಗೊಂಡಿದೆ.

## ೨೩. ಸ್ಥಳನಾಮ ಐತಿಹ್ಯಗಳು - ಡಾ|| ಎಂ. ಬೈರೇಗೌಡ, ಕೆ.ಪಿ. ದೊಡ್ಡಿ - ೧೯೯೦

ರಾಮನಗರ, ಕನಕಪುರ, ಆನೇಕಲ್ ತಾಲ್ಲೂಕುಗಳಲ್ಲಿನ ಬೂದೊಡ್ಡಿ ಮಹೇಶ್ವರ, ತಗಚೆ ಹೊಗೆ, ಬಟ್ಟಲು ಗುಂಡೇಶ್ವರ, ಕೋಣನ ಕಲ್ಲು ಮುಂತಾದ ನಿರ್ವಾಚಿತ ಸ್ಥಳನಾಮಗಳನ್ನು ಈ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಪುರಾಣ, ಐತಿಹ್ಯ, ನಂಬಿಕೆಗಳ ವಿವರಗಳನ್ನು ಸಂಗ್ರಹಿಸಿ ವಿವರಿಸಿದ್ದಾರೆ.

## ೨೪. ಪವಿತ್ರ ಕ್ಷೇತ್ರಗಳು (ತುಳುಮೂಲ : ತಿರುಮರೈ ತರಂಗಳ್ ಲೇ : ಜಯಸೆಂದಿಲ್‌ನಾಥನ್) - ೧೯೮೯

ಕನ್ನಡಾನುವಾದ : ಡಾ॥ ಕೆ. ಕುಶಾಲಪ್ಪಗೌಡ, ಡಾ॥ ಪಿ.ಎಸ್. ಶ್ರೀನಿವಾಸ, ಡಾ॥ ಕುಲಕರ್ಣಿ, ಡಾ॥ ಓ. ರಾಮಸ್ವಾಮಿ, ಡಾ॥ ಟಿ.ಬಿ. ಸಿದ್ಧಲಿಂಗಯ್ಯ.

ಈ ಕೃತಿಯು ತಮಿಳು ಭಾಷೆಯಿಂದ ಕನ್ನಡಕ್ಕೆ ಅನುವಾದಿತವಾದ ಕೃತಿಯಾಗಿದೆ. ತಮಿಳಿನ ನಯನ್ಮಾರರು ಶಿವನನ್ನು ಹಾಡಿ ಹೊಗಳಿದಾಗ, ಅವರಿಗೆ ಸಾಕ್ಷಾತ್ ಶಿವದರ್ಶನವಾಯಿತೆಂದೂ, ಅಂತಹ ಕ್ಷೇತ್ರಗಳು ಪವಿತ್ರ ಕ್ಷೇತ್ರಗಳಾಗಿವೆ ಎಂಬ ನಂಬಿಕೆಯಿದೆ. ಇಂತಹ ಸ್ಥಳಗಳ ವಿಶೇಷವನ್ನು ಸೂಚಿಸುವ ಸ್ಥಳಪುರಾಣವನ್ನು ಈ ಕೃತಿಯು ಒಳಗೊಂಡಿದೆ. ಶಿವನ ಕ್ಷೇತ್ರಗಳನ್ನು ಸಂದರ್ಶಿಸುವ ಭಕ್ತರಿಗೆ ಅಂತಹ ಸ್ಥಳನಾಮಗಳ ಪ್ರಸ್ತುತ ಹೆಸರುಗಳು, ದೇವಾಲಯಗಳ ವಿವರ, ಮಾರ್ಗಗಳು, ಶಿಲಾಶಾಸನಗಳ ವಿವರಗಳು, ಅಲ್ಲಿರುವ ಮೂರ್ತಿ, ಸ್ಥಳವೃಕ್ಷ ಪವಿತ್ರ ತೀರ್ಥ ಹಾಗೂ ಸ್ಥಳ ಪುರಾಣಗಳ ವಿವರಗಳನ್ನೂ ಕೃತಿಯಲ್ಲಿ ವಿವರಿಸಲಾಗಿದೆ. ಒಟ್ಟು ೨೭೬ ಪವಿತ್ರ ಕ್ಷೇತ್ರಗಳ ಸಾಂಸ್ಕೃತಿಕ ಮಹತ್ವ, ಜಾನಪದ ಹಿನ್ನೆಲೆ, ಸ್ಥಳಪುರಾಣಗಳನ್ನೂ ಸಮಕಾಲೀನ ಆಸಕ್ತಿಯ ಸಂಗತಿಗಳ ವಿವರಗಳನ್ನೂ ಕೃತಿಯು ಹೊಂದಿದೆ. ಸ್ಥಳನಾಮಗಳನ್ನೂ ಒಳಗೊಂಡಂತೆ ಸೃಷ್ಟಿಯಾಗಿರುವ ಸ್ತೋತ್ರಗಳನ್ನು ಕೃತಿಯಲ್ಲಿ ಬಳಸಿಕೊಂಡಿರುವುದರಿಂದ, ಊರಿನ ಹೆಸರಿನ ನಿಷ್ಪನ್ನ ವಾಸ್ತವತೆಗೆ ಹತ್ತಿರವಾಗಿದೆಯೆಂದು ಹೇಳಬಹುದು.

## ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು ಸಂ. ಲಕ್ಷ್ಣಣ ತೆಲಗಾವಿ, ಎಂ.ವಿ. ಶ್ರೀನಿವಾಸ - ೧೯೭೬

ಈ ಕೃತಿಯು ಐತಿಹಾಸಿಕ ಮಹತ್ವ ಪಡೆದ ಸ್ಥಳನಾಮಗಳ ವಿವರವನ್ನು ಒಳಗೊಂಡಿದೆ. ಆದವಾನಿ, ಆಲೂರು, ಉಜ್ಜಯನಿ, ಉಚ್ಚಂಗಿ, ಮಧುರಾಪುರಿ, ಬಳ್ಳಾರಿ, ಮಂತ್ರಾಲಯ, ರಾಮಗಿರಿ, ಇಂಗಳದಾಳು ಮೊದಲಾದ ಊರುಗಳ ಸ್ಥಳೈತಿಹ್ಯ, ಭೌಗೋಳಿಕ ವಿವರ ಹಾಗೂ ಚಾರಿತ್ರಿಕ ಅಂಶಗಳನ್ನೂ ವಿವರಿಸಿದ್ದಾರೆ. 'ಕನ್ನಡ ನಾಡಿನ ಊರುಗಳು' ಲೇಖನವು ಕುಂತಲ ನಾಡಿನ ವಿಸ್ತಾರವನ್ನು ಹೇಳುವುದರ ಜೊತೆಯಲ್ಲಿ ಅನಂತಪುರ, ಬೆಲಗೂರು, ಶೆಟ್ಟಿಯಕೆರೆ, ಹುಳಿಯೂರು, ಹಂಪೆ, ಸಂತೆಬೆನ್ನೂರು - ಮೊದಲಾದ ಸ್ಥಳಗಳ ಶಾಸನೋಕ್ತ ನಿರುಕ್ತಿ, ಐತಿಹಾಸಿಕ ಅಂಶಗಳನ್ನು ದಾಖಲಿಸಿದ್ದಾರೆ. ಆಂಧ್ರಪ್ರದೇಶಕ್ಕೆ ಸೇರಿಕೊಂಡಿರುವ ಅನೇಕ ಊರುಗಳು ಕನ್ನಡ ನಾಡಿನ ಭೌಗೋಳಿಕ ವ್ಯಾಪ್ತಿಯಲ್ಲಿ ಇದ್ದಿತೆಂಬುದು ತಿಳಿದುಬರುತ್ತದೆ.

## ೨೬. ಬಸವಣ್ಣನವರ ಹೆಸರಿರುವ ಊರುಗಳು - ಹೀ.ಚಿ. ಶಾಂತವೀರಯ್ಯ

ಕರ್ನಾಟಕದಲ್ಲಿ ನಡೆದ ವಚನ ಚಳುವಳಿಯಲ್ಲಿ ಬಸವಣ್ಣನವರು ಅತ್ಯಂತ ಪ್ರಮುಖರಾಗಿದ್ದು ಇವರ ಹೆಸರಿನಲ್ಲಿ ಅನೇಕ ಊರುಗಳು ಸೃಷ್ಟಿಯಾಗಿವೆ. 'ಬಸವ' ಎಂಬ ನಿರ್ದಿಷ್ಟವಿರುವ ಊರುಗಳಲ್ಲಿ ಅನೇಕ ಊರುಗಳು ಬಸವಣ್ಣನವರಿಂದಲೇ ಸೃಷ್ಟಿಯಾದುದೆಂದು ಲೇಖಕರ ಅಭಿಪ್ರಾಯವಾಗಿದೆ. ಬಸವಪುರ, ಬಸವನಹಳ್ಳಿ, ಬಸವಾಪಟ್ಟಣ ಎಂಬ ಊರುಗಳನ್ನೂ ಉದಾಹರಣೆಯಾಗಿ ನೀಡಿ ಸುಮಾರು ೧೩೬ ಊರುಗಳನ್ನು ತಮ್ಮ ಲೇಖನದಲ್ಲಿ ಸೂಚಿಸಿದ್ದಾರೆ. 'ಬಸವ' ಎಂಬುದು ಬಸವಣ್ಣನವರ ಹೆಸರನ್ನು ಸೂಚಿಸುವುದಾದರೂ, ಎಲ್ಲಾ ಸಂದರ್ಭಗಳಲ್ಲಿಯೂ ಇದೇ ಕಾರಣವೆಂದು ಹೇಳಲಾಗದು. ಆದುದರಿಂದ ಈ ರೀತಿಯ ಸಾಮಾನ್ಯೀಕರಣಗೊಳಿಸುವಿಕೆ ಆಧಾರವಾಗಿದೆ ಎನ್ನಬಹುದು.

## ೨೭. ಬೆಂಗಳೂರಿನ ಇತಿಹಾಸ - ಬ.ನ. ಸುಂದರರಾವ್ - ೧೯೮೫

'ಬೆಂಗಳೂರು' ಎಂಬ ಹೆಸರಿನ ನಿಷ್ಪನ್ನ ವಿಶ್ಲೇಷಣೆಯನ್ನು, 'ಬೆಂಗಳೂರು ಹೆಸರನ್ನು ಕುರಿತು' ಎನ್ನುವ ಅಧ್ಯಾಯದಲ್ಲಿ ವಿವರಿಸಲಾಗಿದೆ. ಬೆಂಗಳೂರು ಹೆಸರಿಗೆ ಬೆಂದಕಾಳಿನ ಐತಿಹ್ಯ ಹಾಗೂ ಬೆಣಚುಕಲ್ಲಿನ ಭೌಗೋಳಿಕ ಆಧಾರ ಮುಂತಾದ ಉಲ್ಲೇಖಗಳನ್ನು ನೀಡುತ್ತಾ ಚರ್ಚಿಸಿದ್ದಾರೆ.

## ೨೮. ಆಸ್ವಾದ - ಪ್ರೊ॥ ಎಂ. ವಿ. ಸೀತಾರಾಮಯ್ಯ ಅಭಿನಂದನ ಗ್ರಂಥ - ೧೯೮೩

ಡಾ॥ ಎಚ್. ಗೋಪಾಲಕೃಷ್ಣರವರ 'ಕೋಲಾರ ಜಿಲ್ಲೆಯ ಸ್ಥಳನಾಮಗಳಲ್ಲಿ ಜಲಸೂಚಿ ಅಂಶಗಳು' ಎಂಬ ಲೇಖನದಲ್ಲಿ ಸುಮಾರು ನಾಲ್ಕು ನೂರು ಜಲಸೂಚಿ ಸ್ಥಳನಾಮಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ತಮ್ಮ ಪಿಎಚ್.ಡಿ. ಮಹಾಪ್ರಬಂಧದಲ್ಲಿನ ಈ ವರ್ಗೀಕರಣದಲ್ಲಿ ಇವುಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ತೆಲುಗಿನ ಚೆರ್ಲ, ಚೆರುವು ಮುಂತಾದ ನಿರ್ದಿಷ್ಟ, ಕನ್ನಡದ 'ಕೆರೆ' ಮುಂತಾದ ನಿರ್ದಿಷ್ಟಗಳ ವಿಶ್ಲೇಷಣೆ ಈ ಲೇಖನದಲ್ಲಿದೆ.

## ೨೯. ಜಾನಪದ ಸಿರಿ - ಡಾ॥ ಬಸವರಾಜ ಪೋಲೀಸ್ ಪಾಟೀಲ - ೧೯೯೦

ಐತಿಹ್ಯಗಳು ಸೃಷ್ಟಿಯಾದ ಹಿನ್ನೆಲೆಯ ವಿವರಗಳನ್ನೂ, ಅವುಗಳಲ್ಲಿ ಮುಖ್ಯವಾಗಿ ಬರುವ ದೈವ, ಪುರಾಣ, ಅತಿಮಾನವ ಶಕ್ತಿ ಮುಂತಾದ ಅಂಶಗಳನ್ನೂ 'ಸ್ಥಳೀಯ ಐತಿಹ್ಯಗಳು' ಎಂಬ ಸಂಪ್ರಬಂಧವು ಒಳಗೊಂಡಿದೆ. ಈ ಐತಿಹ್ಯಗಳು ಸ್ಥಳನಾಮ ನಿಷ್ಪನ್ನಗಳಿಗೆ ಹೇಗೆ ಸಂಬಂಧಿಸಿವೆ ಎಂಬುದನ್ನು ಈ ಬರಹದಲ್ಲಿ ವಿವರಿಸಲಾಗಿದೆ.

## ೩೦. ಹರತಿಸಿರಿ - ಸಂ. ಲಕ್ಷ್ಮಣ ತೆಲಗಾವಿ, ೧೯೮೭

ಈ ಕೃತಿಯಲ್ಲಿ ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಕೆಮ್ತೂರು ರಘುಪತಿ ಭಟ್ಟರ 'ಸ್ಥಳನಾಮಾಧ್ಯಯನದ ಇತ್ತೀಚಿನ ಒಲವುಗಳು - ಒಂದು ಸ್ಥೂಲ ಚಿತ್ರ' ಎನ್ನುವ ಲೇಖನವಿದೆ. ಸ್ಥಳನಾಮಗಳ ಅಧ್ಯಯನ ಕ್ಷೇತ್ರದಲ್ಲಿನ ಬೆಳವಣಿಗೆ, ಅವುಗಳ ಮಹತ್ವ, ಮುಂದಿನ ದಿನಗಳಲ್ಲಿ ಅವುಗಳ ಗುರಿಯನ್ನು ವಿವರಿಸಿದ್ದಾರೆ. ಡಾ॥ ಎಚ್. ಗೋಪಾಲಕೃಷ್ಣರ 'ಚಿತ್ರದುರ್ಗ ಜಿಲ್ಲೆಯ ಸ್ಥಳನಾಮಗಳು - ಒಂದು ಅವಲೋಕನ' ಲೇಖನವು, ಪಾಳೆಯಗಾರರ ಕಾಲದ ಸ್ಥಳನಾಮಗಳು, ನಾಗತಿಯರ ಹೆಸರಿನ ಸ್ಥಳನಾಮಗಳು ಸೃಷ್ಟಿಯಾದ ವಿವರವನ್ನೂ ಒಳಗೊಂಡಿದೆ. ಟಿ. ಹನುಮಂತರಾಯರು, 'ಯಳನಾಡು ಗ್ರಾಮನಾಮ ವಿವೇಚನೆ' ಎಂಬ ಲೇಖನದಲ್ಲಿ ಆ ಗ್ರಾಮನಾಮ ನಿಷ್ಪತ್ತಿಗೆ ಸಂಬಂಧಪಟ್ಟಂತೆ ಜಾನಪದ ಅಂಶವನ್ನೂ ವಿವರಿಸಿದ್ದಾರೆ.

## ೩೧. ಶರಣ ಸಾಹಿತ್ಯದಲ್ಲಿ ಪಂಪಾಕ್ಷೇತ್ರದ ವರ್ಣನೆ - ಕೆ. ಶ್ರೀಕಂತಯ್ಯ ೧೯೮೯

ತುಂಗಭದ್ರಾ ನದಿಯ ದಂಡೆಯ ಮೇಲಿರುವ ಹಂಪೆಯ ಕ್ಷೇತ್ರಕ್ಕೆ ಹೊಂದಿಕೊಂಡಿರುವ ಅನೇಕ ಸ್ಥಳಗಳ ವಿವರಗಳನ್ನು ಒಳಗೊಂಡಿರುವ ಕೃತಿಯಾಗಿದೆ. ಇಲ್ಲಿನ ನಿರ್ವಚಿತ ಸ್ಥಳನಾಮಗಳನ್ನು ಶಾಸನ, ಕಾವ್ಯ ಮುಂತಾದ ಆಧಾರಗಳಿಂದ ವಿಶ್ಲೇಷಿಸಲಾಗಿದೆ. ಆನೆಗೊಂದಿ, ಭಾಸ್ಕರ ಕ್ಷೇತ್ರ, ವಿದ್ಯಾನಗರಿ, ವಿಜಯನಗರ, ಪಂಪಾಕ್ಷೇತ್ರ ಮುಂತಾದ ಹೆಸರುಗಳನ್ನು ಪವಿತ್ರ ಕ್ಷೇತ್ರಗಳಲ್ಲಿ ತೀರ್ಥಗಳ ವಿವರಗಳನ್ನು ಲೇಖನವು ಒಳಗೊಂಡಿದೆ.

## ೩.೨. ಕೋಲಾರ ಜಿಲ್ಲೆಯ ಸ್ಥಳನಾಮಗಳು - ಸಾಮಾಜಿಕ ಭಾಷಾಶಾಸ್ತ್ರ ಅಧ್ಯಯನ - ಎ. ಗೋಪಾಲ ಕೃಷ್ಣ (ಅಪ್ರಕಟಿತ ಪಿಎಚ್.ಡಿ ಪ್ರಬಂಧ, ೧೯೮೮)

ಕೋಲಾರ ಜಿಲ್ಲೆಯ ಸ್ಥಳನಾಮ ನಿಷ್ಪನ್ನ ಕುರಿತ ಅಧ್ಯಯನವನ್ನು ಒಳಗೊಂಡ ಈ ಪ್ರಬಂಧದಲ್ಲಿ, ಸಾಮಾಜಿಕ ಹಾಗೂ ವರ್ಣನಾತ್ಮಕ ವಿಶ್ಲೇಷಣೆಯನ್ನು ಸಂಶೋಧಕರು ಮಾಡಿದ್ದಾರೆ. ಕೋಲಾರ ಜಿಲ್ಲೆಯ ಎಲ್ಲಾ ಸ್ಥಳನಾಮಗಳನ್ನು ವರ್ಣನಾತ್ಮಕ ವಿಶ್ಲೇಷಣೆ ಮಾಡಿರುವುದು ಈ ಕೃತಿಯ ವಿಶೇಷವಾಗಿದೆ. ಸ್ಥಳನಾಮಗಳ ಅಧ್ಯಯನ ವಿಧಾನ, ಆಕೃತಿಮಾ ವಿಶ್ಲೇಷಣೆ, ಸಂಧಿಕಾರ್ಯ ನಡೆದಿರುವಿಕೆ, ನಿರ್ದಿಷ್ಟಗಳ ಅರ್ಥ ವಿವರಣೆ, ವಾರ್ಗೀಕಗಳ ವಿಂಗಡಣೆ ಮುಂತಾದ ವಿವರಗಳನ್ನೂ ಈ ಅಧ್ಯಯನವು ಒಳಗೊಂಡಿದೆ. ಸಂಶೋಧಕರಿಗೆ ಅವಶ್ಯಕವಾದ ಹೆಚ್ಚಿನ ಮಾಹಿತಿಗಳು ಈ ಪ್ರಬಂಧದಲ್ಲಿ ದೊರೆಯುತ್ತದೆ.

## ೩.೩. ಬೀದರ ಜಿಲ್ಲೆಯ ಸ್ಥಳನಾಮಗಳು - ಭಂಡೆ ವೈಜನಾಥ (ಅಪ್ರಕಟಿತ ಪಿಎಚ್.ಡಿ ಪ್ರಬಂಧ, ೧೯೯೦)

ಬೀದರ ಜಿಲ್ಲೆಯ ಸ್ಥಳನಾಮಾಧ್ಯಯನ ಮಾಡಿರುವ ಈ ಸಂಶೋಧನೆಯಲ್ಲಿ, ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಕೇಂದ್ರೀಕರಿಸಿಕೊಂಡಿದೆ. ಸ್ಥಳನಾಮ ಅಧ್ಯಯನದಲ್ಲಿ ನಿಷ್ಪನ್ನಕ್ಕೆ ಹೆಚ್ಚು ಮಹತ್ವ ನೀಡದೆ, ಅದಕ್ಕೆ ಸಂಬಂಧಿಸಿದ ಇತಿಹಾಸ, ಭೌಗೋಳಿಕ ಪರಿಸರ ಹಾಗೂ ಬೀದರ್ ಕನ್ನಡ ಉಪಭಾಷೆಯ ವಿವರವನ್ನು ನಿಬಂಧವು ಒಳಗೊಂಡಿದೆ. ಸ್ಥಳನಾಮ ವಿಜ್ಞಾನದ ಇತಿಹಾಸ, ಸ್ವರೂಪ, ಬೀದರ್ ಪ್ರದೇಶದ ಪರಿಚಯ, ಸ್ಥಳನಾಮಗಳ ಭಾಷಿಕ ವಿವರಗಳನ್ನು ಅಧ್ಯಯನದಲ್ಲಿ ಗುರುತಿಸಬಹುದು. ಸ್ಥಳನಾಮಗಳ ಸಾಂಸ್ಕೃತಿಕ ಹಿನ್ನೆಲೆ ವರ್ಗೀಕರಣದ ವಿಧಗಳು, ಸ್ಥಳನಾಮಗಳಲ್ಲಿನ ಜಾನಪದ ಹಿನ್ನೆಲೆಯನ್ನು ಪ್ರಸ್ತುತ ಅಧ್ಯಯನವು ಒಳಗೊಂಡಿದೆ.

## ೩.೪. ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳ ಅಧ್ಯಯನ, ನಂಜಯ್ಯ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ) - ೨೦೦೦

ಮೈಸೂರು ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಈ ಮಹಾಪ್ರಬಂಧವು ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳನ್ನು ಕುರಿತ ಸಂಶೋಧನಾತ್ಮಕ ಅಧ್ಯಯನವಾಗಿದೆ. ಈ ಮಹಾಪ್ರಬಂಧವು ಐದು ಅಧ್ಯಾಯ ಗಳನ್ನೊಳಗೊಂಡಿದ್ದು, ವರ್ಣನಾತ್ಮಕ ಅಧ್ಯಯನ ಮಾದರಿಯಾಗಿದೆ. ಸ್ಥಳನಾಮಗಳ ಉಗಮ-ಪ್ರಯೋಜನಗಳನ್ನು ವಿವರಿಸಿರುವ ಸಂಶೋಧಕರು, ತಾಲ್ಲೂಕಿನ ಸ್ಥಳನಾಮಗಳನ್ನು ವಿಶಿಷ್ಟಗಳಿಗೆ ಅನುಗುಣವಾಗಿ ವಿಂಗಡಿಸಿ ಮಾದರಿಗಳನ್ನು ಗುರುತಿಸಿದ್ದಾರೆ. ಸ್ಥಳನಾಮಗಳ ಭಾಷ್ಟಿಕ ವಿಶ್ಲೇಷಣೆಯಲ್ಲಿ ಸಂಧಿ, ಸಮಾಸ, ತದ್ಭವ, ಸಮಸಂಸ್ಕೃತ, ಸಜಾತೀಯ- ವಿಜಾತೀಯ ಒತ್ತಕ್ಷರಗಳ ಸ್ಥಳನಾಮಗಳನ್ನು ಗುರುತಿಸಲಾಗಿದೆ.

ಸಾಹಿತ್ಯಕೃತಿಗಳಲ್ಲಿ, ಶಾಸನಗಳಲ್ಲಿ ದಾಖಲಾಗಿರುವ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಮಹಾಪ್ರಬಂಧದ ಕೊನೆಯಭಾಗದಲ್ಲಿ ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳ ನಿಷ್ಪನ್ನವನ್ನು ಒಳಗೊಂಡಿದ್ದು, ಶ್ಲಾಘನೀಯವಾದ ಕಾರ್ಯ ಮಾಡಲಾಗಿದೆ

ಲೇಖನಗಳು

೧. ವರ, - ವಾರ ಎಂದು ಕೊನೆಯಾಗುವ ಊರ ಹೆಸರುಗಳು - ಎಂ. ಚಿದಾನಂದಮೂರ್ತಿ. ಸಂಪುಟ-೬, ಸಂಚಿಕೆ-೧, ಜನವರಿ-ಮಾರ್ಚ್ ೧೯೩೮

೨. ತುಳುನಾಡಿನ 'ಕಾರ್' ಊರುಗಳ ಒಂದು ಸ್ಥಳನಾಮಾಧ್ಯಯನ - ಕೆಮ್ತೂರು ರಘುಪತಿಭಟ್ಟ ಸಂಪುಟ-೭. ಸಂಚಿಕೆ-೨, ಏಪ್ರಿಲ್-ಜೂನ್ ೧೯೭೮.

೩. ಸ್ಥಳನಾಮ ರೂಪುರೇಷೆ - ಕೆಮ್ತೂರು ರಘುಪತಿಭಟ್ಟ. ಸಂಪುಟ - ೮, ಸಂಚಿಕೆ - ೨, ಏಪ್ರಿಲ್-ಜೂನ್ ೧೯೭೯.

೪. ಸ್ಥಳ ನಾಮಾಧ್ಯಯನ ಸಮಸ್ಯೆ ಹಾಗೂ ನಿವಾರಣೆ - ವಿ. ಗೋಪಾಲಕೃಷ್ಣ. ಸಂಪುಟ-೨, ಸಂಚಿಕೆ-೨, ಏಪ್ರಿಲ್-ಜೂನ್ ೧೯೭೮.

೫. ಬೆಂಗಳೂರು ಜಿಲ್ಲೆಯ ಹಲವು ಸ್ಥಳನಾಮಾಂತ್ಯಗಳ ವೈಶಿಷ್ಟ್ಯ - ಕೆ.ಆರ್. ಮೋಹನ್. ಸಂಪುಟ-೧೩, ಸಂಚಿಕೆ-೬, ಏಪ್ರಿಲ್-ಜೂನ್ ೧೯೭೮.

೬. -ಪುರ - ವರ - ವಾರ ಎಂಬುದೇ ಸರಿ - ಎಂ. ಚಿದಾನಂದಮೂರ್ತಿ. ಸಂಪುಟ - ೯, ಸಂಚಿಕೆ - ೪, ಅಕ್ಟೋಬರ್-ಡಿಸೆಂಬರ್ ೧೯೮೦.

೭. ಕೆಱೆ : ಗ್ರಾಮನಾಮ ವಿವೇಚನೆ - ಚನ್ನಕ್ಕ ಎಲಿಗಾರ. ಸಂಪುಟ ೧೪, ಸಂ. ೩ ಜೂನ್-ಸೆಪ್ಟೆಂಬರ್ ೧೯೮೫.

೮. ಕರ್ನಾಟಕ ನಾಮಶಾಸ್ತ್ರ : ಒಂದು ಸ್ಥೂಲ ಪರಿಚಯ - ರಘುಪತಿ ಕೆಮ್ತೂರು (ಅನುವಾದ : ರೇಣುಕಾ ಅಕ್ಕಿ) ಸಂಪುಟ - ೧೧, ಸಂಚಿಕೆ - ೩., ಜುಲೈ-ಸೆಪ್ಟೆಂಬರ್ ೧೯೮೨

೯. ಊರ ಹೆಸರುಗಳ ಕೊನೆಯ - ವರ - ವಾರ, ಎಂ.ಎಂ. ಕಲಬುರ್ಗಿ. ಸಂಪುಟ-೯, ಸಂಚಿಕೆ-೧, ಜನವರಿ-ಮಾರ್ಚ್ ೧೯೮೦.

೧೦. ಉಡುಪಿ ತಾಲ್ಲೂಕಿನ ಸ್ಥಳನಾಮಗಳು : ಕೆಲವು ಪರಿಶೀಲನೆಗಳು ಕೆಮ್ತೂರು ರಘುಪತಿಭಟ್ಟ. ಸಂಪುಟ ೧೪, ಸಂ. ೩ ಜೂನ್-ಸೆಪ್ಟೆಂಬರ್ ೧೯೮೫. (ಪ್ರಸಾರಾಂಗ, ಬೆಂ.ವಿ.)

## Place Name Society of India

ಪ್ರಕಟಣೆಯ ಸಂಚಿಕೆಗಳಲ್ಲಿ ಸ್ಥಳನಾಮಕ್ಕೆ ಸಂಬಂಧಪಟ್ಟ ಲೇಖನಗಳು.

**1. Volume : 1, Chapters : 8, 9, 13, 15.**

1a. Regional features in Naming Places in Karnatak - B.B. Raja Purohit.

1b. Renaming the places - V. Gopalakrishna.

1c. A note on some place - Gururajachar.

1d. Some observations on Indian place names - K.V. Ramesh.

**2. Volume : 2, Chapters 1, 5, 6, 10, 11, 14.**

2a. Some stray thoughts on Nick Names - Dr. D. Javare Gowda.

2b. Epigraphy and study of Indian place and personal names - K. V. Ramesh

2c. Distribution of suffix'Uru' in Karnataka - B.B. Raja Purohit.

2d. Place names and folklore - Jawaharlal Handoo

2e. Names of villages donated to Brahmins - Dr. Chidananda Murthy.

2f. Impact of English and Tradition on place names - C.R. Srinivasan.

**3. Volume : 3, Chapters : 1, 3, 10, 12, 16, 18, 21, 23, 24.**

3a. Place names and understanding the past - R.N. Mehta.

3b. Origin of Certain Place names of Karnatak - K. Abhishankar.

3c. Some important place names in Karnataka - Venkatesha.

3d. Some interesting place names in Karnataka - Bhadri.

3e. Cholantaka Chuthurvedi Mangalam - N. Sethuraman.

3f. On some place and Temple names - K.V. Ramesh.

3g. A note on name change - Dr. D. Javare Gowda

3h. Identification of the name < > of a Kadamba King.

3i. Names of some Dynasties and Rulers of Karnataka - Madhan N. Katti

**4. Volume : 4, Chapers : 6, 10, 15, 16, 18, 22.**

4a. Historical Geography and Study of Place names figuring in Pandya Incriptions - M.D. Sampath.

4b. A note on place names of some Pre-historic Rock<>shelters - A.P. Sagar

4c. Methodology of place names study - Dr. D. Javare Gowda.

4d. Distribution of Halli and Pura suffixes in Karnataka -B.B. Raja Purohit.

4e. Studies in Ancient Geography in Karnataka - G.S. Gai.

4f. A note on place name study - .B. Gandhara Rao.

**5. Volume : 9, Chapters : 2, 4, 10, 12.**

5a. The local rulers and placenames- A.V. Narasimha Murthy.

5b. Sociological significance of sur<>names - R. Indira.

5c. The study of place names and Ethno Archaeology - Binda Paranjape.

5d. Place names associated with worship of Gods - Herab Vittal Dixit.

**6. Volume : 11, Chapters : 3**

6a. Place names as part of caste names - A.V. Narasimha Murthy.

6b. The Title Rajan and its extended forms - K. V. Ramesh

**7. Volume : 13, Chapters : 6, 8, 21, 24**

7a. Some more Diety based place names in Athani Taluk.

7b. 'Puram' Suffixes in Vijayanagara Period - P. Shanmugan.

7c. Place names Prefixes 'Hosa and Hale' in Karnataka - A.V. Narasimha Murthy.

7d. 'Cholapura' - a placename - Rajavelu.

**8. Volume : 15, Chapters : 3, 4, 11, 16, 24.**

8a. History of development of placenames Gazetteer - P.M. Lakshman.

8b. Place name as a source of cultural study - Malathi Mahajan.

8c. On the placename element 'Mangala' - P. Gangapayya Bhat.

8d. Folk Ethimology on Momostics - P. Uma

8e. Placename of the Cholar period - S. Rajavelu.

**9. Volume : 16, Chapters : 2, 5, 19.**

9a. Placenames in Sanskrit Grammatical literature - R.S. Saina.

9b. The influence of English in the Transliteration of Indian placenames - P.M. Lakshman.

9c. Place names of Archaeological Importance - S. Rajavelu.

9d. Imigrant Dravida Brahmanas of Andhra Desa - E.S.M. Prasad.

---

೧ ಕಿಮ್ಮೂರು ರಘುಪತಿಭಟ್ಟ, ಹೆಸರಿನಲ್ಲೇನಿದೆ? ಪುಟ ೨.

೨ ಆರ್ಕಾವತಿ (ಸಂಪಾದಿತ ಕೃತಿ) ಕ.ಸಾ.ಪ. ಪ್ರಕಟಣೆ, ಪುಟ ೬೧.

# ೩

# ಸ್ಥಳನಾಮ ವರ್ಗೀಕರಣ ವಿಧಾನಗಳು

## ೩.೧ ಸ್ಥಳನಾಮಾಧ್ಯಯನ ಪ್ರಯೋಜನಗಳು

ಮಾನವ ಸಮಾಜ ಜೀವಿಯಾಗಿದ್ದು ತಾನು ನೆಲೆ ನಿಂತ ಸ್ಥಳವನ್ನು ಗುರುತಿಸಿಕೊಳ್ಳಲು ಹೆಸರುಗಳನ್ನು ಸಾಧನವಾಗಿ ಬಳಸಿಕೊಂಡಿದ್ದಾನೆ. ಈ ಹೆಸರು ನೀಡಿರುವ ಪರಂಪರೆ ಅರಿಯಲು ಇತಿಹಾಸದ ಅಧ್ಯಯನ ಅವಶ್ಯಕವಾಗಿದೆ. ಪುರಾತನ ಕಾಲದಲ್ಲಿ ನಾಗರೀಕತೆಯನ್ನು ಅಳವಡಿಸಿಕೊಂಡ ಮಾನವನ ಬೆಳವಣಿಗೆಯನ್ನು ಸ್ಥಳನಾಮಗಳು ತಿಳಿಸುತ್ತವೆ.

"ಪ್ರಾಚೀನ ಸ್ಥಳನಾಮಗಳಲ್ಲಿ ಬಹುಪಾಲು ಅರ್ಥಗರ್ಭಿತವಾದವುಗಳು. ಒಂದು ಪ್ರದೇಶದ ನದಿ, ಬೆಟ್ಟ ಕಲ್ಲು, ಮಣ್ಣು, ಮರ, ಗಿಡ, ಕೋಟೆ, ದೇವಾಲಯ ಮುಂತಾದುವು ಆ ಪ್ರದೇಶದ ಚರಿತ್ರೆಯನ್ನು ಹೇಳಲು ಹೇಗೆ ಸಹಾಯಕವಾಗುತ್ತವೆಯೋ, ಹಾಗೆಯೇ ಅಲ್ಲಿನ ಸ್ಥಳನಾಮಗಳ ಚರಿತ್ರೆಗೆ ಪೂರಕವಾಗುವ ಅನೇಕ ಮಾಹಿತಿಗಳನ್ನು ಒದಗಿಸುತ್ತವೆ. ಆದುದರಿಂದ ಸಾಮಾನ್ಯ ನಾಮಗಳಿಗೆ ಕೊಡಬೇಕಾದ ಪ್ರಾಧಾನ್ಯಕ್ಕಿಂತ ಹೆಚ್ಚು ಪ್ರಾಧಾನ್ಯ ಕೊಡಬೇಕಾಗಿದೆ. ನಮ್ಮ ಪೂರ್ವಿಕರ ವಿದ್ಯಾಸಂಪನ್ನತೆ, ಸೌಂದರ್ಯಪ್ರಜ್ಞೆ, ಧಾರ್ಮಿಕ ದೃಷ್ಟಿ, ಮೂಢನಂಬಿಕೆ, ಆಳರಸರ ಅಥವಾ ಮೂಲ ನಿವಾಸಿಗಳ ಬಗೆಗೆ ಮಹತ್ವದ ವಿಚಾರಗಳು, ಅಂದಿನ ಜನರ ವೃತ್ತಿ, ನೈಸರ್ಗಿಕ ಸಂಪತ್ತು, ಭಾಷಾ ಚರಿತ್ರೆ, ಮಾನವಶಾಸ್ತ್ರ ಮುಂತಾದ ಅನೇಕ ವಿಷಯಗಳನ್ನು ಗರ್ಭದಲ್ಲಡಗಿಸಿಕೊಂಡಿರುವ ಅಮುಲ್ಲೇಖಿತ ಗ್ರಂಥಗಳಾಗಿವೆ ಈ ಸ್ಥಳನಾಮಗಳು."[೧]

ಸ್ಥಳನಾಮಗಳಲ್ಲಿ ದೊರೆಯುವ ವಿವಿಧ ರೂಪಗಳನ್ನೂ ಕಾಲಾನುಕ್ರಮಣಿಕೆಯಲ್ಲಿ ಜೋಡಿಸಿದಾಗ, ಭಾಷೆಯಲ್ಲಾಗಿರುವ ವಿವಿಧ ಬದಲಾವಣೆಗಳು, ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ವಿವರಗಳು ದೊರೆಯುತ್ತವೆ. ಅರ್ಥ ಅಸ್ಪಷ್ಟತೆ ಹೊಂದಿರುವ ಸ್ಥಳನಾಮಗಳ ಸೂಕ್ಷ್ಮ ಪರಿಶೀಲನೆಯಿಂದ, ಹೊಸ ಹೊಸ ವಿಷಯಗಳು ಹೊರಬೀಳುವ ಸಾಧ್ಯತೆ ಇರುತ್ತದೆ

ಪ್ರಾಚೀನ ಕಾಲದಲ್ಲಿ ಸ್ಥಳಗಳಿಗೆ ಹೆಸರಿಡುವ ಪ್ರಕ್ರಿಯೆಯು ತನ್ನಿಂದ ತಾನೇ ಸಹಜವಾಗಿಯೇ ಸೃಷ್ಟಿಯಾಗುತ್ತಿತ್ತು ಆದುದರಿಂದ ಸ್ಥಳನಾಮಗಳಿಗೆ ಸಂಬಂಧಿತವಾದ ಸ್ಥಳೀಯ ವಿವರಗಳು ವಿಶಿಷ್ಟವಾಗಿ ಸೇರಿರುತ್ತವೆ. ಅದನ್ನು ಅಡಗಿಸಿಕೊಂಡಿರುವ ಶಕ್ತಿ ಸ್ಥಳನಾಮಗಳಿಗಿದೆ. ಸ್ಥಳನಾಮಾಧ್ಯಯನದ ಮುಖ್ಯ ಉದ್ದೇಶವೆಂದರೆ, ಆ ಹೆಸರಿನ ನಿಷ್ಪತ್ತಿಯನ್ನು ಅರಿಯುವುದು. ಊರಿಗೆ ಸಂಬಂಧಿತ ಸ್ಥಳಪುರಾಣಗಳು, ಪ್ರಚಲಿತವಾಗಿರುವ ಹೆಸರಿಗೆ ಹೊಂದಿಕೊಂಡಂತೆ ಉದ್ದೇಶಪೂರಿತವಾದ ಕತೆಗಳು ಸೃಷ್ಟಿಯಾಗಿರುತ್ತವೆ. ಇದು ತಮ್ಮ ಊರಿನ ಬಗೆಗಿರುವ ಅಭಿಮಾನ ಇದಕ್ಕೆ ಕಾರಣವಾಗಿರುತ್ತದೆ. ಸ್ಥಳನಾಮಾಧ್ಯಯನಗಳು ಹೊಸ ವಿಷಯಗಳನ್ನು ತಿಳಿಸುವುದರ ಜೊತೆಗೆ, ಈಗಾಗಲೇ ತಿಳಿದಿರುವ ವಿಷಯಗಳನ್ನು ಸಮರ್ಥಿಸುತ್ತವೆ.

ಸ್ಥಳನಾಮಗಳು ಇತಿಹಾಸ ಮತ್ತು ಪ್ರಾಗೈತಿಹಾಸಿಕ ಮಾನವಶಾಸ್ತ್ರ ವಿವರಗಳನ್ನು ತನ್ನ ಗರ್ಭದಲ್ಲಿ ಅಡಗಿಸಿ ಕೊಂಡಿರುತ್ತವೆ ಎಂದು ಡಾ॥ ದೇ. ಜವರೇಗೌಡರು ಅಭಿಪ್ರಾಯಪಟ್ಟಿದ್ದಾರೆ. 'Placenames are said to be footnotes of history and fossils of Archaeology. They are pregnant with anthropological and ethnological information. The study of linguistics is incomplete without its association with the study of Placenames". "Placenames are considered as the footnotes and fiossils of history; they constitute the expression of nations and peoples. The study of Anthropology, Ethnology, Linguistics, Archaeology and other kindered subjects cannot be complete without the application of the results in Placename studies"[3]

ಯಾವುದೇ ಲಿಖಿತ ದಾಖಲೆಯಿಲ್ಲದಿದ್ದರೂ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಹರಿದುಬರುವ ಸಂಸ್ಕೃತಿ ವಾಹಕಗಳೆಂದು ಸ್ಥಳನಾಮಗಳನ್ನು ಜಾರ್ಜ್ ಸ್ಟಿವರ್ಟ್ ಗುರುತಿಸುತ್ತಾರೆ. 'The placenames are passed from generation to generation, even without the aid of writing. Thus atleast in theory - they offer keys to Pre-history to nooks and corners which have been left in Periods of scant history" and he added "Names are always shadows of the men who give them"[4]

ಸ್ಥಳನಾಮಗಳು ಭಾಷಾ ವಿಜ್ಞಾನಕ್ಕೆ ಅವಶ್ಯಕವಾದ ಪೂರಕ ಮಾಹಿತಿಗಳನ್ನು ನೀಡುತ್ತವೆ. ಪ್ರಾಗೈತಿಹಾಸಿಕ, ಐತಿಹಾಸಿಕ ದಾಖಲೆಗಳಲ್ಲಿ ಸಿಗದಿರುವ ವಿವರಗಳು ಸ್ಥಳನಾಮಗಳಲ್ಲಿ ದೊರೆಯುತ್ತವೆ ಎಂದು ವ್ಯಾನ್ ರೈಟ್ ವ್ಯಾಖ್ಯಾನಿಸಿದ್ದಾರೆ.

'Placenames are part of language, and the student of language is considered primarily with sounds. For the students of Placenames, these are the older spellings of the names he is seeking to elucidate and they come before him not as sounds, but as attempts to represent them"[5]

ಅತ್ಯಂತ ಆಸಕ್ತಿಯುತ ಹಾಗೂ ಸರಳವಾಗಿ ಕಾಣುವ ಸ್ಥಳನಾಮ ಕ್ಷೇತ್ರವು ಮುಖ್ಯವಾದ ಅಧ್ಯಯನವಾಗಿದ್ದು ಇತಿಹಾಸ, ಸಂಸ್ಕೃತಿ, ಭೂಗೋಳ, ಭೂಗರ್ಭಶಾಸ್ತ್ರ, ಸಸ್ಯಶಾಸ್ತ್ರ ಹಾಗೂ ಜಾನಪದ ವಿವರಗಳನ್ನು ತಿಳಿಯಲು ಸಹಾಯಕವಾಗಿದೆಯೆಂಬುದು ಕೆ.ಎಂ. ಭದ್ರಿಯವರು ಅಭಿಪ್ರಾಯಪಟ್ಟಿದ್ದಾರೆ.

"The study of Placenames is as interesting and important subject as it looks simple. Varied and unimaginable are the way and reasons by which place are named. A casual enquiry in to the meaning of a particular placename may lead to some important discovery throwing light on the history and culture of that place. History, geography, geology, botany, folk-lore, local beliefs and tradition and many other factors work in assigning a particular name to a particular locality." [೩]

ಸ್ಥಳನಾಮಗಳಲ್ಲಿ ಇತಿಹಾಸ, ಪುರಾಣ, ಧರ್ಮ, ಸಂಸ್ಕೃತಿಗಳ ಜೊತೆಗೆ ಜೀವನ ಸಂಬಂಧಿತ ಎಲ್ಲಾ ವಸ್ತುಗಳು, ಬಣ್ಣ, ಗುಣ ಮುಂತಾದ ವಿವರಗಳನ್ನು ಗುರುತಿಸಬಹುದೆಂದು ಡಾ॥ ಶಂಬಾಜೋಶಿಯವರು ತಮ್ಮ ಕೃತಿಯಲ್ಲಿ ಅಭಿಪ್ರಾಯಪಟ್ಟಿದ್ದಾರೆ. "ಸ್ಥಳಗಳ ಹೆಸರಿನಂತಹ ಸಾಮಾನ್ಯ ವಿಷಯ ಆದರೆ ಅದರಲ್ಲಿ ಎಷ್ಟೊಂದು ಮಹತ್ವದ ಅಪೂರ್ವವಾದ ಸಂಗತಿಗಳು ಹುದುಗಿಕೊಂಡಿವೆ. ಅದೆಷ್ಟು ಅಜ್ಞಾತ ವಿಷಯಗಳು ಬೆಳಕಿಗೆ ಬರಲಿವೆ! ಸೂಕ್ಷ್ಮವಾಗಿ ವಿಮರ್ಶಿಸಿದಷ್ಟೂ ಹಿಂದೆ ಆಗಿಹೋದ ಅನೇಕ ಐತಿಹಾಸಿಕ ಘಟನೆಗಳಿಗೆ ಶಾಸನಾದಿಗಳಲ್ಲಿ ದೊರೆಯದ ಆಧಾರಗಳು ಎಡೆಗಳ ಹೆಸರಿನಲ್ಲಿ ಸಿಕ್ಕುತ್ತಿವೆ. ಇತಿಹಾಸವು ಯಾರ ಹೆಸರನ್ನೂ ಕಡೆಗಣಿಸಿ ತೀರ ಸಾಮಾನ್ಯರೆಂದು ಅವರನ್ನು ಉಲ್ಲೇಖಿಸುವುದಿಲ್ಲವೋ ಅಂತಹ ಅನೇಕಾನೇಕ ಅರಸರು, ನಾಯಕರು, ಗೌಡರು, ಗೌಡತಿಯರು, ಕುರುಬರು, ಗೊಲ್ಲರು ಮೊದಲಾದವರು ತಮ್ಮ ಹೆಸರಿನ ಹಟ್ಟಿ-ಊರುಗಳನ್ನು ಕಟ್ಟಿಕೊಂಡು ತಮ್ಮಮಟ್ಟಿಗೆ ಅಜರಾಮರರಾಗಿದ್ದಾರೆ. ಪುರಾಣಗಳಿಗೆ ಪೂರಕವಾಗಿ ಪೋಷಕವಾಗಿ ಇರುವ ಹಲವು ಕತೆಗಳಿಗೆ ಆಧಾರವಾದ ಅನೇಕ ಯಾತ್ರೆ ತೀರ್ಥಗ್ರಾಮಗಳ ಹೆಸರುಗಳಿವೆ. ನಮ್ಮ ನಾಡಿನಲ್ಲಿ ಬಂದುಹೋದ ಹಲವು ಧರ್ಮ-ಸಂಸ್ಕೃತಿಗಳ ಮಹಾಪ್ರವಾಹದ ಕುರುಹುಗಳನ್ನು ತೋರುವ ಎಡೆಗಳಿವೆ" [೪]

## ೩.೨ ಸ್ಥಳನಾಮಗಳಲ್ಲಿ ಬಳಕೆಯಾಗಿರುವ ಸಾಮಾನ್ಯ ವಾರ್ಗಿಕಗಳು

ವರ್ಗೀಕರಣಕ್ಕೆ ಸಂಬಂಧಿಸಿದಂತೆ ಇದುವರೆಗೆ ಕಂಡುಬಂದಿರುವ ವರ್ಗೀಕರಣಗಳನ್ನು ಗಮನಿಸಿದಾಗ ಈ ಕೆಳಗಿನ ವಾರ್ಗಿಕಗಳನ್ನು ಗುರುತಿಸಬಹುದಾಗಿದ್ದು ಇವುಗಳಲ್ಲಿ ಕೆಲವು ಪ್ರಸ್ತುತ ವ್ಯಾಪ್ತಿಪ್ರದೇಶದಲ್ಲಿ ಕಂಡುಬರುವುದಿಲ್ಲ. ಸಾಮಾನ್ಯವಾಗಿ ಕಂಡುಬರುವ ವಾರ್ಗಿಕಗಳು ಈ ಕೆಳಗಿನಂತಿವೆ.

೧. -ಆಲ್, -ಆಲ - ತಗ್ಗು ಪ್ರದೇಶದಲ್ಲಿ ನೀರು ನಿಂತಿರುವ ಸ್ಥಳ; ಆಳವಾದ ನೀರುಳ್ಳ ಪ್ರದೇಶ. ದ್ರಾವಿಡ ಭಾಷೆಯಲ್ಲಿ ಬಳಕೆಯಾಗಿರುವ ಅಸ್ವತಂತ್ರ ಘಟಕವಾಗಿದ್ದು, ಜಲವಾಚಿಯಾಗಿದೆ.
- ನೀರಿನ ಸಾಮೀಪ್ಯವುಳ್ಳ ಊರು[೫], ದೇಶೀಯ ಜಲವಾಚಕಗಳು a raised bank, a dike, a dam - there terms appear to be Dravidian [೬]

ಉದಾ : ಆಲೂರು (ಕ), ಆಲಹಳ್ಳಿ (ಕ)

೨. ಅಗರ, ಅಗ್ರಹಾರ - ಬ್ರಾಹ್ಮಣ ವಾಸ್ತವ್ಯವನ್ನು ಸೂಚಿಸುವ ಸ್ಥಳನಾಮವಾಗಿ ಬಳಕೆಯಾಗಿರುವ ಸ್ವತಂತ್ರ ಘಟಕಗಳಾಗಿವೆ.

ಉದಾ : ಅಗ್ರಹಾರ (ಕ), ಅಗರ (ಕ)

೩. -ಏರಿ - ನೀರು ನಿಲ್ಲಿಸಲು ಕಟ್ಟಿದ ಕೃತಕ ತಡೆ.

- ಎತ್ತರದ ಭೂಪ್ರದೇಶ, ನೀರು ನಿಂತಿರುವ ಭಾಗದ ಒಸ್ಸಿರಿನ ಎತ್ತರದ ಭೂಭಾಗ. ಜಲವಾಚಿ ಸೂಚಕ ಪದವಾಗಿದ್ದು, ಕೆರೆ-ಕುಂಟೆ ನೀರು ನಿಲ್ಲಿಸಲು ಸಹಾಯಕವಾದ ಎತ್ತರದ ಭೂಪ್ರದೇಶ.

ಉದಾ : ನೀರೇರಿ (ದೇ), ದೊಡ್ಡೇರಿ (ನೆ)

೪. -ಊರು - ಮಾನವನು ನೆಲೆಯೂರಿದ ಸ್ಥಳ ಊರಾಯಿತು. ನಿರ್ದಿಷ್ಟದೊಂದಿಗೆ ಬಳಕೆಯಾಗುವ ಅಸ್ವತಂತ್ರ ದ್ರಾವಿಡ ಪದವಾಗಿದ್ದು ವಸತಿವಾಚಿ ವಾರ್ಗಿಕವಾಗಿದೆ.

ಉದಾ : ಕುದೂರು (ನೆ), ಬರಗೂರು (ನೆ), ಚೀಲೂರು (ಮಾ)

೫. -ಕಲ್ಲು - ನಿರ್ದಿಷ್ಟ ಹಾಗೂ ವಾರ್ಗಿಕವಾಗಿ ಬಳಕೆಯಾಗುವ ಶಿಲಾವಾಚಿ ಘಟಕವಾಗಿದೆ. ನಿಸರ್ಗವಾಚಿಯಾಗಿದ್ದು, 'ಕಲ್' ರೂಪಗಳಲ್ಲಿ ವ್ಯಂಜ್ಯನಾಂತ್ಯ ವಾರ್ಗಿಕವಾಗಿ ಬಳಕೆಯಾಗುತ್ತಿರುವ ದ್ರಾವಿಡರೂಪವಾಗಿದೆ. ಪೂರ್ವ ಘಟಕದಲ್ಲಿ ಬಳಕೆಯಾದರೆ 'ನಿರ್ದಿಷ್ಟ'ವಾಗಿಯೂ ಉತ್ತರ ಪದದಲ್ಲಿ ಬಳಕೆಯಾಗಿದ್ದರೆ 'ವಾರ್ಗಿಕ'ವಾಗಿಯೂ ಕಾರ್ಯ ನಿರ್ವಹಿಸುತ್ತದೆ.

ಉದಾ : ಚಪ್ಪರ ಕಲ್ (ದೇ), ಕಲ್ಕೆರೆ (ಮಾ), ಕೊಟಗಲ್ಲು (ರಾ)

೬. - ಕಟ್ಟೆ : ಜಲವಾಚಿ ಸೂಚಕ 'ಏರಿ' ವಾರ್ಗಿಕದ ಪರ್ಯಾಯ ಪದವಾಗಿ ಬಳಕೆ.

: ಮನೆಯ ಮುಂದಿರುವ 'ಜಗುಲಿ'ಯನ್ನು ಊರಿನ ಪಂಚಾಯತಿಯವರು ಕೂರುವ ಎತ್ತರದ ಪ್ರದೇಶವನ್ನು 'ಕಟ್ಟೆ' ಎಂದು ಕರೆಯುವರು. ನೀರು ಹರಿಯುವಿಕೆಯನ್ನು ತಡೆಯಲು ಕಟ್ಟುವ ತಡೆ. ನಿರ್ಮಾಣವಾಚಿಯಾಗಿದೆ.

**a boundry, a share, a bank** ಎಂಬರ್ಥ ನೀಡುತ್ತವೆ.[೯]

ಉದಾ : ಆಲದ ಕಟ್ಟೆ (ಮಾ), ಹೊದಿಕೆ ಕಟ್ಟೆ (ಕ)

೭. - ಕಣಿವೆ : ಬೆಟ್ಟಗಳ ನಡುವಿನ ಇಳಿಜಾರಾದ ಪ್ರದೇಶವಾಗಿದ್ದು, ಪ್ರಾದೇಶಿಕ ವೈಲಕ್ಷಣ್ಯ ಸೂಚಿಸುವ ವಾರ್ಗಿಕವಾಗಿದೆ.

ಉದಾ : ಕಣಿವೇ ಕಟ್ಟೆ (ಕ), ಕಣಿವೇನಹಳ್ಳಿ (ನೆ) (ಕಣಿವನಹಳ್ಳಿ)

೮. - ಕೆರೆ : ಜಲವಾಚಿ ಸೂಚಕ ಪದ. ಉತ್ತರ ಪದದಲ್ಲಿ ಬಳಕೆಯಾಗುವ ಈ ಘಟಕವು 'ಕೆರೆ', 'ಗೆರೆ'ಯಾಗಿ ಬಳಕೆಯಾಗಿರುತ್ತದೆ. ಜಲವಾಚಿ ಕೆಲವೊಮ್ಮೆ 'ಕೆರೆ' ಪದಕ್ಕೆ ಪರ್ಯಾಯವಾಗಿ 'ಸಮುದ್ರ' 'ಸಾಗರ' ಎಂಬ ವಾರ್ಗಿಕಗಳನ್ನು ಉತ್ಪ್ರೇಕ್ಷೆ ಮಾಡಿ ಬಳಸಲಾಗಿದೆ. ಉತ್ತರಪದದಲ್ಲಿ ತಮ್ಮ ಊರಿನ ಕೆರೆಯ ವಿಸ್ತಾರವನ್ನು ಬಗೆಗಿನ ಅಭಿಮಾನದಿಂದ, 'ಸಾಗರ', 'ಸಮುದ್ರ' ಮುಂತಾದ ವಾರ್ಗಿಕಗಳನ್ನು ಬಳಸಲಾಗಿರುತ್ತದೆ. a tank, reservoir (ಕಟ್ಟೆಹಾಕಿ ನೀರು ನಿಲ್ಲಿಸಿರುವ ಸ್ಥಳ)[೧೦]

ಉದಾ : ಕಡಬಗೆರೆ (ನೆ)

ಕಲ್ಕೆರೆ(ಮಾ)

ಸುಬ್ಬಕೆರೆ (ರಾ)

೯. -ಕುಂಟೆ : ಜಲವಾಚಿ ನೀರಿನ ಸಂಗ್ರಹ ಮಾಡಿರುವ ಪ್ರದೇಶವಾಗಿದ್ದು, ಪೂರ್ವ ಘಟಕವ 'ನಿರ್ದಿಷ್ಟದ ಜೊತೆಗೆ 'ವಾರ್ಗಿಕ'ವಾಗಿ ಬಳಕೆಯಾಗುತ್ತದೆ.

ಉದಾ : ಹುಲಿಕುಂಟೆ (ದೊ)

ಅರಿಶಿನಕುಂಟೆ (ನೆ)

೧೦. - ಕುಪ್ಪೆ : ಗುಂಪು ಅಥವಾ ರಾಶಿಯನ್ನು ಸೂಚಿಸುವ ವಾರ್ಗಿಕವಾಗಿದೆ. ಕೊಪ್ಪ>ಕುಪ್ಪೆ ಆಗಿರುವ ಸಾಧ್ಯತೆ ಇದೆ. 'ಕುಪ್ಪೆ 'ಗುಪ್ಪೆ 'ಕುಪ್ಪಿ 'ಗುಪ್ಪಿ' ಆಗಿ ಉತ್ತರಪದದಲ್ಲಿ ಬಳಕೆಯಾಗುತ್ತದೆ.

ಉದಾ : ತಗಚಗುಪ್ಪೆ(ಮಾ)

ಕೆಂಚಾನ ಕುಪ್ಪೆ(ರಾ)

೧೧. - ಕೊಪ್ಪ : ಹಲವಾರು ಜನರು ಗುಂಪಾಗಿ ವಾಸಿಸುವ ಕೇರಿ ಅಥವಾ ಸಣ್ಣಹಳ್ಳಿ. ಕೊಪ್ಪಲು - ರಾತ್ರಿ ವೇಳೆ ಸಾಕುಪ್ರಾಣಿಗಳನ್ನು ಕೂಡಿಹಾಕುವ ಸ್ಥಳವಾಗಿದೆ.

ಉದಾ : ಕೋಟೆ ಕೊಪ್ಪ(ಕ), ಕೆರೆಕೊಪ್ಪ(ಚ), ಸೊಂಡೆಕೊಪ್ಪ(ನೆ)

೧೨. - ಕುಂದ : ಬೆಟ್ಟ, ಗುಡ್ಡ ಎತ್ತರದ ಭೂಭಾಗ. ಮೂರು ಭಾಗದಲ್ಲಿ ಎತ್ತರವಾದ ಭೂಪ್ರದೇಶವು ಇದ್ದು, ಒಂದು ಭಾಗ ತಗ್ಗಾಗಿರುವ ಪ್ರದೇಶವಿದ್ದರೆ, ಕುಂದ, ಗುಂದ, ಗುಂದೆ, ಗುಂದಿ, . ಹುಂಡಿ ಮುಂತಾದ ವಾರ್ಗಿಕಗಳು ಉತ್ತರಪದದಲ್ಲಿ ಬಳಕೆಯಾಗಿರುತ್ತದೆ. ಪೂರ್ವಪದದಲ್ಲಿ ಬಳಕೆಯಾದರೆ 'ವಿಶಿಷ್ಟ' ಘಟಕದ ಕಾರ್ಯ ನಿರ್ವಹಿಸುತ್ತದೆ.

ಉದಾ : ಕುಂದಾಣ (ದೇ) ಹೆಗ್ಗುಂದ (ನೆ)

೧೩. - ಕುರಿಕೆ : ಕುರ್ಕಿ, ಗುರಿಕೆ, ಗುರ್ಕಿ ಕೆ > ಗ್ ಆಗಿ ಬಳಕೆಯಾಗುವ ಸಾಧ್ಯತೆ ಇದೆ. ಬೆಟ್ಟ ಗುಡ್ಡ ಪ್ರದೇಶದಲ್ಲಿರುವ ಬೆಟ್ಟದ ಬುಡದಲ್ಲಿರುವ ಊರು.

ಉದಾ : ಕೋಡುಗುರ್ಕಿ (ದೇ), ಮೂಡುಗುರ್ಕಿ (ದೇ)

೧೪. -ಕೋಡಿ : ಕೆರೆ-ಕುಂಟೆಯಿಂದ ಹೆಚ್ಚಾದ ನೀರು ಹೊರಹೋಗುವ ಪ್ರದೇಶದಲ್ಲಿ ಇರುವ ಸ್ಥಳ ಸೂಚಕ ವಾರ್ಗಿಕವಾಗಿದೆ.

a passage to carry of excess water. The outlet of tank to flow in streams [೧೧]

ಉದಾ : ಹೆಬ್ಬಾರ ಕೋಡಿ (ರಾ) ಕೋಡಿ ಹಳ್ಳಿ (ಕ)

೧೫. - ಕೋಡು : ಸಂಸ್ಕೃತದ 'ಕೂಟ' ಪದಕ್ಕೆ ಸಮಾನಪದವಾಗಿದೆ. ಪರ್ವತ, ಕೋಡುಗಲ್ಲು, ಶಿಖರ, ಕೊಂಬು - ಅರ್ಥಗಳನ್ನು ನೀಡುತ್ತದೆ. ಕೋಡು <ಗೋಡು ಆಗಿರುವ ಸಾಧ್ಯತೆ ಇರುತ್ತದೆ. ಉದಾ : ಕೋಡುಗುರ್ಕಿ (ದೇ) ಕೂಟಗಲ್ಲು (ರಾ)

೧೬. - ಕೋಟೆ : ನಿರ್ಮಾಣವಾಚಿ ಸೂಚಕ ವಾರ್ಗಿಕವಾಗಿದೆ. ರಕ್ಷಣೆಗಾಗಿ ನಿರ್ಮಿಸಿಕೊಂಡ, ಎತ್ತರವಾದ, ಬಲವಾದ ಅಗಲವಾದ ಗೋಡೆಯನ್ನೊಳಗೊಂಡಿರುವ ಭೂಪ್ರದೇಶ 'ದುರ್ಗ' ಎಂಬ ವಾರ್ಗಿಕವೂ ಪರ್ಯಾಯವಾಗಿ ಬಳಸಲಾಗುತ್ತದೆ. ಪ್ರಾಕೃತಿಕವಾಗಿ ಈ ರೀತಿಯ ರಕ್ಷಣೆ ನೀಡುವ ಪ್ರದೇಶವನ್ನು ದುರ್ಗ-ಕೋಟೆ ಎಂಬ ವಾರ್ಗಿಕದಿಂದ ಗುರುತಿಸಲಾಗುತ್ತದೆ. 'ದುರ್ಗ' - ಸಂಸ್ಕೃತ ಪದವಾಗಿದೆ.

ಉದಾ : ಅಗಲ ಕೋಟೆ (ದೇ), ಮೆಳೆಕೋಟೆ (ದೊ), ಸೀಗೆ ಕೋಟೆ (ಮಾ)

೧೭. - ಕೊಂಡ : 'ಕುಂದ' ಪದಕ್ಕೆ ಸಂವಾದಿಯಾಗಿ ಬಳಕೆಯಾಗಿರುವ ಪದ. 'ಕುಂಡ' ಆಗಿದೆ. ಕುಂಡ - ಬೆಂಕಿ ಉರಿಸುವ ಕುಣಿ, ಬೆಟ್ಟ, ಪರ್ವತ ಎಂಬರ್ಥ ನೀಡುತ್ತದೆ. ತೆಲುಗು ಭಾಷೆಯಲ್ಲಿ 'ಕೊಂಡ' ಪದ ಬಳಕೆ. ಕೊಂಡ = ಬೆಟ್ಟ, ಗುಡ್ಡ

ಉದಾ : ಕೊಂಡೇನಹಳ್ಳಿ (ದೇ)

೧೮. - ಕಾವಲು : ಗೋವಿನ ಮೇವಿಗೆ ಹಾಗೂ ಸಾಕಾಣಿಕೆಗೆ ಮೀಸಲಿಟ್ಟ ಸ್ಥಳವೇ ಕಾವಲು. ಕಾವಲು - 'ಗ್' ಆದೇಶವಾದಾಗ 'ಗಾವಲು' ಆಗುತ್ತದೆ. ಹುಲ್ಲು ಇರುವ ಕಾವಲು - ಹುಲ್ಲುಗಾವಲು.

ಉದಾ : ಕಾವಲಹಳ್ಳಿ (ದೊ), ಹೊಂಗೇ ಕಾವಲು (ಮಾ)

೧೯. - ಕೇರಿ : ಬೀದಿ, ಅಂಗಡಿ, ಓಣಿ ಎಂಬರ್ಥ ನೀಡುತ್ತದೆ. ಕೆಳವರ್ಗದವರು ವಾಸಿಸುವ ಸ್ಥಳವೆಂಬ ಸಂಕುಚಿತಾರ್ಥದಲ್ಲಿ ಬಳಕೆಯಾಗುತ್ತಿದೆ. 'ಕೆರೆ' ವಾರ್ಗಿಕವೇ 'ಕೇರಿ' ಆಗಿ ಸ್ಥಿತ್ಯಂತರ ವಾಗಿರುವ ಸಾಧ್ಯತೆಯೂ ಇದೆ.

ಉದಾ : ಅಣ್ಣಿಗೇರಿ

೨೦. - ಗದ್ದೆ : ನೀರಾವರಿಗೆ ಯೋಗ್ಯವಾದ ಭೂ ಪ್ರದೇಶ ಕ್ಷೇತ್ರವಾಚಕ ಪದವಾಗಿದ್ದು, ಸಾಮಾನ್ಯ ವಾರ್ಗಿಕವಾಗಿ ಬಳಕೆಯಾಗುತ್ತದೆ.

ಉದಾ : ತೆಂಗಿನ ಗದ್ದೆ

೨೧. - ಗಿರಿ : ಬೆಟ್ಟ, ಗುಡ್ಡ, ಪರ್ವತ, ಎತ್ತರದ ಭೂಭಾಗವನ್ನೂ ಸೂಚಿಸುವ ಭೌಗೋಳಿಕ ಲಕ್ಷಣ ಸೂಚಿಸುವ ಪದವಾಗಿದೆ. ಪೂರ್ವಪದದಲ್ಲಿ ಬಳಕೆಯಾದರೆ ವಿಶಿಷ್ಟವಾಗಿಯೂ, ಉತ್ತರ ಪದದಲ್ಲಿ ಬಳಕೆಯಾದಾಗ ಸಾಮಾನ್ಯ ವಾರ್ಗಿಕವಾಗಿ ಬಳಕೆಯಾಗುತ್ತವೆ.

ಉದಾ : ಬಿಳಿಗಿರಿ

೨೨. - ಗುಡ್ಡ / ಗುಡ್ಡೆ : ಬೆಟ್ಟ, ದಿಣ್ಣೆ - ಅರ್ಥ ನೀಡುವ ಭೌಗೋಳಿಕ ಲಕ್ಷಣವನ್ನು ಸೂಚಿಸುವ ಪದವಾಗಿದೆ. ಎತ್ತರದ ಭೂಭಾಗ ಸೂಚಕ ಪದಗಳಾಗಿವೆ.

ಉದಾ : ಚಿಕ್ಕಮನ ಗುಡ್ಡೆ (ರಾ), ದೊಡ್ಡಮನ ಗುಡ್ಡೆ (ರಾ)

೧೧. - ಗುಡಿ : 'ಕೂಟ' ಪದದ ತದ್ಭವ ರೂಪವಾಗಿದೆ. ನಿರ್ಮಾಣವಾಚಿ ಸೂಚಕ ಪದವಾಗಿದ್ದು 'ದೇವಾಲಯ' ಪದದ ಪರ್ಯಾಯ ಪದವಾಗಿದೆ.

ಬಾವುಟ, ಧ್ವಜ, ಮಂಟಪ, ಗುಡಿಸಲು - ಅರ್ಥಗಳೂ ಇವೆ.

ಉದಾ : ನಂದಗುಡಿ (ಹೊ)

೧೨. - ಗ್ರಾಮ : ಮುಖ್ಯವಾಗಿ ಕೃಷಿಕರು ಹಾಗೂ ಕೆಳವರ್ಗದ, ವಿವಿಧ ಜಾತಿಗಳವರು ವಾಸಿಸುವ ಸ್ಥಳವಾಗಿದೆ.

ಉದಾ : ಗಾಂಧಿ ಗ್ರಾಮ (ನೆ)

೧೩. - ಗಾವಿ : ಗ್ರಾಮಾಧಿಕಾರಿ, ಪಟೇಲ, ಮುಖ್ಯಸ್ಥನಿರುವ ಹಳ್ಳಿ - ವೃತ್ತಿ ಸೂಚಕ ಪದವಾಗಿದೆ.

ಉದಾ : ಬೆಳಗಾವಿ

೧೪. - ಘಟ್ಟ : ಬೆಟ್ಟ, ಗುಡ್ಡ; ಎತ್ತರದ ಭೂಪ್ರದೇಶ ಸೂಚಿಸುವ ಪದವಾಗಿದೆ. ನಿರ್ದಿಷ್ಟ ಗಡಿ ಅಥವಾ ಎಲ್ಲೆಯನ್ನು ಸೂಚಿಸುವ ವಾರ್ಗಿಕವಾಗಿದೆ.

ಉದಾ : ಆಣೆಘಟ್ಟ (ದೇ), ಕೊನೆ ಘಟ್ಟ (ಕೋಣಘಟ್ಟ) (ದೊ), ಕಾಸರಘಟ್ಟ (ನೆ)

೧೫. - ಪಟ್ಟಣ : ನಗರದ ಜನಸಾಂದ್ರತೆಗಿಂತಲೂ, ಕಡಿಮೆ ಇರುವ ವ್ಯವಸ್ಥಿತವಾದ ವಸತಿ ಪ್ರದೇಶ. ಎಲ್ಲಾ ವರ್ಗದ ಜಾತಿಯ ಜನಗಳು ವಾಸಿಸುವ, ವಾಣಿಜ್ಯ ಕೇಂದ್ರವಾಗಿದೆ. ವಾಸ್ತವ್ಯವಾಚಿ.

ಉದಾ : ಚನ್ನಪಟ್ಟಣ (ಚ), ಚನ್ನರಾಯಪಟ್ಟಣ (ದೇ), ಬಸವಾಪಟ್ಟಣ (ಕ).

೧೬. - ಪುರ : ಆವರ, ವರ, ವಾರ, ಪುರ ಮುಂತಾದ ವಾರ್ಗಿಕಗಳು ಪರ್ಯಾಯ ಘಟಕಗಳಾಗಿ ಬಳಕೆಯಾಗಿವೆ. 'ಪಟ್ಟಣ'ದಂತೆಯೆ 'ಪುರ'ವೂ ಜನಸಾಂದ್ರತೆ ಹೊಂದಿರುವ ಪ್ರದೇಶ ವಾಗಿದೆ. ಹಿಂದೆ ಬ್ರಾಹ್ಮಣರು ಹೆಚ್ಚು ವಾಸಿಸುತ್ತಿದ್ದ ಸ್ಥಳವಾಗಿದ್ದಿತು.

ನಗರ, ಪಟ್ಟಣ, **a city, big town**[೨೧]

ಉದಾ : ವಿಜಯಪುರ (ದೇ), ವರದಾಪುರ (ಹೊ)

೧೭. - ತೋಟ : ಕ್ಷೇತ್ರವಾಚಕ ಪದವಾಗಿದ್ದು, ಹೊಲ, ಗದ್ದೆ, ವ್ಯವಸಾಯ ಭೂ ಪ್ರದೇಶವನ್ನೂ ಸೂಚಿಸುತ್ತದೆ. ವಿವಿಧ ರೀತಿಯ ಗಿಡಗಳನ್ನು ಬೆಳೆಸಿದ ಹಿತ್ತಿಲು - ಉದ್ಯಾನವನ್ನು ಪ್ರತಿನಿಧಿಸುತ್ತದೆ.

ಉದಾ : ಹೊಸತೋಟ (ದೇ), ಖಾಸಬಾಗ್ ತೋಟ (ದೇ)

೧೮. - ದಿನ್ನೆ : ಎತ್ತರದ ಭೂಪ್ರದೇಶ, ತಿಟ್ಟು, ದಿಬ್ಬ, ಗುಡ್ಡ ಏರಿ ಮುಂತಾದ ಅರ್ಥ ನೀಡುವ ವಾರ್ಗಿಕ ಪದ.

ಉದಾ : ಗುತ್ತಲದಿನ್ನೆ (ಹೊ)

೨೯. - ದುರ್ಗ : 'ಕೋಟೆ' ಪದಕ್ಕೆ ಸಂವಾದಿಯಾಗಿ ಬಳಕೆ. ನಿರ್ಮಾಣವಾಚಿಯಾಗಿದ್ದು ಸಂಸ್ಕೃತ ಪದವಾಗಿದೆ. ರಕ್ಷಣೆಗಾಗಿ ಕಟ್ಟಿಕೊಂಡಿರುವ ಅಗಲವಾದ ಗೋಡೆಯ ಪ್ರದೇಶ. ಪ್ರಾಕೃತಿಕವಾಗಿಯೂ ಈ ರೀತಿಯ ಲಕ್ಷಣ ಹೊಂದಿರಬಹುದು.

ಉದಾ : ಹೊಸದುರ್ಗ (ಕ)

೩೦. - ದೊಡ್ಡಿ : ದನಕರುಗಳನ್ನು ಕೂಡಿಹಾಕುವ ಸ್ಥಳ. ವಾಸ್ತವ್ಯ ಸೂಚಿಯಾಗಿದ್ದು 'ಹಟ್ಟಿ', 'ಕೊಟ್ಟಿಗೆ' ಅರ್ಥ ನೀಡುತ್ತದೆ. ವಾರಸುದಾರರಿಲ್ಲದ ದನಕರುಗಳನ್ನು ಕಟ್ಟುವ ಜಾಗ

a settlers first house, a fold, a stable, a cow-pen [೦೩]

ಉದಾ : ವಾಡೆದೊಡ್ಡಿ (ಕ) ಪುರದದೊಡ್ಡಿ (ಕ) ಹೊಸದೊಡ್ಡಿ (ರಾ)

೩೧. - ನಗರ : ವಾಸ್ತವ್ಯ ಸೂಚಿ, ಸಂಸ್ಕೃತಪದ. ಎಲ್ಲಾ ವರ್ಗ ಜಾತಿಯವರು ವಾಸಿಸುವ ವಾಣಿಜ್ಯ ಕೇಂದ್ರ ಪೂರ್ವಪದದಲ್ಲಿ 'ನಿರ್ದಿಷ್ಟ'ವಾಗಿಯೂ ಉತ್ತರ ಪದದಲ್ಲಿ 'ವಾರ್ಗಿಕ'ವಾಗಿಯೂ ಬಳಕೆಯಾಗುತ್ತದೆ.

ಉದಾ : ರಾಮನಗರ

೩೨. - ಪೇಟೆ : ಹಳ್ಳಿಗಳಿಗಿಂತಲೂ ಹೆಚ್ಚು ಜನಸಾಂದ್ರತೆ ಇರುವ ಕೇಂದ್ರ. ಸುತ್ತಮುತ್ತಲಿನ ಊರಿನ ಜನರು ತಮಗೆ ಬೇಕಾದ ಸರಕು ಕೊಳ್ಳಲು ಹಾಗೂ ಮಾರಲು ಸೇರುವ ವಾಣಿಜ್ಯ ವಾಸ್ತವ್ಯವಾಚಿ.

ಉದಾ : ಮಂಗಳವಾರ ಪೇಟೆ (ಚ), ಶುಕ್ರವಾರ ಪೇಟೆ (ಚ)

೩೩. - ಬಾಗಿಲು : ಚಾರಿತ್ರಿಕವಾಗಿ ನಿರ್ಮಿತವಾದ ಕೋಟೆಯ ಬಾಗಿಲು ನಿರ್ಮಾಣವಾಚಿ. ಶತ್ರುಗಳನ್ನು ತಡೆಯುವ ಸ್ಥಳ. ಪ್ರಾಕೃತಿಕವಾಗಿ ಕಿರಿದಾದ ಸ್ಥಳದಲ್ಲಿ ಶತ್ರುಗಳನ್ನು ತಡೆಗಟ್ಟಿ ಧಾಳಿ ಮಾಡಲು ಸಹಾಯಕವಾದ ಸ್ಥಳ.

ಉದಾ : ತಡಿಕವಾಗಿಲು (ರಾ)

೩೪. - ಬಂಡೆ : ಶಿಲಾವಾಚಿ ಪದ ಕಲ್ಲು , ಪೂರ್ವಪದದಲ್ಲಿ 'ವಿಶಿಷ್ಟ'ವಾಗಿ ಉತ್ತರ ಪದದಲ್ಲಿ 'ವಾರ್ಗಿಕ'ವಾಗಿ ಬಳಕೆ. ಸಣ್ಣ ಬೆಟ್ಟ-ಗುಡ್ಡ ಸೂಚಕ ಪದ. ನಿರ್ಮಾಣಕ್ಕೆ ಬೇಕಾದ ಕಲ್ಲು ಒಡೆಯುವ ಸ್ಥಳ. ತೆಲುಗು ಪ್ರಭಾವವಿದ್ದಾಗ 'ಬಂಡ' ಪದ ಬಳಕೆಯಾಗುತ್ತದೆ.

ಉದಾ : ಬಂಡೆಕೊಡಿಗೇನಹಳ್ಳಿ (ದೇ)

೩೫. - ಬಾವಿ : ನೀರು ನಿಂತಿರುವ ಹಳ್ಳ. ಪ್ರಾಕೃತಿಕವಾದ ಅಥವಾ ಕೃತಕ ನಿರ್ಮಾಣವಾಗಿರಬಹುದು. 'ವಾಪಿ' ಪದದ ತದ್ಭವ ರೂಪ.

ಉದಾ : ಕುಠಾರ ಭಾವಿ (ರಾ), ಚಿಕ್ಕ ಭಾವಿ (ಮಾ)

೩೫ಅ. - ವೀದಿ : ಊರಿನ ಮುಖ್ಯ ರಸ್ತೆಯಿಂದಲೇ ವಾರ್ಗಿಕ ನಿಷ್ಪನ್ನವಾಗಿದೆ. ವೀಧಿ > ಬೀದಿ 'ವ'ಕಾರ 'ಬ'ಕಾರವಾಗಿ ಸ್ಥಿತ್ಯಂತರವಾಗುತ್ತಿದೆ.

ಉದಾ : ತೇರುಬೀದಿ (ಕ)

೩೬. - ಬೆಟ್ಟ : ಎತ್ತರವಾದ ಭೂಪ್ರದೇಶ. ಗುಡ್ಡ, ತಿಟ್ಟು, ದಿಣ್ಣೆ, ದಿಬ್ಬ ಸ್ಥಳನಾಮ ಕ್ಷೇತ್ರವಾಚಿ. ವಾಸ್ತವ್ಯವಾಚಿ ಗಳೆರಡರಲ್ಲೂ ಇದು ಬಳಕೆಯಾಗಿರಬಹುದು.
ಉದಾ : ರೇವಣಸಿದ್ಧ ಬೆಟ್ಟ (ರಾ)

೩೭. - ಮಾಳ : ಗುಡಿಸಲು, ಉಪ್ಪಿನ ಆಗರ, ನೆಲೆ, ಎತ್ತರವಾದ ಮೈದಾನ ಎಂಬರ್ಥಗಳಿವೆ.
ಉದಾ : ಸಂತೆಮಾಳ (ಚ)

೩೮. - ವರ : ಪುರ ಪದದ ಪರ್ಯಾಯ ಪದ
- ವಾರ : ಹಳ್ಳಿಗಿಂತಲೂ ಜನಸಾಂದ್ರತೆ ಹೆಚ್ಚಿರುವ ಸ್ಥಳ
ಉದಾ : ಬೊಮ್ಮಾವರ (ದೇ), ಗಂಗವಾರ (ದೇ)

ಪೂರ್ವ ಪದದ ಕೊನೆಯಲ್ಲಿ ಹ್ರಸ್ವಸ್ವರ ಬಂದರೆ ಉತ್ತರ ಪದದ ಆದಿಯ ಪುರ ದೀರ್ಘವೂ, ಪದದ ಕೊನೆಯ ಸ್ವರ ದೀರ್ಘವಾದರೆ ಉತ್ತರದ ಆದಿಯ ಸ್ವರ ಹ್ರಸ್ವವಾಗುತ್ತದೆ.

೩೯. - ವಾಡಿ : ಹಾಡಿ, ಊರಿನ ಒಂದು ಭಾಗ
- ವಾಡೆ, - ವಾಡ, ವಾಡ, - ವಾಡಿ ಆಗಿದೆ. ಆವಾರ ಚಿಕ್ಕಕಾಡು, ಹಾಡ್ಯ (ಕುರುಚಲು ಕಾಡಿನ ಪ್ರದೇಶ) ವಾಡಿ ಮತ್ತು ಹಾಡಿಗಳು ಪ್ರಾಚೀನ ಕಾಲದ ವಾಸ್ತವ್ಯಸೂಚಿ ನೆಲೆಗಳೆಂದು ಡಾ। ಶಂಬಾ ಜೋಶಿಯವರು ಅಭಿಪ್ರಾಯಪಟ್ಟಿದ್ದಾರೆ.
- ಬಿಡಾರ, ವಾಸಸ್ಥ, ಸೈನ್ಯದ ಬೀಡು, ಧಾನ್ಯ ಬೆಳೆಯುವ ಸ್ಥಳವೆಂದೂ ಅರ್ಥ ನೀಡುತ್ತದೆ.
ಉದಾ : ಕನಸವಾಡಿ (ದೊ), ಚಿಕ್ಕಮರಳವಾಡಿ (ಕ)

೪೦. - ಮಂಗಲ : ಬ್ರಾಹ್ಮಣರ ನೆಲೆಯನ್ನು ಸೂಚಿಸುತ್ತಿದ್ದವು. 'ಅಗ್ರಹಾರ'ಗಳನ್ನು ನಿರ್ಮಿಸಿ ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದ ಸಂಪ್ರದಾಯವಿತ್ತು. ನೀರಾವರಿಗೆ ಅನುಕೂಲಕರವಾದ, ವ್ಯವಸಾಯ ಯೋಗ್ಯ ಭೂಪ್ರದೇಶ. ಚೋಳರ ಆಡಳಿತ ಕಾಲದಲ್ಲಿ ಬಳಕೆಗೆ ಬಂದ ವಾರ್ಗಿಕವಾಗಿದೆ. (ಚತುರ್ವೇದಿ ಮಂಗಲ / ಶ್ರೋತ್ರೀಯ ಪದಗಳ ಬಳಕೆ ಇದ್ದಿತು.)
ಉದಾ : ಜಾಲಮಂಗಲ (ರಾ), ಕನ್ನಮಂಗಲ (ದೇ)

೪೧. - ಸಮುದ್ರ : ಸಾಗರ ಪರ್ಯಾಯ ವಾರ್ಗಿಕ ಜಲವಾಚಿ - ಸಂಸ್ಕೃತಪದ ಘಟಕವಾಗಿದೆ. ಎಲ್ಲಾ ಸಂದರ್ಭಗಳಲ್ಲಿಯೂ ವಾಚ್ಯಾರ್ಥದಲ್ಲಿ ಇವರ ಬಳಕೆಯಾಗಿರುವುದಿಲ್ಲ. ಕೆರೆ, ಕುಂಟೆ ಮುಂತಾದುವನ್ನೆ ಉತ್ಪ್ರೇಕ್ಷೆ ಮಾಡಿ ಸಮುದ್ರ, ಸಾಗರ ಎಂಬ ಪದಗಳ ಬಳಕೆಯಾಗಿರುವ ಸಾಧ್ಯತೆ. - 'ಸಂದ್ರ' ವಾರ್ಗಿಕವು 'ಸಮುದ್ರ' ಪದಕ್ಕೆ ಸಂವಾದಿಯಾಗಿರುವ ಸಂಕ್ಷಿಪ್ತ ರೂಪವಾಗಿದೆ. The sea, The ocean [೦೪]

೪೨. - ಸಂದ್ರ : ಸಮುದ್ರದಿಂದ 'ಸಂದ್ರ' ಎಂಬ ವಾರ್ಗಿಕ ನಿಷ್ಪನ್ನವಾಗಿದೆ.
ಉದಾ : ಹೊನ್ನಸಂದ್ರ (ನೆ), ಬೀರಸಂದ್ರ (ದೇ)

೪೩. - ಸಂತೆ : ಸುತ್ತಮುತ್ತಲಿನ ಊರಿನವರು ಸರಕು ಮಾರಲು, ಕೊಳ್ಳಲು ಸೇರುವ ವ್ಯಾಪಾರ ಸ್ಥಳ, ವಾಣಿಜ್ಯ ಕೇಂದ್ರ, ವ್ಯಾಪಾರ ಮಾಡುವ ಸ್ಥಳ. ಸಂತೆ ಪದವು ವಿಶಿಷ್ಟ ಹಾಗೂ ವಾರ್ಗಿಕವಾಗಿ ಬಳಕೆ. ಪೂರ್ವಪದದಲ್ಲಿ ಬಳಕೆಯಾದರೆ ನಿರ್ದಿಷ್ಟವಾಗಿಯೂ, ಉತ್ತರ ಪದದಲ್ಲಿ ಬಂದರೆ ವಾರ್ಗಿಕವಾಗಿಯೂ ಬಳಕೆಯಾಗಿರುತ್ತದೆ.

ಉದಾ : ಸಂತೆಮೊಗೇನಹಳ್ಳಿ (ಚ)

೪೪. - ಹಟ್ಟಿ : ಆರಂಭಕಾಲದ ಮಾನವನ 'ನೆಲೆ' (ಶಂಬಾ ಜೋಶಿ - ಎಡೆಗಳು ಹೇಳುವ ಕಂನಾಡ ಕತೆ) - ದನದ ದೊಡ್ಡಿ, ಕೊಟ್ಟಿಗೆ. ಹಟ್ಟಿಗಳು ಪಶು ಸಾಕಾಣಿಕೆಯ ವೃತ್ತಿಸೂಚಕ ಅಂಶವಾಗಿದೆ. ಪಟ್ಟಿ > ಹಟ್ಟಿಯಾಗಿದೆ.

ಉದಾ : ಗುಳ್ಳಹಟ್ಟಿ ಕಾವಲು (ಕ)

೪೫. - ಹಳ್ಳಿ : ವಾಸ್ತವ್ಯವಾಚಿ, ಜನರ ವಾಸಸ್ಥಳವಾಗಿದೆ. 'ಚಿಕ್ಕಊರು' ಅಥವಾ 'ಗ್ರಾಮ' ಎಂಬ ಅರ್ಥ ನೀಡುತ್ತದೆ.

ಉದಾ : ವಾಜರಹಳ್ಳಿ (ಚ)

೪೬. - ಸಾಗರ : 'ಸಮುದ್ರ'- ಜಲವಾಚಿ ಪದಕ್ಕೆ ಪರ್ಯಾಯ ಪದವಾಗಿ ಬಳಕೆ 'ದೊಡ್ಡಕೆರೆ' 'ಕುಂಟೆ'ಯನ್ನು 'ಸಾಗರ' ಎಂದು ಬಳಸುವುದರ ಮೂಲಕ ಉತ್ಪ್ರೇಕ್ಷೆ ಮಾಡಿರುವ ಸಾಧ್ಯತೆ ಇರುತ್ತದೆ. ಪೂರ್ವಘಟಕವಾಗಿದ್ದಲ್ಲಿ 'ನಿರ್ದಿಷ್ಟವೂ, ಉತ್ತರ ಪದವಾದಲ್ಲಿ ವಾರ್ಗಿಕವೂ ಆಗಿರುತ್ತದೆ.

ಉದಾ : ಕೆಂಪಸಾಗರ (ಮಾ) ಸಾಗರಹಳ್ಳಿ (ದೇ) ಕಂಬಸಾಗರ (ಕ)

## ೩.೩ ಸ್ಥಳನಾಮಗಳ ವರ್ಗೀಕರಣ ವಿಧಾನಗಳು

ಸ್ಥಳನಾಮಗಳು ಶಾಸ್ತ್ರೀಯ ಅಧ್ಯಯನಕ್ಕೆ ಒಳಗಾಗಿರುವುದರಿಂದ, ಅಧ್ಯಯನಕಾರರು ತಮ್ಮದೇ ಆದ ವರ್ಗೀಕರಣವನ್ನು ರೂಪಿಸಿಕೊಂಡಿದ್ದಾರೆ. ಈ ವರ್ಗೀಕರಣ ವಿಧಾನಗಳಲ್ಲಿ ವೈವಿಧ್ಯತೆಯನ್ನು ಗುರುತಿಸಬಹುದಾಗಿದ್ದು, ಇವುಗಳಿಗೆ ನಿರ್ದಿಷ್ಟ ಮಿತಿಯನ್ನು ನಿಗದಿಪಡಿಸಲು ಸಾಧ್ಯವಿಲ್ಲ. ಅಧ್ಯಯನಕಾರರ ಕೆಲವು ಮಾದರಿಗಳನ್ನು ಇಲ್ಲಿ ಗುರುತಿಸಬಹುದಾಗಿದೆ.

### ೩.೩.೧ ಕೃತಿ : ಎಡೆಗಳು ಹೇಳು ಕಂನಾಡ ಕತೆ, ಲೇಖಕರು : ಶಂಬಾ ಜೋಷಿ

೧. ಪ್ರಾಣಿಗಳಿಂದ ಬಂದವು
೨. ಗಿಡಗಂಟಿಗಳಿಂದ ಬಂದ ಹೆಸರು
೩. ದೇಹದ ಅಂಗಾಗಗಳಿಂದ
೪. ಬಳಗದವರಿಂದ
೫. ಮನೆಗಳಿಂದ

೧೨. ನೆಲದಿಂದ
೧೩. ಬೇಸಾಯದಿಂದ
೧೪. ಕಾಲದಿಂದ
೧೫. ಮಳೆ ಮಿಂಚು ಮುಂತಾದವುಗಳಿಂದ
೧೬. ಕಾಲದಿಂದ

೬. ದಿನಸುಗಳಿಂದ
೭. ಬಣ್ಣಗಳಿಂದ
೮. ಹರಳುಗಳಿಂದ
೯. ಬಂಗಾರದಿಂದ
೧೦. ಅಂಕೆಗಳಿಂದ
೧೧. ಗ್ರಹಾದಿಗಳಿಂದ
೧೭. ಚಿಕ್ಕ ದೊಡ್ಡ - ಪರಿಮಾಣವಾಚಕಗಳಿಂದ
೧೮. ಕೂಡಿಕೆಯಿಂದ
೧೯. ದೇವತಾದಿಗಳಿಂದ
೨೦. ಜನಗಳಿಂದ
೨೧. ವ್ಯವಸಾಯ ಉದ್ಯೋಗಗಳಿಂದ
೨೨. ವ್ಯಕ್ತಿಗಳಿಂದ (ರಾಜಕೀಯ, ಸಾಮಾಜಿಕ, ಧಾರ್ಮಿಕ)

**೩.೩.೨ ಕೃತಿ : ಸ್ಥಳನಾಮ ವ್ಯಾಸಂಗ, ಲೇಖಕರು : ಡಾ॥ ದೇ. ಜವರೇಗೌಡ**

೧. ವಸತಿ ಸೂಚಿಸುವ ಘಟಕಗಳು
೨. ಬೆಟ್ಟ ಗುಡ್ಡ ಕಲ್ಲು ಸೂಚಕಗಳು
೩. ಜಲಸೂಚಕ ಘಟಕಗಳು
೪. ಭೌಗೋಳಿಕ ಲಕ್ಷಣ ಸೂಚಕಗಳು
೫. ಜಾತಿ, ಕುಲ, ಧರ್ಮಸೂಚಿಗಳು
೬. ವ್ಯಾಪಾರ ಕೇಂದ್ರ ಸೂಚಿಗಳು
೭. ಸೈನಿಕರಿಗೆ ಸಂಬಂಧಿಸಿದವುಗಳು
೮. ಪ್ರಾಣಿವಾಚಿ
೧೦. ಸಂಕೀರ್ಣ ಘಟಕಗಳು

**೩.೩.೩ ಕೃತಿ : ನಾಮ ವಿಜ್ಞಾನ, ಲೇಖಕರು : ಡಾ॥ ಎಂ.ಎಂ. ಕಲಬುರ್ಗಿ**

೧. ನಿಸರ್ಗವಾಚಿ
೨. ನಿರ್ಮಾಣವಾಚಿ
೩. ಜನಾಂಗವಾಚಿ
೪. ವ್ಯಕ್ತಿವಾಚಿ
೫. ಆದರ್ಶವಾಚಿ

**೩.೩.೪ ಕೃತಿ : Studies in the Historical and Cultural Geography and Ethnography of Gujarath : ಲೇಖಕರು : ಎಚ್.ಡಿ. ಸಂಕಾಲಿಯ**

೧. ವ್ಯಕ್ತಿನಾಮಗಳಿಂದ
೨. ಘಟನೆಗಳಿಂದ
೩. ಸಂಪ್ರದಾಯ ಮತ್ತು ಮೌಢ್ಯಗಳಿಂದ
೪. ಭೌಗೋಳಿಕ ಲಕ್ಷಣಗಳಿಂದ
೫. ಹೂ, ಹಣ್ಣು ಮರ, ಬೆಳೆಗಳಿಂದ
೬. ಪ್ರಾಣಿಪಕ್ಷಿಗಳಿಂದ
೭. ಹಳೆಯ ಹೆಸರುಗಳಿಂದ

**೩.೩.೫ ಕೃತಿ : ಸ್ಥಳನಾಮ ಅಧ್ಯಯನಗಳು, ಲೇಖಕರು : ಡಾ॥ ವಿ. ಗೋಪಾಲಕೃಷ್ಣ**

**I. ನೈಸರ್ಗಿಕ ಅಂಶಗಳು**

೧. ಜಲಸೂಚಿ
೨. ಪರ್ವತ/ಅಡವಿ/ಉನ್ನತಭೂಮಿ
೩. ಭೂಸ್ಥಿತಿ
೪. ವೃಕ್ಷಲತಾದಿಗಳು
೫. ಪ್ರಾಣಿ/ಪಕ್ಷಿ/ಜಂತು/ಕ್ರಿಮಿಕೀಟಗಳು
೬. ಶಿಲೆ

II. ಸಾಮಾಜಿಕ ಅಂಶಗಳು

೧. ವ್ಯಕ್ತಿನಾಮಗಳು
೨. ಜಾತಿ
೩. ಬುಡಕಟ್ಟು/ಕುಲ/ಕುಟುಂಬ ನಾಮ/ಗೋತ್ರ
೪. ಮತ/ಭಾಷೆ
೫. ವಾಸ್ತು/ಶಿಲ್ಪ
೬. ಘಟನೆ
೭. ಬಿರುದು
೮. ಪೂಜ್ಯಾರ್ಥಕ
೯. ಸಾದೃಶ್ಯ ಬೋಧಕ
೧೦. ವಸ್ತು

III. ವರ್ಣನಾತ್ಮಕ

೧. ಸ್ಥಳ
೨. ದಿಕ್ಕು
೩. ಗ್ರಾಮನಾಮ
೪. ವರ್ಣ
೫. ಸಂಖ್ಯೆ
೬. ಪೌರ್ವಾಪರ್ಯ
೭. ಪರಿಮಾಣ
೮. ಪೂಜ್ಯಾರ್ಥಕ
೯. ಸಾದೃಶ್ಯ ಬೋಧಕ
೧೦. ವಸ್ತು

IV. ಐತಿಹಾಸಿಕ ಅಂಶಗಳು

V. ಪುರಾಣಗಳು ಮತ್ತು ಜನಪದ ಕತೆಗಳು,

೩.೩.೬ ಕೃತಿ : ಸ್ಥಳನಾಮಗಳು, ಲೇಖಕರು : ಡಾ। ಕೆ. ವಿಶ್ವನಾಥ

೧. ವಾಸ್ತವ್ಯ ಸೂಚಕ ಘಟಕಗಳು
೨. ಭೂ ಸೂಚಕ ಘಟಕಗಳು
೩. ಜಲಸೂಚಿ ಘಟಕಗಳು
೪. ಶಿಲಾ ಘಟಕಗಳು
೫. ಸಸ್ಯವಾಚಕ ಘಟಕಗಳು ಮರಗಿಡಗಳು
೬. ವ್ಯಾಪಾರ ಕೇಂದ್ರಗಳನ್ನು ನಿರ್ದೇಶಿರುವ ಘಟಕಗಳು
೭. ವ್ಯಕ್ತಿ ನಾಮಗಳು
೮. ದೇವತೆಗಳ ಹೆಸರುಗಳಿಂದ ಕಂಡುಬರುವ ಸ್ಥಳನಾಮ ಘಟಕಗಳು
೯. ವೃತ್ತಿ ನಾಮ ಘಟಕಗಳು
೧೦. ಪ್ರಾಣಿಗಳಿಂದ ವ್ಯಕ್ತವಾಗುವ ಸ್ಥಳನಾಮ ಘಟಕಗಳು
೧೧. ದಿಕ್ಕುಗಳಿಂದ ಸೂಚಿತವಾಗುವ ಸ್ಥಳನಾಮ ಘಟಕಗಳು
೧೨. ಗ್ರಹನಕ್ಷತ್ರಾದಿಗಳಿಂದ ಬಂದ ಹೆಸರುಗಳು
೧೩. ಮನೆತನದ ಹೆಸರುಗಳಿಂದ

ಸ್ಥಳನಾಮ ವರ್ಗೀಕರಣ ವಿಧಾನವು ಪ್ರಾದೇಶಿಕ ಭಿನ್ನತೆ ಹೊಂದಿರುವ ಸಾಧ್ಯತೆ ಇರುತ್ತದೆ. ಅಧ್ಯಯನಕಾರರು ತಮ್ಮ ವ್ಯಾಪ್ತಿಗೆ ಸಂಬಂಧಿಸಿದಂತೆ ವರ್ಗೀಕರಣ ಮಾದರಿಯನ್ನು ಸಿದ್ಧಪಡಿಸಿಕೊಳ್ಳುವ ಸಾಧ್ಯತೆ ಇದೆ. ಆದುದರಿಂದ ವರ್ಗೀಕರಣ ವಿಧಾನದಲ್ಲಿ ಏಕತೆಯನ್ನು ಗುರುತಿಸಲು ಸಾಧ್ಯವಿಲ್ಲ. ಇಲ್ಲಿ ಸಿದ್ಧ ಮಾದರಿಯನ್ನು ರೂಪಿಸಿಕೊಳ್ಳಲು ಸಾಧ್ಯವಿರುವುದಿಲ್ಲ.

ಸ್ಥಳನಾಮಗಳಲ್ಲಿನ ವಿಶಿಷ್ಟ ಘಟಕಗಳ ಬಳಕೆಗೆ ಆಯಾ ಪ್ರದೇಶದ ಐತಿಹಾಸಿಕ, ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಅಂಶಗಳು ಅತ್ಯಂತ ಪ್ರಮುಖ ಪಾತ್ರ ನಿರ್ವಹಿಸುತ್ತವೆ. ಈ ಕಾರಣದಿಂದ, ಸ್ಥಳನಾಮಾಧ್ಯಯನಕ್ಕೆ ಸಂಬಂಧಿಸಿದಂತೆ ನಿರ್ದಿಷ್ಟ ಚೌಕಟ್ಟನ್ನು ರೂಪಿಸುವುದು ಸೂಕ್ತವಾದ ಕ್ರಮವಲ್ಲ.

ಆಧುನಿಕವಾಗಿ ನಾಮಕರಣಗೊಂಡಿರುವ ಸ್ಥಳನಾಮಗಳಲ್ಲಿನ ವಿಶಿಷ್ಟಗಳು ಯಾದೃಚ್ಛಿಕತೆ ಹೊಂದಿರುವ ಸಾಧ್ಯತೆ ಹೆಚ್ಚಾಗಿದೆ. ವಿಶಿಷ್ಟಗಳು ಬಹುಪಾಲು ಹೆಸರುಗಳು ಆ ಪ್ರದೇಶದ ಯಾವುದೇ ಲಕ್ಷಣವನ್ನೂ ಸೂಚಿಸುವುದಿಲ್ಲ. ಸಂಸ್ಕೃತ, ಇಂಗ್ಲಿಷ್ ಭಾಷೆಯನ್ನು ಒಳಗೊಂಡಂತೆ ನಾಮನಿರ್ದೇಶನ ಆಗಿರುವ ಸಾಧ್ಯತೆಯೂ ಇರುತ್ತದೆ. ಕೇಳಲು ಹಿತವಾದ ಅಥವಾ ರಾಜಕೀಯ ಪ್ರೇರಿತವಾದ ಹೆಸರು ನೀಡುವಿಕೆ ಕಂಡುಬರುತ್ತದೆ. ಆ ಸ್ಥಳಕ್ಕೆ ಸಂಬಂಧಿಸಿದಂತೆ ಅನ್ವರ್ಥತೆ ಮುಖ್ಯವಾಗಿರುವುದಿಲ್ಲ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ವರ್ಗೀಕರಣ ಮಾದರಿಯನ್ನು ರೂಪಿಸಿಕೊಳ್ಳಲಾಗಿದೆ. ಅಧ್ಯಯನದಲ್ಲಿ ಮಾದರಿಯಾಗಿ ಬಳಕೆ ಮಾಡಿಕೊಂಡಿರುವ ಸ್ಥಳನಾಮಗಳ ವಿಶಿಷ್ಟ ಹಾಗೂ ವಾರ್ಗಿಕಗಳಿಗೆ ಅನುಗುಣವಾಗಿ ಈ ವರ್ಗೀಕರಣವನ್ನು ಸಿದ್ಧಪಡಿಸಲಾಗಿದೆ.

I. **ಭಾಷಿಕ ಮಾದರಿಗಳು**

೧. ಒಂದು ಘಟಕವಿರುವ ಸ್ಥಳನಾಮಗಳು

೨. ಎರಡು ಘಟಕವಿರುವ ಸ್ಥಳನಾಮಗಳು

೩. ಎರಡಕ್ಕಿಂತ ಹೆಚ್ಚು ಘಟಕವಿರುವ ಸ್ಥಳನಾಮಗಳು

೪. ವಾರ್ಗಿಕಗಳೇ ನಿರ್ದಿಷ್ಟವಾಗಿ ಬಳಕೆಯಾಗಿರುವ ಸ್ಥಳನಾಮಗಳು

೫. ಸಂಸ್ಕೃತೀಕರಣಗೊಂಡ ಸ್ಥಳನಾಮಗಳು

೬. ಪುನರ್ನಾಮಕರಣಗೊಂಡ ಸ್ಥಳನಾಮಗಳು

೭. ಹ್ರಸ್ವೀಕರಣಗೊಂಡ ಸ್ಥಳನಾಮಗಳು

೮. ಬರಹ ಮತ್ತು ಸಾಮಾನ್ಯರ ಉಚ್ಚಾರಣೆ

೯. ಸ್ವರಾಂತ್ಯ ಮತ್ತು ವ್ಯಂಜನಾಂತ್ಯ ಸ್ಥಳನಾಮಗಳು

೧೦. ಮಹಾಪ್ರಾಣಾಕ್ಷರಗಳು ಮತ್ತು ಸ್ಥಳನಾಮಗಳು

೧೧. ಪ > ಹ : ಬದಲಾವಣೆ

೧೨. ತೆಲುಗು ಭಾಷಾ ಪ್ರಭಾವಿತ ಸ್ಥಳನಾಮಗಳು

೧೩. ಸಂಧಿಕಾರ್ಯ ನಡೆದಿರುವ ಸ್ಥಳನಾಮಗಳು

೧೪. ಅಕ್ಷರ ವ್ಯತ್ಯಯ ಹೊಂದಿರುವ ಸ್ಥಳನಾಮಗಳು

೧೫. ಸಮಾಸಪದಗಳ ಉ ಮತ್ತು ಸ್ಥಳನಾಮಗಳು

೧೬. ವಿರುದ್ಧಾರ್ಥಕ ಸ್ಥಳನಾಮಗಳು

೧೭. ಭಾಷಿಕ ಬದಲಾವಣೆ - ಸ್ಥಳನಾಮಗಳು

೧೮. ಒತ್ತಕ್ಷರಗಳು - ಸ್ಥಳನಾಮಗಳು

## II. ಪ್ರಾಕೃತಿಕ ಲಕ್ಷಣ ಸೂಚಿಸುವ ಸ್ಥಳನಾಮಗಳು

೧. ಶಿಲಾವಾಚಿ ಸ್ಥಳನಾಮಗಳು

೨. ಜಲವಾಚಿ ಸ್ಥಳನಾಮಗಳು

೩. ಸಸ್ಯ ವಾಚಿ ಸ್ಥಳನಾಮಗಳು

೪. ಪ್ರಾಣಿ, ಪಕ್ಷಿವಾಚಿ ಸ್ಥಳನಾಮಗಳು

೫. ಮಣ್ಣಿನ ಗುಣಸೂಚಿಸುವ ಸ್ಥಳನಾಮಗಳು

೬. ಲೋಹ, ಖನಿಜ, ಸಂಪತ್ತು ಸೂಚಕ ಸ್ಥಳನಾಮಗಳು

೭. ಕ್ಷೇತ್ರ ವಾಚಕ ಸ್ಥಳನಾಮಗಳು

## III. ಸಾಮಾಜಿಕ ಸಾಂಸ್ಕೃತಿಕ ಲಕ್ಷಣ ಸೂಚಕ ಸ್ಥಳನಾಮಗಳು

೧. ಜಾತಿವಾಚಿ ಸ್ಥಳನಾಮಗಳು

೨. ವೃತ್ತಿ ವಾಚಿ ಸ್ಥಳನಾಮಗಳು

೩. ವ್ಯಕ್ತಿ ವಾಚಿ ಸ್ಥಳನಾಮಗಳು

೪. ದೈವ ವಾಚಿ ಸ್ಥಳನಾಮಗಳು

೫. 'ಸೂಳೆ' ಪದಸೂಚಕ ಸ್ಥಳನಾಮಗಳು

೬. 'ಇಸ್ಲಾಂ' ಧರ್ಮ ಸೂಚಿಸುವ ಸ್ಥಳನಾಮಗಳು

೭. ಸಂಬಂಧ ಸೂಚಕ ಸ್ಥಳನಾಮಗಳು

## IV. ಸ್ಥಳನಾಮಗಳು - ಇತಿಹಾಸ

೧. ಇತಿಹಾಸ ಮತ್ತು ಸ್ಥಳನಾಮಗಳು

೨. ಪುರಾಣ ಮತ್ತು ಸ್ಥಳನಾಮಗಳು

೩. ಐತಿಹ್ಯಗಳು ಮತ್ತು ಸ್ಥಳನಾಮಗಳು

೪. ಶಾಸನೋಕ್ತ ಸ್ಥಳನಾಮಗಳು ಮತ್ತು ಸ್ಥಿತ್ಯಂತರ ರೂಪ

V. **ಸಂಕೀರ್ಣ ಸ್ಥಳನಾಮಗಳು**

೧. ಸಾಪೇಕ್ಷ ಸ್ಥಳನಾಮಗಳು

ಅ) ದಿಗ್ವಾಚಕ ಸ್ಥಳನಾಮಗಳು

ಆ) ಪರಿಮಾಣವಾಚಿ ಸ್ಥಳನಾಮಗಳು

ಇ) ಪೌರ್ವಾಪರ್ಯ ಸ್ಥಳನಾಮಗಳು

೨. ಪ್ರತಿಕರಣ ಸ್ಥಳನಾಮಗಳು

೩. ವರ್ಣ (ಬಣ್ಣ) ಸೂಚಕ ಸ್ಥಳನಾಮಗಳು

೪. ವಸತಿ, ನಿರ್ವಸತಿ ಹಾಗೂ ನಿರ್ವಸಿತ ಸ್ಥಳನಾಮಗಳು

೫. ನಗರ, ಪುರ, ಪಟ್ಟಣ, ಪೇಟೆ ಸೂಚಿಸುವ ಸ್ಥಳನಾಮಗಳು

೬. ವಾಣಿಜ್ಯ ಕೇಂದ್ರ ಸೂಚಕ ಸ್ಥಳನಾಮಗಳು

೭. ಆಡಳಿತಕ್ಕೆ ಸಂಬಂಧಿಸಿದ ಸ್ಥಳನಾಮಗಳು

ಸ್ಥಳನಾಮಗಳು ಸಂಸ್ಕೃತಿ, ಭೌಗೋಳಿಕ ಮತ್ತು ಐತಿಹಾಸಿಕ ಅಂಶಗಳನ್ನು ಒಳಗೊಂಡಿರುವುದರ ಜೊತೆಗೆ, ಭಾಷಾವಿಜ್ಞಾನಕ್ಕೆ ಪೂರಕ ಮಾಹಿತಿಯನ್ನು ನೀಡುತ್ತವೆ. ಭಾಷಾ ಬೆಳವಣಿಗೆ, ಇತರ ಭಾಷೆಗಳ ನಡುವಿನ ಸಂಬಂಧ, ಅನ್ಯಭಾಷಾ ಪ್ರಭಾವ, ಉಪಭಾಷೆಗಳ ಲಕ್ಷಣ, ಭಾಷಾ ಸ್ವೀಕರಣೆ ಮುಂತಾದ ವಿವರಗಳನ್ನು ತಿಳಿಯಲು ಸ್ಥಳನಾಮಾಧ್ಯಯನವು ಸಹಕಾರಿಯಾಗಿದೆ. ಐತಿಹಾಸಿಕ ವಿವರಗಳನ್ನು ಒಳಗೊಂಡಿರುವ ಸ್ಥಳನಾಮಗಳು, ಇತಿಹಾಸಕ್ಕೆ ಸಂಬಂಧಿಸಿದಂತೆ ಹೊಸ ಹೊಳಹುಗಳನ್ನು ನೀಡುತ್ತದೆ. ಸಾಂಸ್ಕೃತಿಕ ಸಾಮಾಜಿಕ ವಿವರಗಳನ್ನು ನೀಡುವ ಸ್ಥಳನಾಮಗಳು, ಭೌಗೋಳಿಕ-ಪ್ರಾಕೃತಿಕ ಅಂಶಗಳನ್ನು ಒಳಗೊಂಡಿವೆ. ಪುರಾತನ ಕಾಲದ ಸಂಸ್ಕೃತಿ, ಜನಜೀವನ, ಆಡಳಿತ ವಿಧಾನ, ವೃತ್ತಿ-ಜಾತಿ, ನಾಗರೀಕತೆಗಳನ್ನು ಸ್ಥಳನಾಮಾಧ್ಯಯನದಿಂದ ತಿಳಿಯಬಹುದು.

## ೩.೪ ಭೌಗೋಳಿಕ ಸ್ವರೂಪ

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಬಯಲುಸೀಮೆ ಎಂಬ ಹೆಸರನ್ನು ಪಡೆದಿದೆಯಾದರೂ, ಬೆಟ್ಟಗುಡ್ಡಗ ಪ್ರದೇಶಗಳನ್ನು ಒಳಗೊಂಡಿದೆ. ಇವುಗಳು ಬೃಹತ್ ಬೆಟ್ಟಸಾಲುಗಳಲ್ಲ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ೫೮೧೫ ಚ.ಕಿ.ಮೀ. ವಿಸ್ತೀರ್ಣವನ್ನು ಒಳಗೊಂಡಿದೆ. ಎಂಟು ತಾಲ್ಲೂಕುಗಳನ್ನು ಹೊಂದಿರುವ ಈ ಜಿಲ್ಲೆಯಲ್ಲಿ ಕನಕಪುರವು ವಿಸ್ತೀರ್ಣದಲ್ಲಿ ಅತ್ಯಂತ ದೊಡ್ಡ ತಾಲ್ಲೂಕು ಆಗಿದೆ. ಗ್ರಾಮಾಂತರ ಜಿಲ್ಲೆಯಲ್ಲಿ ವ್ಯವಸಾಯವು ಪ್ರಮುಖ ವೃತ್ತಿಯಾಗಿದೆ. ಇತರ ತಾಲ್ಲೂಕುಗಳಲ್ಲಿ ಕೆರೆ, ಕುಂಟೆ, ಬಾವಿಗಳು ಮುಖ್ಯ ನೀರಿನ ಸೆಲೆಗಳಾಗಿವೆ. ಕನಕಪುರದ ಕೆಲವು ಪ್ರದೇಶವು ಕಾಡಿನಿಂದ ಕೂಡಿದೆ. ಈ ಜಿಲ್ಲೆಯು ಮಳೆಯನ್ನು ಅವಲಂಬಿಸಿದೆ. ದೇಶದ ಎಲ್ಲಾ ಭಾಗಗಳಿಂದಲೂ ವಲಸೆ ಬಂದು ಬೆಂಗಳೂರಿನಲ್ಲಿ ನೆಲೆಸುತ್ತಿರುವುದರಿಂದ ಬೆಂಗಳೂರು ಅತ್ಯಂತ ವೇಗವಾಗಿ ಬೆಳೆಯುತ್ತಿರುವ ನಗರವಾಗಿದೆ. ಗ್ರಾಮೀಣ ಪ್ರದೇಶಗಳೆಲ್ಲವೂ ನಗರ ಪ್ರದೇಶಕ್ಕೆ ಹೊಂದಿಕೊಂಡಿವೆ. ಕೋಟೆ ಕೊತ್ತಲಗಳು, ಅರಮನೆ, ಬೃಹತ್ ಕಟ್ಟಡ ಸಂಕೀರ್ಣಗಳು, ಶಾಸನಗಳು, ದೇವಾಲಯಗಳು ಐತಿಹಾಸಿಕ ಮಹತ್ವವನ್ನು ಸೂಚಿಸುತ್ತವೆ. ಆದಿಮಾನವನ ನೆಲೆಯನ್ನು ಸೂಚಿಸುವ ಕೆಲವು ಕುರುಹುಗಳನ್ನು ಈ ಜಿಲ್ಲೆಯಲ್ಲಿ ಗುರುತಿಸಬಹುದು.

## ೩.೫ ಸಾಮಾಜಿಕ - ಸಾಂಸ್ಕೃತಿಕ ಸ್ವರೂಪ

ಬೆಂಗಳೂರು ಪುರಾತನ ಹಿನ್ನೆಲೆಯನ್ನು ಒಳಗೊಂಡಿದ್ದು, ಸಾಮಾಜಿಕ, ಸಾಂಸ್ಕೃತಿಕ ವೈವಿಧ್ಯತೆಯನ್ನು ಹೊಂದಿದೆ. ಅನೇಕ ರಾಜಮನೆತನಗಳು, ಪಾಳೆಯಗಾರರು, ಬ್ರಿಟಿಷರು ಬೆಂಗಳೂರನ್ನು ಕೇಂದ್ರವನ್ನಾಗಿಟ್ಟುಕೊಂಡು ಆಡಳಿತ ನಡೆಸಿದ್ದಾರೆ. ಇವರ ಆಡಳಿತಕ್ಕೆ ಒಳಗಾದ ಈ ಪ್ರದೇಶದಲ್ಲಿ ಆ ಕಾಲದ ಸಂಸ್ಕೃತಿಯನ್ನು ಬಿಂಬಿಸುವ ದೇವಾಲಯಗಳು, ಕಟ್ಟಡಗಳು, ಅರಮನೆ, ಗೋಪುರಗಳು ಇಂದಿಗೂ ಇವೆ. ಬ್ರಿಟಿಷರ ಆಡಳಿತದಲ್ಲಿದ್ದ ಮಿಲಿಟರಿ ಕ್ಯಾಂಪ್ ಪ್ರದೇಶವನ್ನು ಅದೇ ಉದ್ದೇಶಕ್ಕಾಗಿ ಬಳಸಿಕೊಳ್ಳಲಾಗುತ್ತಿದೆ. ಬೆಂಗಳೂರು ನಗರ ಹಾಗೂ ಗ್ರಾಮಾಂತರ ಭಾಗದಲ್ಲಿರುವ ಕೆಲವು ಕೋಟೆಗಳು ಹಾಗೂ ಶಾಸನಗಳು ನಿರ್ದಿಷ್ಟಾವಧಿಯ ಆಡಳಿತವನ್ನು ಹಾಗೂ ರಾಜಕೀಯ ಹಿನ್ನೆಲೆಯನ್ನು ಸೂಚಿಸುತ್ತವೆ.

ದೇವನಹಳ್ಳಿಯ ವೇಣುಗೋಪಾಲಸ್ವಾಮಿ ದೇವಾಲಯ, ಚನ್ನಪಟ್ಟಣದ ಚನ್ನಕೇಶವಸ್ವಾಮಿ ದೇವಸ್ಥಾನ, ದೊಡ್ಡಮಳೂರಿನ ಅಪ್ರಮೇಯ ಸ್ವಾಮಿ ದೇವಾಲಯ, ವಿಜಯಪುರದ ಚನ್ನಕೇಶವ ಸ್ವಾಮಿ ದೇವಾಲಯ, ಶಿವಗಂಗೆಯ ಗಂಗಾಧರೇಶ್ವರ ದೇವಾಲಯ, ಮಾಗಡಿಯ ರಂಗನಾಥಸ್ವಾಮಿ ದೇವಾಲಯ, ರಾಮನಗರದ ರೇವಣಸಿದ್ದೇಶ್ವರರ ಬೆಟ್ಟ ಮಣ್ಣೆಯ ಸೋಮೇಶ್ವರ ದೇವಾಲಯ ಪೌರಾಣಿಕ ಹಿನ್ನೆಲೆಯನ್ನು ಒಳಗೊಂಡಿರುವ ಪ್ರಾಚೀನ ಪರಂಪರೆಯನ್ನು ಹಾಗೂ ಸಾಂಸ್ಕೃತಿಕ ಅಂಶಗಳನ್ನೂ ಪ್ರತಿನಿಧಿಸುತ್ತವೆ. ಬೆಂಗಳೂರು ಪ್ರದೇಶವು ವಿವಿಧ ಜನಾಂಗಗಳನ್ನು ಸೂಚಿಸುವ ಜನರನ್ನು ಒಳಗೊಂಡಿವೆ. ಹಿಂದೂಗಳು ಹಾಗೂ ಮುಸಲ್ಮಾನ ಧರ್ಮಾನುಯಾಯಿಗಳ ಜೊತೆ ಕ್ರಿಶ್ಚಿಯನ್ನರದ್ದು ನಂತರದ ಸ್ಥಾನವನ್ನಾವರಿಸಿದೆ.

ವಿವಿಧ ವೃತ್ತಿಯನ್ನವಲಂಬಿಸಿರುವ, ಜಾತಿಗಳನ್ನು ಈ ಪ್ರದೇಶದಲ್ಲಿ ಗುರುತಿಸಬಹುದಾಗಿದೆ. ಈ ಜಾತಿಸೂಚಕ ಜನಗಳ ಆಚಾರ-ವಿಚಾರಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಗ್ರಾಮಾಂತರ ಜಿಲ್ಲೆಯಲ್ಲಿ ನಡೆಯುವ ಜಾತ್ರೆಗಳು, ಹಬ್ಬ-ಹರಿದಿನಗಳು, ಉತ್ಸವಗಳು, ಸಾಂಸ್ಕೃತಿಕ ವೈವಿಧ್ಯತೆಯನ್ನು ಸೂಚಿಸುತ್ತವೆ. ಇವುಗಳ ಜೊತೆಗೆ ನಿರ್ದಿಷ್ಟ ಜನಾಂಗವನ್ನು ಸೂಚಿಸುವ ಉಡುಗೆ-ತೊಡುಗೆಗಳನ್ನು ಈ ಭಾಗದಲ್ಲಿ ಗುರುತಿಸಬಹುದು.

## ೩.೬ ಭಾಷಿಕ ಸ್ವರೂಪ

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕನ್ನಡವು ಪ್ರಮುಖ ಭಾಷೆಯಾಗಿದ್ದು, ಶಿಷ್ಟ ಭಾಷೆ ಹಾಗೂ ಅದಕ್ಕೆ ಹತ್ತಿರವಾದ ಉಪಭಾಷೆಯಾಗಿದೆ. ಉಳಿದಂತೆ ತೆಲುಗು, ಉರ್ದು, ಹಿಂದಿ, ತಮಿಳು, ಇಂಗ್ಲಿಷ್ ಭಾಷೆಗಳನ್ನು ಗುರುತಿಸಬಹುದು. ಅಧಿಕೃತ ವ್ಯವಹಾರಿಕ ಭಾಷೆ ಕನ್ನಡ ಭಾಷೆಯಾಗಿದ್ದು ಇತರ ಭಾಷೆಗಳು ವೈಯುಕ್ತಿಕ ವ್ಯವಹಾರಗಳಿಗೆ ಬಳಕೆಯಾಗುತ್ತಿದೆ. ಶಿಕ್ಷಣ ಮಾಧ್ಯಮವಾಗಿ ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳೆರಡೂ ಬಳಕೆಯಲ್ಲಿವೆ. ಚಲನಚಿತ್ರ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಗ್ರಾಮಾಂತರ ಜಿಲ್ಲೆಯಲ್ಲಿ ಕನ್ನಡ ಹಾಗೂ ತೆಲುಗು ಭಾಷೆಯ ಚಿತ್ರಗಳ ಪ್ರದರ್ಶನವಾಗುತ್ತಿವೆ. ಇತ್ತೀಚಿನ ದಿನಗಳಲ್ಲಿ ಜನಸಾಮಾನ್ಯರು ವ್ಯವಹಾರಕ್ಕೆ ಇಂಗ್ಲಿಷ್ ಭಾಷೆಯನ್ನು ಬಳಸುತ್ತಿದ್ದು, ಇದು ಪ್ರತಿಷ್ಠೆಯ ಸಂಕೇತವಾಗುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಬಹುಭಾಷಿಕತೆಯ ಪ್ರದೇಶವಾಗಿದೆ. ಇಲ್ಲಿ ಬಂದು ನೆಲೆಸಿರುವ ಕೆಲವು ಜನಾಂಗಗಳು ಕನ್ನಡೇತರ ಮಾತೃಭಾಷೆಯನ್ನು ಒಳಗೊಂಡಿವೆ.

## ೩.೭ ತಾಲ್ಲೂಕು ಕೇಂದ್ರಗಳ ಸ್ಥೂಲ ಪರಿಚಯ

'ಬೆಂಗಳೂರು' ಕರ್ನಾಟಕದ ರಾಜಧಾನಿಯಾಗಿದ್ದು, ನಗರ ಹಾಗೂ ಗ್ರಾಮಾಂತರದ ಪ್ರತ್ಯೇಕ ಜಿಲ್ಲೆಗಳನ್ನು ಒಳಗೊಂಡಿದೆ. ನಗರ ಜಿಲ್ಲೆಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯೊಳಗೊಂಡಂತೆ ಮೂರು ಹಾಗೂ ಗ್ರಾಮಾಂತರ ಜಿಲ್ಲೆಯು ಎಂಟು ತಾಲ್ಲೂಕುಗಳನ್ನು ಒಳಗೊಂಡಿದೆ. ಎರಡೂ ಜಿಲ್ಲೆಗಳ ಆಡಳಿತ ಕೇಂದ್ರ ಬೆಂಗಳೂರು ನಗರವೇ ಆಗಿದೆ.

ಪ್ರಾಗೈತಿಹಾಸಿಕ ಲಕ್ಷಣಗಳನ್ನು , ಭೂ ವೈಶಿಷ್ಟ್ಯಗಳನ್ನು ಒಳಗೊಂಡಿರುವ 'ಬೆಂಗಳೂರು' ಪ್ರದೇಶವು ಕ್ರಿ.ಶ. ೧೮೩೧ರಿಂದಲೂ ಮೈಸೂರು ಸಂಸ್ಥಾನದ ರಾಜಧಾನಿಯಾಗಿದ್ದಿತು. ಈ ಪ್ರದೇಶವು ಗಂಗರು, ರಾಷ್ಟ್ರಕೂಟರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಮರಾಠರು, ಮೈಸೂರು ಅರಸರು, ಬಿಜಾಪುರದ ಸುಲ್ತಾನರ ಹಾಗೂ ಇಂಗ್ಲಿಷರ ಆಳ್ವಿಕೆಗೆ ಒಳಗಾಗಿದೆ. ಕ್ರಿ.ಶ. ೧೫೩೭ರಲ್ಲಿ ಯಲಹಂಕ ನಾಡಿನ ಪ್ರಭು ಕೆಂಪೇಗೌಡ, ಹೊಸನಗರವನ್ನು ನಿರ್ಮಾಣ ಮಾಡಿ, ತನ್ನ ರಾಜಧಾನಿಯನ್ನು ಬೆಂಗಳೂರಿಗೆ ವರ್ಗಾಯಿಸಿದ. ಬೆಂಗಳೂರಿನ ವ್ಯಾಪ್ತಿ ನಿಗದಿಪಡಿಸಲು ಗೋಪುರಗಳನ್ನು ನಿರ್ಮಿಸಿದ. ಬೆಂಗಳೂರಿನ ವ್ಯಾಪ್ತಿಯ ಈ ಗೋಪುರಗಳನ್ನು ಮೀರಿ ಬೆಳೆದಿದ್ದು , ಗ್ರಾಮಾಂತರ ಜಿಲ್ಲೆಯ ಭೂಭಾಗವನ್ನು ತನ್ನ ವ್ಯಾಪ್ತಿಗೆ ಸೇರಿಸಿಕೊಂಡಿದೆ.

ಬೆಂಗಳೂರು ಗ್ರಾಮಾಂತರ ಪ್ರದೇಶವು ಭೌಗೋಳಿಕವಾಗಿ, ನೈಸರ್ಗಿಕವಾಗಿ, ಸಾಂಸ್ಕೃತಿಕವಾಗಿ, ಭಾಷಿಕವಾಗಿ ವೈವಿಧ್ಯತೆಯನ್ನು ಹೊಂದಿದೆ. ಮೂಲತಃ ಕೃಷಿಯನ್ನು ಮುಖ್ಯ ಕಸುಬಾಗಿ ಹೊಂದಿದ್ದ ಈ ಪ್ರದೇಶವು ಈಗ, ಕೈಗಾರಿಕೆ ಹಾಗೂ ತಂತ್ರಜ್ಞಾನಕ್ಕೆ ಸಂಬಂಧಿಸಿದ ಉದ್ದಿಮೆಗಳನ್ನು ಒಳಗೊಂಡಿದೆ.

'ಬೆಂಗಳೂರು' ಎನ್ನುವ ಹೆಸರಿನ ನಿಷ್ಪತ್ತಿಯು ಜಿಜ್ಞಾಸೆಯನ್ನು ಹೊಂದಿದೆ. ಹೊಯ್ಸಳ ರಾಜ ವೀರಬಲ್ಲಾಳನಿಗೆ ಮುದುಕಿಯೊಬ್ಬಳು ಬೆಂದಕಾಳನ್ನು ನೀಡಿದ ಪ್ರದೇಶವೆಂಬ ಐತಿಹ್ಯವಿದೆ.

೧. ಬೆಂದಕಾಳು ನೀಡಿದ ಊರು - ಬೆಂದ ಕಾಳು ಊರು - ಬೆಂದಕಾಳೂರು - ಬೆಂಗಳೂರು ಆಗಿದೆ ಎಂಬುದು ಮೊದಲ ಜಾನಪದೀಯ ಐತಿಹ್ಯವಾಗಿದೆ.

೨. ಬೆಣಚು+ಕಲ್ಲಿನ+ಊರು = ಬೆಣಚು ಕಲ್ ಊರು - ಬೆಂಗಳೂರು. ಬೆಣಚುಕಲ್ಲು = (ದ್ರಾವಿಡ ರೂಪ) 'ವೆಣ್ಕಲ್' - ಬೆಣ್ಕಲ್ (ಹಳೆಗನ್ನಡರೂಪ) - ಬೆಣ್ಗಲ್ ಆಗಿದೆ. ಬೆಣ್ಗಲ್+ಊರು = ಬೆಣ್ಗಳೂರು - ಬೆಂಗಳೂರು ಆಗಿರಬಹುದು.[೧೫]

೩. ಬೆಂಗ ಮರಗಳಿಂದ ಕೂಡಿದ ಪ್ರದೇಶವಾದ್ದರಿಂದ ಬೆಂಗಳೂರು ಆಗಿದೆ. (ಬೆಂಗ - ರಕ್ತ ಹೊನ್ನೆ ಮರಗಳು) ವೃಕ್ಷವಾಚಿಯಾಗಿದೆ.

೪. ಕ್ರಿ.ಶ. ೧೬ನೇ ಶತಮಾನದಲ್ಲಿ ಕೆಂಪೇಗೌಡನು ಹೊಸ ನಗರವನ್ನು ಕಟ್ಟಲು ಅಲ್ಲಿದ್ದ ಮರಗಳನ್ನು ಸುಟ್ಟನು ಆದ್ದರಿಂದ ಮರಗಳನ್ನು ಸುಟ್ಟುಹಾಕಿದ ನಾಡು - ಬೆಂದಕಾಡೂರು - ಬೆಂಗಳೂರು ಆಗಿರಬಹುದು.[೧೬]

## ೩.೭೧ ಚನ್ನಪಟ್ಟಣ

ಇದು ತಾಲ್ಲೂಕು ಕೇಂದ್ರವಾಗಿದೆ. ಸುಂದರವಾಗಿ ಕಾಣುತ್ತಿದ್ದ ಪ್ರದೇಶವಾಗಿದ್ದುದರಿಂದ 'ಚಂದ ಪಟ್ಟಣ' ಎಂದು ಕರೆಯಲಾಗುತ್ತಿತ್ತು.

ಈ ಪ್ರದೇಶದಲ್ಲಿ ವ್ಯವಸಾಯವು ಮುಖ್ಯ ವೃತ್ತಿಯಾಗಿದ್ದು ಮರದ ಗೊಂಬೆಗಳಿಗೆ ಪ್ರಸಿದ್ಧಿಯನ್ನು ಪಡೆದಿದೆ. ಉತ್ತರ ಹಾಗೂ ವಾಯುವ್ಯ ಭಾಗವು ಬೆಟ್ಟಗುಡ್ಡಗಳಿಂದ ಆವೃತ್ತವಾಗಿದ್ದು ಕುರುಚಲು ಕಾಡುಗಳನ್ನು ಹೊಂದಿದೆ. ನೈರುತ್ಯ ಭಾಗಗಳು ಮೈದಾನ ಪ್ರದೇಶವನ್ನು ಹೊಂದಿದೆ.

ಬೆಂಗಳೂರಿನಿಂದ ಪಶ್ಚಿಮಕ್ಕೆ ೬೬ ಕಿ.ಮೀ. ದೂರದಲ್ಲಿರುವ ಚನ್ನಪಟ್ಟಣದಲ್ಲಿ ಕ್ರಿ.ಶ. ೧೫೮೦ರಲ್ಲಿ ನಿರ್ಮಿಸಲ್ಪಟ್ಟ ಕೋಟೆಯ ಅವಶೇಷಗಳಿವೆ.[೧೬]

ಚಂದಾಪುರ - ಚಂದಪಟ್ಟಣ - ಚನ್ನಪಟ್ಟಣ ಎಂದು ಹೆಸರುಗಳು ಸ್ಥಿತ್ಯಂತರಗೊಂಡಿದೆ.

ಚನ್ನಪಟ್ಟಣ - ಪೂರ್ವ ಘಟಕ ಚಂದ - ಚನ್ನ ಆಗಿ ಬದಲಾಗಿದೆ.

ಪುರ - ವಾರ್ಗಿಕವು 'ಪಟ್ಟಣ' ಆಗಿ ಸ್ಥಿತ್ಯಂತರಗೊಂಡಿದೆ.

## ೩.೭೨ ದೇವನಹಳ್ಳಿ

ಬೆಂಗಳೂರಿನ ಉತ್ತರ ಭಾಗದಲ್ಲಿರುವ ದೇವನಹಳ್ಳಿಯು ಪೂರ್ವದಲ್ಲಿ 'ದೇವನದೊಡ್ಡಿ', 'ದೇವನಪುರ' - ಎಂಬ ಹೆಸರುಗಳನ್ನು ಹೊಂದಿದ್ದಿತು. ಟಿಪ್ಪುಸುಲ್ತಾನ್ ದೇವನಹಳ್ಳಿಗೆ 'ಯೂಸುಫಾಬಾದ್' ಎಂದು ನಾಮಕರಣ ಮಾಡಿದರೂ ಜನಪ್ರಿಯವಾಗದೆ, ಹಳೆಯ ಹೆಸರೇ ಮುಂದುವರೆದಿದೆ.

ದ್ಯಾವೇಗೌಡನಿಂದ ನಿರ್ಮಾಣವಾದ ಊರಾದ್ದರಿಂದ ದ್ಯಾವನದೊಡ್ಡಿ - ದೇವನದೊಡ್ಡಿ - ದೇವನದೊಡ್ಡಿ - ದೇವನಹಳ್ಳಿ ಎಂಬ ಹೆಸರು ಬಂದಿದೆ ಎಂಬ ಐತಿಹ್ಯವಿದೆ. ಕ್ರಿ.ಶ. ೧೫೧೦ರಲ್ಲಿ ಕಂಚಿಯಿಂದ ಬಂದು ನೆಲೆಸಿದ ಮಲ್ಲ ಬೈರೇಗೌಡನು ದೇವನಹಳ್ಳಿಯಲ್ಲಿ ಮಣ್ಣಿನ ಕೋಟೆಯನ್ನು ನಿರ್ಮಿಸಿದ. ಇದೇ ಕೋಟೆಯನ್ನು ಹೈದರ್ ಆಲಿಯು ನವೀಕರಣಗೊಳಿಸಿದನು. ದೇವನಹಳ್ಳಿ ತಾಲ್ಲೂಕು, ೨೩೮ ವಸತಿ ಗ್ರಾಮಗಳನ್ನು ೩೧ ನಿರ್ವಸಿತ ಗ್ರಾಮವನ್ನೂ ಒಳಗೊಂಡಿದೆ. ನಿರ್ವಸಿತ ಸ್ಥಳಗಳು ಈಗ ವಸತಿ ಪ್ರದೇಶಗಳಾಗಿ ಪರಿವರ್ತಿತವಾಗುತ್ತಿವೆ. ಈ ತಾಲ್ಲೂಕಿನ ಭೂ ಪ್ರದೇಶವು ಸಮತಟ್ಟಾದ ಮೇಲ್ಮೈ ಲಕ್ಷಣ ಹೊಂದಿದ್ದು, ಸಣ್ಣ ಬೆಟ್ಟಗುಡ್ಡಗಳನ್ನು ಒಳಗೊಂಡಿದೆ.[೧೭]

## ೩.೭೩. ದೊಡ್ಡಬಳ್ಳಾಪುರ

ಬೆಂಗಳೂರಿನಿಂದ ೩೫ ಕಿ.ಮೀ. ದೂರದಲ್ಲಿರುವ ಈ ಊರು ಕೈಗಾರಿಕೆಗಳನ್ನು ಒಳಗೊಂಡಿರುವ ಪ್ರದೇಶವಾಗಿದೆ. ಬಟ್ಟೆ ನೇಯ್ಗೆಯು ನಗರದ ಜನರ ಮುಖ್ಯ ವೃತ್ತಿಯಾಗಿದೆ. ಆವತಿಯ ಪಾಳೆಯಗಾರ ಮಲ್ಲ ಬೈರೇಗೌಡನಿಂದ ನಿರ್ಮಾಣಗೊಂಡ ಊರು ಇದಾಗಿದ್ದು ಸಮತಟ್ಟಾದ ಭೂ ಪ್ರದೇಶ ಹಾಗೂ ಬೆಟ್ಟಗುಡ್ಡಗಳನ್ನು ಹೊಂದಿರುವ ಪ್ರದೇಶವಾಗಿದೆ.[೧೮]

ಬೆಂಗಳೂರಿನ ವಾಯುವ್ಯ ಭಾಗದಲ್ಲಿರುವ ದೊಡ್ಡಬಳ್ಳಾಪುರ ತಾಲ್ಲೂಕು. 'ಭುಜಪ್ರಪೂರ' ಎಂದು ಸಂಸ್ಕೃತೀಕರಣಗೊಂಡರೂ ಜನಪ್ರಿಯವಾಗಿಲ್ಲ. ಹಸುವೊಂದು ಹುತ್ತದ ಬಳಿ ಬಂದು ಒಂದು 'ಬಳ್ಳ' ಹಾಲು ಕರೆಯುತ್ತಿದ್ದುದರಿಂದ 'ಬಳ್ಳಾಪುರ' ಎಂಬ ಹೆಸರು ಬಂದಿದೆಯೆಂಬ ಐತಿಹ್ಯವಿದೆ.

ಬಳ್ಳಾ - ವಿಶಿಷ್ಟ ಪುರ - ವಾರ್ಗಿಕ

ದೊಡ್ಡ - ವಿಶೇಷಣ ಸೂಚಕ ಆಕೃತಿಮಾವಾಗಿದೆ.

ಆವತಿಯ ಪಾಳೆಯಗಾರ ಮಲ್ಲಬೈರೇಗೌಡನಿಂದ ನಿರ್ಮಾಣಗೊಂಡ ಊರು ಇದಾಗಿದೆ. ಸಮತಟ್ಟಾದ ಭೂಪ್ರದೇಶ ಹಾಗೂ ಬೆಟ್ಟಗುಡ್ಡಗಳನ್ನು ಒಳಗೊಂಡಿರುವ ಪ್ರದೇಶವಾಗಿದೆ. [೧೯]

### ೩.೭೪ ಕನಕಪುರ

ಬೆಂಗಳೂರಿನಿಂದ ದಕ್ಷಿಣ ಭಾಗದಲ್ಲಿ ೫೬ ಕಿ.ಮೀ. ದೂರದಲ್ಲಿರುವ ಈ ಊರನ್ನು ೧೯೪೯ರ ವರೆಗೆ, 'ಕಾನಕಾನಹಳ್ಳಿ', 'ಕಾಣಿಕಾರನಹಳ್ಳಿ' ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು. ಚನ್ನಪಟ್ಟಣದ ಪಾಳೆಯಗಾರ ಜಗದೇವರಾಯನು ಹಳೆ ಕೋಟೆಯನ್ನು ಪುನರ್ನಿರ್ಮಾಣ ಮಾಡಿದ. ಕ್ರಿ.ಶ. ೧೬೩೦ರಲ್ಲಿ ಮೈಸೂರಿನ ಅರಸರಾದ ಚಾಮರಾಜ ಒಡೆಯರ್ ಇದನ್ನು ವಶಪಡಿಸಿಕೊಂಡರು. ಅರ್ಕಾವತಿ ಹಾಗೂ ಕಾವೇರಿ ನದಿಯು ಹರಿಯುವ ಭೂಭಾಗವನ್ನು ಹೊಂದಿರುವ ಈ ತಾಲ್ಲೂಕಿನ ಮುಖ್ಯ ಮೇಲ್ಮೈ ಪ್ರದೇಶವನ್ನು ಹೊಂದಿದೆ.

೧. 'ಕಾನಕಾನ' - ಎಂಬ ವ್ಯಕ್ತಿಯು ಕೋಟೆಯೊಂದನ್ನು ಕಟ್ಟಿಸಿದ್ದರಿಂದ ಅವನ ಹೆಸರಿನಲ್ಲಿಯೇ 'ಕಾನಕಾನಹಳ್ಳಿ' ಎಂಬ ಹೆಸರು ಬಂದಿರುವುದೆಂಬ ಐತಿಹ್ಯ ಹೊಂದಿದೆ.

೨. ಕನ್ನಡ ಭಾಷೆಯಲ್ಲಿ 'ಜಮೀಂದಾರ್' ಪದಕ್ಕೆ ತಮಿಳಿನಲ್ಲಿ 'ಕಾಣಿಕಾರ್' ಎಂಬ ಪದ ಬಳಕೆಯಿದ್ದು ಕಾನಿಕಾರ್ - ಕಾನಕಾನ ಆಗಿರಬಹುದೆಂದು ಭಾಷಾಶಾಸ್ತ್ರಜ್ಞ ಬುಕೆನೆನ್ ಅಭಿಪ್ರಾಯಪಟ್ಟಿದ್ದಾರೆ.[೨೦]

೩. ಕಾಡು ಹೊಂದಿರುವ ಪ್ರದೇಶವಾಗಿದ್ದರಿಂದ, ಕಾನನ > ಕಾನು ಆಗಿರುವ ಸಾಧ್ಯತೆಯೂ ಇರಬಹುದು. 'ಕಾನು' ಆಕೃತಿಮಾ ದ್ವಿರುಕ್ತಿಯಾಗಿ ಬಳಕೆಯಾಗಿರುವ ಸಾಧ್ಯತೆ ಇದೆ.

ಕಾನಕಾನಹಳ್ಳಿ : ಕಾನಕಾನ - ವಿಶಿಷ್ಟ, (ದ್ವಿರುಕ್ತಿ) ಹಳ್ಳಿ - ವಾರ್ಗಿಕ.

ಕಾನಕಾನಹಳ್ಳಿ > ಕಾನಕಾಹಳ್ಳಿ > ಕನಕಹಳ್ಳಿ > ಕನಕಪುರ ಆಗಿರುವ ಸಾಧ್ಯತೆ ಇದೆ.

### ೩.೭೫ ಹೊಸಕೋಟೆ

ಬೆಂಗಳೂರಿನಿಂದ ೨೮ ಕಿ.ಮೀ. ಪೂರ್ವಭಾಗದಲ್ಲಿರುವ 'ಹೊಸಕೋಟೆ'ಯು ಸಮತಟ್ಟಾದ ಭೂ ಪ್ರದೇಶವನ್ನು ಹೊಂದಿರುವ ತಾಲ್ಲೂಕು ಕೇಂದ್ರವಾಗಿದೆ. ಸುಗಟೂರಿನ ಪಾಳೆಯಗಾರನಾದ ತಮ್ಮೇಗೌಡನು ಕ್ರಿ.ಶ. ೧೫೫೫ರಲ್ಲಿ ಹೊಸದಾಗಿ ಕೋಟೆಯನ್ನು ಕಟ್ಟಿಸಿದ್ದರಿಂದ 'ಹೊಸಕೋಟೆ' ಎಂಬ ಹೆಸರು ಬಂದಿದೆ. ತಮ್ಮೇಗೌಡನು ದ್ರಾವಿಡ ಶೈಲಿಯಲ್ಲಿ ಅವಿಮುಕ್ತೇಶ್ವರ ದೇವಾಲಯವನ್ನು ಹಾಗೂ ಕೆರೆಯೊಂದನ್ನು ನಿರ್ಮಾಣ ಮಾಡಿದ್ದರಿಂದ, 'ಚಿಕ್ಕರಾಯ' ಎಂಬ ಬಿರುದನ್ನು ಪೆನುಗೊಂಡೆಯ ಅರಸನಿಂದ ಪಡೆದನು.

## ೩.೭೬ ಮಾಗಡಿ

ಬೆಂಗಳೂರಿನ ಪಶ್ಚಿಮಕ್ಕೆ ೪೮ ಕಿ.ಮೀ. ದೂರದಲ್ಲಿರುವ ಮಾಗಡಿಯು ಪ್ರಾಗೈತಿಹಾಸ ಕಾಲದ ಮಾನವನ ನೆಲೆಯಾಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೧೧೩೯ ರಲ್ಲಿ ಚೋಳರಾಜನಿಂದ ಸ್ಥಾಪಿತವಾದ 'ಮಾಗಡಿ'ಯು, ನಂತರದಲ್ಲಿ ಹೊಯ್ಸಳರಿಗೂ, ಆನಂತರ ವಿಜಯನಗರದ ಅರಸರಿಗೂ ಸೇರಿತು. ಅಚ್ಯುತರಾಯನ ಕಾಲದಲ್ಲಿ ಮಾಂಡಲಿಕನಾದ ಸಾವಂತರಾಯನು ಸಾವನದುರ್ಗದಲ್ಲಿ ಕೋಟೆಯನ್ನು ನಿರ್ಮಿಸಿದನು. ಮಾಗಡಿ ಪ್ರದೇಶವು ಬೆಟ್ಟಗುಡ್ಡಗಳನ್ನು ಒಳಗೊಂಡಿರುವ ಪ್ರದೇಶವಾಗಿದೆ. 'ಮಾಂಡವ್ಯ' ಎಂಬ ಋಷಿಯು ವಾಸವಾಗಿದ್ದ ಪ್ರದೇಶವಾದ್ದರಿಂದ 'ಮಾಗಡಿ' ಎಂಬ ಹೆಸರು ಬಂದಿದೆ ಎಂಬ ಐತಿಹ್ಯವಿದೆ. 'ಮಾಗಡಿ'ಯು ಯಲಹಂಕ ನಾಡಿನ 'ಮಹಾಗಡಿ' ಆಗಿದ್ದರಿಂದ ಮಹಾಗಡಿ > ಮಾಗಡಿ ಆಗಿದೆಯೆಂಬ ಇತಿಹಾಸವಿದೆ. ಬೆಂಗಳೂರಿನ ಪಾಳೆಯಗಾರ ಇಮ್ಮಡಿ ಕೆಂಪೇಗೌಡನು ತನ್ನ ರಾಜಧಾನಿಯನ್ನು ಸಾವನದುರ್ಗಕ್ಕೆ ಬದಲಾಯಿಸಿದನು. ನಂತರ 'ಮಹಾಗಡಿ'ಯ ಪ್ರದೇಶದಲ್ಲಿ ಊರನ್ನು ನಿರ್ಮಿಸಿದ್ದರಿಂದ 'ಮಾಗಡಿ' ಎಂಬ ಹೆಸರು ಬಂದಿರುವ ಸಾಧ್ಯತೆಯಿದೆ.[೨೦]

## ೩.೭೭ ನೆಲಮಂಗಲ

ಬೆಂಗಳೂರಿನ ವಾಯುವ್ಯ ಭಾಗದಲ್ಲಿ ೨೭ ಕಿ.ಮೀ. ದೂರದಲ್ಲಿರುವ 'ನೆಲಮಂಗಲ' ತಾಲ್ಲೂಕು ಕೇಂದ್ರವಾಗಿದ್ದು, ಕರ್ನಾಟಕದ ರಾಜನಾದ ಹೇಮಚಂದ್ರನ ಮಗ ಸುಮತಿಯು ನಿರ್ಮಿಸಿದನೆಂಬ ಐತಿಹ್ಯವಿದೆ. ನೆಲಮಂಗಲಕ್ಕೆ 'ಭೂಮಂಡನ' ಎಂಬ ಸಂಸ್ಕೃತ ನಾಮವಿದ್ದರೂ, ಅದು ಬಳಕೆಗೆ ಬರಲಿಲ್ಲ. ಈ ಪ್ರದೇಶವು ಮರಾಠ ಹಾಗೂ ಮೊಗಲ್ ದೊರೆಗಳ ಆಳ್ವಿಕೆಗೆ ಒಳಪಟ್ಟ ಪ್ರದೇಶವಾಗಿದ್ದಿತು. ತಾಲ್ಲೂಕಿನ 'ನಿಜಗಲ್' ಊರಿನ ಬೆಟ್ಟದ ಮೇಲೆ ಕೋಟೆ ಇದೆ. 'ಮಣ್ಣೆ' ಎಂಬ ಊರು ಗಂಗರ ರಾಜಧಾನಿಯಾಗಿದ್ದಿತು. 'ಶಿವಗಂಗೆ' ಎಂಬ ಪುರಾಣ ಕ್ಷೇತ್ರವನ್ನು ಒಳಗೊಂಡಿರುವ ಈ ತಾಲ್ಲೂಕು ಐತಿಹಾಸಿಕ ಹಾಗೂ ಪೌರಾಣಿಕ ಐತಿಹ್ಯಗಳಿಗೆ ಕಾರಣವಾಗಿದೆ. 'ಮಂಗಲ' ವಾರ್ಗಿಕವು ಚೋಳರ ಆಡಳಿತಕ್ಕೆ ಒಳಗಾಗಿರುವ ಸಾಧ್ಯತೆಯನ್ನು ಸೂಚಿಸುತ್ತದೆ.

## ೩.೭೮ ರಾಮನಗರ

ಬೆಂಗಳೂರಿನ ನೈರುತ್ಯ ಭಾಗದಲ್ಲಿ ೪೮ ಕಿ.ಮೀ. ದೂರದಲ್ಲಿರುವ ಈ ತಾಲ್ಲೂಕು ಕೇಂದ್ರಕ್ಕೆ ಹಿಂದೆ 'ಕ್ಲೋಸ್ ಪೇಟೆ' ಎಂಬ ಹೆಸರನ್ನು ಅಧಿಕೃತವಾಗಿ ನಾಮಕರಣ ಮಾಡಲಾಗಿತ್ತು. ಮೈಸೂರಿನ ರೆಸಿಡೆಂಟ್ ಆಗಿದ್ದ, ಸರ್. ಬ್ಯಾರಿ ಕ್ಲೋಸ್ ನೆನಪಿಗಾಗಿ ನಾಮಕರಣ ಮಾಡಿದ್ದ ಈ ಹೆಸರಿನ ಬಗ್ಗೆ ಜನರಿಗೆ ಇಷ್ಟವಾಗದ ಕಾರಣ ಬಳಕೆಗೆ ಬರಲಿಲ್ಲ. ಸ್ವಾತಂತ್ರ್ಯೋತ್ತರದಲ್ಲಿ 'ರಾಮನಗರ' ಎಂದು ಮರು ನಾಮಕರಣ ಮಾಡಲಾಗಿದೆ. 'ರಾಮಗಿರಿ' ಎಂಬ ಬೆಟ್ಟ ಪಕ್ಕದಲ್ಲಿಯೇ ಇರುವುದರಿಂದ 'ರಾಮ' ಎಂಬ ದೈವವಾಚಿ ವಿಶಿಷ್ಟವನ್ನು ಸೇರಿಸಿಕೊಂಡು 'ನಗರ' ಎಂಬ ವಾರ್ಗಿಕವನ್ನು ಬಳಸಿಕೊಳ್ಳಲಾಗಿರುವುದು ಕಂಡುಬರುತ್ತದೆ. ಎಂಬ ಐತಿಹ್ಯವಿದೆ. 'ನಗರ' - ಎಂಬ ವಾರ್ಗಿಕವು ಇಲ್ಲಿ ಮಾತ್ರ

ಬಳಕೆಯಾಗಿದೆ. ಯಾವುದೇ ಸ್ಥಳನಾಮಗಳಲ್ಲಿಯೂ ಈ ಪಾರ್ಗಿಕದ ಬಳಕೆಯೇ ಆಗಿಲ್ಲ. ರಾಮನಗರ ಪ್ರದೇಶವು ಬೆಟ್ಟಗುಡ್ಡಗಳಿಂದ ಆವೃತ್ತವಾಗಿದ್ದು ಅರ್ಕಾವತಿ ನದಿ ಹರಿಯುವ ಪ್ರದೇಶವನ್ನೊಳಗೊಂಡಿದ್ದು ವ್ಯವಸಾಯ ಹಾಗೂ ರೇಷ್ಮೆ ಉದ್ಯಮ ಪ್ರಮುಖ ವೃತ್ತಿಯಾಗಿದೆ. ಕ್ರಿ.ಶ. ೧೮೦೦ರವರೆಗೆ ಈ ಊರು 'ರಾಮಗಿರಿ' ಬೆಟ್ಟದ ಬುಡದಲ್ಲಿತ್ತು. ನಂತರ ಈ ಊರು ಸ್ಥಳಾಂತರಗೊಂಡಿದೆ.

---

**ಅಡಿ ಟಿಪ್ಪಣಿಗಳು**

೧ ಗೋಪಾಲಕೃಷ್ಣ ವಿ., ಸ್ಥಳನಾಮ ಅಧ್ಯಯನಗಳು, ಗೋಪಾಲಕೃಷ್ಣ ವಿ., ೧೯೮೭, ಪುಟ ೧.

೨ President Note, D. Javaregowda, Studies in Indian Placenames Vol. III, Pg. 111

೩ Gangadhara Rao Y. B., Studies in Indian Placenames, Vol. IV Page 144

೪ Archaeology and Placenames of Lancashire, their Origins and History Pg. 4, 9 & 10

೫ Studies in Indian Placenames, Bhadri K.M. Vol. III Page 73

೬ ಎಡೆಗಳು ಹೇಳುವ ಕಂನಾಡ ಕತೆ, ಮುನ್ನುಡಿ, ಡಾ|| ಶಂ.ಜೋಶಿ, (ಶಂಬಾ ಕೃತಿ ಸಂಪುಟ-೨) ಪುಟ ೧೨೨

೭ ತುಳುನಾಡಿನ ಸ್ಥಳನಾಮಗಳು, ಪುಟ ೩೮

೮ ಕಿಟ್ಟೆಲ್ ನಿಘಂಟು, ಪುಟ [illegible]

೯ ಅದೇ, ಪುಟ ೩೩೯

೧೦ ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು, ಪುಟ ೧೯೭

೧೧ ಕಿಟ್ಟೆಲ್ ನಿಘಂಟು, ಪುಟ ೫೨೯

೧೨ ಕ-ಕ-ಇಂ. ನಿಘಂಟು, ಪುಟ ೪೪

೧೩ ಕಿಟ್ಟೆಲ್ ನಿಘಂಟು, ಪುಟ ೮೧೦

೧೪ ಕ-ಕ-ಇಂ. ನಿಘಂಟು, ಪುಟ ೯೦೭

೧೫ ಸಂಶೋಧನ, ಕೊ.ವ್ಯಾ. ರಮೇಶ್, ಪುಟ ೧೪೭ (ಪುಟ ೫೮. ಕೆ.ವಿ.)

೧೬ ಸ್ಥಳನಾಮಗಳು, ಕೆ. ವಿಶ್ವನಾಥ, ಪುಟ ೫೮

೧೭ ಚನ್ನಪಟ್ಟಣ ತಾಲ್ಲೂಕು ಸ್ಥಳನಾಮಗಳು, ಬೊಮ್ಮೇಗೌಡ, ಪುಟ ೧೪ (ಅಪ್ರಕಟಿತ ಎಂ.ಫಿಲ್. ನಿಬಂಧ) ಬೆಂಗಳೂರು ವಿಶ್ವವಿದ್ಯಾಲಯ

೧೮ ಅರ್ಕಾವತಿ, ಕ.ಸಾ.ಪ. ಪ್ರಕಟಣೆ, ಪುಟ ೪೫

೧೯ ಕರ್ನಾಟಕ ಯಾತ್ರೆ, ಜೀರಗೆ ಕಟ್ಟೆ ಬಸವಪ್ಪ, ಕ.ಸಾ.ಪ. ಪುಟ ೧೩

೨೦ ಕರ್ನಾಟಕ ಯಾತ್ರೆ, ಜೀರಗೆ ಕಟ್ಟೆ ಬಸವಪ್ಪ ಕ.ಸಾ.ಪ., ಪುಟ ೯

೨೧ ಡಾ|| ರಾಜೇಗೌಡ ಹ.ಕ., ಬೆಂಗಳೂರು ಕೆಂಪೇಗೌಡ ಮತ್ತು ಅವನ ವಂಶಸ್ಥರು, ಪುಟ ೧೨೭

೪

# ಭಾಷಿಕ ಸ್ವರೂಪ

## ಪ್ರವೇಶ

'ಭಾಷೆಯು ಮಾನವನ ಬುದ್ಧಿವಂತಿಕೆಗೆ ಸಾಕ್ಷಿಯಾಗಿದ್ದು, ಭಾಷೆ ಬಹೂಪಯೋಗಿಯಾಗಿದೆ. ವಸ್ತುಗಳನ್ನು ಗುರುತಿಸಿಕೊಳ್ಳಲು ಹೆಸರು ನೀಡುವ ಪ್ರಕ್ರಿಯೆಯಲ್ಲಿ 'ಭಾಷೆ ಮುಖ್ಯ ಸಾಧನವಾಗಿದೆ. ಭಾಷಿಕ ರಚನೆಯಾದ ನಾಮಪದವನ್ನು ಅಧ್ಯಯನಕ್ಕೆ ಒಳಪಡಿಸಬೇಕಾಗಿದ್ದು, ಈ ಹೆಸರುಗಳನ್ನು ಅಧ್ಯಯನ ಮಾಡುವ ಶಾಸ್ತ್ರವೇ 'ನಾಮಾಧ್ಯಯನ ಶಾಸ್ತ್ರ (ಒನಾಮಾಸ್ಟಿಕ್ಸ್) ವಾಗಿದೆ.

ಸ್ಥಳನಾಮಗಳ ಅಧ್ಯಯನವನ್ನು 'ಸ್ಥಳನಾಮಾಧ್ಯಯನ ಶಾಸ್ತ್ರ' (ಟೊಪೊನಮಿ) ಕರೆಯಲಾಗಿದ್ದು ಇದು ಭಾಷೆ ಹಾಗೂ ಇತರೆ ವೈವಿಧ್ಯ ವಿಷಯಗಳನ್ನು ಅರಿಯಲು ಸಹಾಯಕವಾಗಿದೆ. ಅನೇಕ ವಿಷಯಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿರುವ ಮಾಂತ್ರಿಕ ಶಕ್ತಿ ಸ್ಥಳನಾಮಗಳಲ್ಲಿ ಬಳಕೆಯಾಗಿರುವ 'ವಿಶಿಷ್ಟ (Specific)ಗಳಿಗಿದೆ. ವಿಶಿಷ್ಟ- ವಾರ್ಗಿಕಗಳು, ಭಾಷಿಕ ಘಟಕಗಳಾಗಿವೆ. ಸ್ಥಳನಾಮ ಅಧ್ಯಯನವು ಭಾಷೆಯ ಸ್ಥಿತ್ಯಂತರಗಳನ್ನು ಗುರುತಿಸಲು ಸಹಾಯಕವಾಗಿದೆ. ಭಾಷೆಯ ಪೂರ್ವದ ಸ್ಥಿತಿ, ಇತರೆ ಭಾಷೆಗಳ ಪ್ರಭಾವ, ಪುನರ್ನಾಮಕರಣ, ಸಂಸ್ಕೃತೀಕರಣಗಳಲ್ಲಿ ಸ್ಥಳನಾಮಗಳಲ್ಲಿ ಆಗಿರುವ ಬದಲಾವಣೆಗಳು - ಇತಿಹಾಸ ತಿಳಿಯಲು ಸಹಾಯಕವಾಗಿವೆ. ಸ್ಥಳನಾಮಗಳಲ್ಲಿ ಸಂಧಿ - ಸಮಾಸ ಕ್ರಿಯಾಪದ - ಬಳಕೆಯಾಗಿದ್ದು, ವರ್ಣನಾತ್ಮಕ ಭಾಷಾ ವಿಜ್ಞಾನದ ದೃಷ್ಟಿಯಿಂದ ಮಹತ್ವವಾದ ಅಧ್ಯಯನವಾಗಿದೆ. "ವಿವರಣಾತ್ಮಕ ಭಾಷಾವಿಜ್ಞಾನವೇ ನಿಜವಾಗಿ ಇಂದಿಗೂ ಭಾಷಾವಿಜ್ಞಾನದ ಬೆನ್ನೆಲುಬು. ತಾತ್ವಿಕ ದೃಷ್ಟಿಯಿಂದ ಇದನ್ನು ಸಾಮಾನ್ಯ ಭಾಷಾವಿಜ್ಞಾನದ ಗುಂಪಿಗೆ ಸೇರಿಸಿದ್ದರೂ, ಎಲ್ಲಾ ಭಾಷಾವಿಜ್ಞಾನ ವಿವೇಚನೆಗಳಿಗೂ ಇದೇ ಜೀವಾಳ ಇದನ್ನುಳಿದು ಭಾಷಾವಿಶ್ಲೇಷಣೆ ಮಾಡುವುದು ದುಸ್ಸಾಹಸದ ಮಾತು. ಏಕೆಂದರೆ ಭಾಷಾ ವಿಶ್ಲೇಷಣೆಯಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ತಂದಿರುವ ರೂಪಾಂತರ ವ್ಯಾಕರಣವನ್ನಾಗಲಿ, ಸಾಮಾಜಿಕ ಭಾಷಾವಿಜ್ಞಾನ ಮಾದರಿಗಳನ್ನಾಗಲೀ ಅವು ಎಷ್ಟೇ ನವ್ಯ ತಂತ್ರಗಳನ್ನು ಮೈಗೂಡಿಸಿಕೊಂಡಿದ್ದರೂ ಅವುಗಳ ವಿಶ್ಲೇಷಣೆಗೆ ಮೂಲದ್ರವ್ಯ ಸಾಧಿತವಾಗುವುದು ವರ್ಣನಾತ್ಮಕ ಭಾಷಾ ವಿಜ್ಞಾನದಿಂದಲೇ" ಎಂಬ ಡಾ। ಸೋಮಶೇಖರಗೌಡರ ಮಾತು ಅಧ್ಯಯನ ದೃಷ್ಟಿಯಿಂದ ಮಹತ್ವದ್ದಾಗಿದೆ"

ಭಾಷಾವಿಜ್ಞಾನ ಹಾಗೂ ಸ್ಥಳನಾಮಾಧ್ಯಯನ ಶಾಸ್ತ್ರಗಳು ಪರಸ್ಪರ ಸಂಬಂಧವನ್ನು ಹೊಂದಿರುವ ವಿಷಯಗಳಾಗಿವೆ. ಸ್ಥಳನಾಮಗಳ ಅಧ್ಯಯನವು ಭಾಷೆಯ ಶಾಸ್ತ್ರೀಯ ಅಧ್ಯಯನವಾಗುವುದರ ಜೊತೆಗೆ ಭಾಷೆಯ ಅವಸ್ಥಾಂತರ ಅರಿಯಬಹುದು. ಬಳಕೆಯಲ್ಲಿರುವ ಪದಗಳಿಗೆ ಕೆಲವೊಮ್ಮೆ ಅರ್ಥ ಹೊಳೆಯದಿರುವ ಸಾಧ್ಯತೆಯಿದ್ದು ಸ್ಥಳನಾಮ ಅಧ್ಯಯನದಲ್ಲಿ ಇದಕ್ಕೆ ಪೂರಕ ಸಾಮಗ್ರಿ ಒದಗುವ ಸಾಧ್ಯತೆ ಇರುತ್ತದೆ.

ಬೆಂಗಳೂರು ನಗರ ಹಾಗೂ ಗ್ರಾಮಾಂತರ ಭಾಗಗಳು ಬಹುಭಾಷೀಯ ನೆಲೆಗಳಾಗಿವೆ. ಪೂರ್ವದಲ್ಲಿ ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಯ ಪ್ರಭಾವ ಹೆಚ್ಚಾಗಿದೆ. ಇತ್ತೀಚೆಗೆ ಅನೇಕ ಭಾಷೆಗಳು ಏಕಕಾಲದಲ್ಲಿ, ಕನ್ನಡ ಭಾಷೆಯ ಮೇಲೆ ತನ್ನ ಪ್ರಭಾವ ಬೀರಿ, ದಿನನಿತ್ಯ ಬಳಕೆಯ ಪದಗಳನ್ನು ಬಲವಂತವಾಗಿ ಸೇರಿಸುತ್ತಿದೆ. ಇದು ಬೆಂಗಳೂರು ನಗರ ಜಿಲ್ಲೆಯಲ್ಲಿ ಹೆಚ್ಚಾಗಿದ್ದು ಗ್ರಾಮಾಂತರ ಜಿಲ್ಲೆಯು ನಿಧಾನವಾಗಿ ಅಳವಡಿಸಿಕೊಳ್ಳುತ್ತಿದೆ. ಈ ಕಾರಣದಿಂದಲೇ ನಗರ ಪ್ರದೇಶದ ಬಡಾವಣೆಗಳಲ್ಲಿ, ಆಧುನಿಕ ಯಾದೃಚ್ಛಿಕ ವ್ಯಕ್ತಿನಾಮ-ಸ್ಥಳನಾಮಗಳ ಹೆಸರು ನೀಡುವಿಕೆ ಕಂಡುಬರುತ್ತದೆ. ಪುನರ್ನಾಮಕರಣ ಪ್ರಕ್ರಿಯೆಯೂ ಹೆಚ್ಚಾಗುತ್ತಿದ್ದು, ಇಂಗ್ಲಿಷ್ - ಸಂಸ್ಕೃತ ಭಾಷೆಯ ಪ್ರಭಾವವನ್ನು ಗುರುತಿಸಬಹುದು. ಹ್ರಸ್ವೀಕರಣ ಪ್ರಕ್ರಿಯೆಯಲ್ಲಿ ಇಂಗ್ಲಿಶ್ ಅಕ್ಷರಗಳ ಬಳಕೆ ಅವ್ಯಾಹತವಾಗಿ ನಡೆದಿದೆ. ಭಾಷಾಶಾಸ್ತ್ರ ದೃಷ್ಟಿಯಿಂದ ಸ್ಥಳನಾಮಾಧ್ಯಯನವು ಅತ್ಯಂತ ಮಹತ್ವವನ್ನು ಪಡೆದಿದೆ.

**ಸ್ಥಳನಾಮಗಳು ಹಾಗೂ ಘಟಕಗಳು**

ಸ್ಥಳನಾಮಗಳು ನಿರ್ದಿಷ್ಟವಾಗಿ ಇಷ್ಟೇ ಘಟಕಗಳನ್ನು ಹೊಂದಿರಬೇಕೆಂಬ ನಿರ್ಬಂಧವಿಲ್ಲ. ಆದ್ದರಿಂದ, ಕೆಲವು ಸ್ಥಳನಾಮಗಳು ಒಂದು ಘಟಕವನ್ನು, ಕೆಲವು ಎರಡು ಘಟಕಗಳನ್ನು, ಕೆಲವು ಸ್ಥಳನಾಮಗಳು ಎರಡಕ್ಕಿಂತ ಹೆಚ್ಚು ಘಟಕಗಳನ್ನು ಹೊಂದಿರುವುದನ್ನು ಎಲ್ಲಾ ಪ್ರದೇಶಗಳಲ್ಲಿಯೂ ಗುರುತಿಸಬಹುದು. ಅರ್ಥನೀಡುವ ಒಂದು ಸಣ್ಣ ಧ್ವನಿ ಸಮೂಹವನ್ನು 'ಘಟಕ'ವೆಂದು ಗುರುತಿಸಬಹುದು. ಇವುಗಳು ಸ್ಥಳೀಯ ಉಪಭಾಷೆಗೆ ತಕ್ಕಂತೆ ಬಳಕೆಯಲ್ಲಿರುತ್ತವೆ. ಪ್ರದೇಶದಿಂದ ಪ್ರದೇಶಕ್ಕೆ ಅರ್ಥದಲ್ಲಿ ಬದಲಾವಣೆಯನ್ನು ಹೊಂದಿರುವ ಸಾಧ್ಯತೆ ಇದೆ. ಆದುದರಿಂದಲೇ ಸ್ಥಳನಾಮಗಳ ಆಕೃತಿಮಾಗಳ ಬಳಕೆ ಒಂದು ಭೂ ಪ್ರದೇಶದಿಂದ ಮತ್ತೊಂದು ಭೂ ಪ್ರದೇಶಕ್ಕೆ ವಿಶಿಷ್ಟವಾಗಿ ಬದಲಾವಣೆಯಾಗಿರುತ್ತದೆ. ಸ್ಥಳನಾಮಗಳಲ್ಲಿರುವ ಆಕೃತಿಮಾಗಳ ಬಳಕೆಗನುಗುಣವಾಗಿ ಮೂರು ಭಾಗವಾಗಿ ಅಧ್ಯಯನ ದೃಷ್ಟಿಯಿಂದ ವಿಂಗಡಿಸಿಕೊಳ್ಳಲಾಗಿದೆ.

೧. ಒಂದು ಆಕೃತಿಮಾ ಹೊಂದಿರುವ ಸ್ಥಳನಾಮಗಳು

೨. ಎರಡು ಆಕೃತಿಮಾ ಹೊಂದಿರುವ ಸ್ಥಳನಾಮಗಳು

೩. ಎರಡಕ್ಕಿಂತ ಹೆಚ್ಚಿನ ಆಕೃತಿಮಾ ಹೊಂದಿರುವ ಸ್ಥಳನಾಮಗಳು

**೪.೧ ಒಂದು ಘಟಕ ಹೊಂದಿರುವ ಸ್ಥಳನಾಮಗಳು**

ಸ್ಥಳನಾಮಾಧ್ಯಯನದಲ್ಲಿ ಒಂದು ಆಕೃತಿಮಾ ಹೊಂದಿರುವ ಸ್ಥಳನಾಮಗಳು ಅತ್ಯಂತ ಮಹತ್ವ ಪಡೆದಿದೆ. ಏಕ ಆಕೃತಿಮಾ ಸ್ಥಳನಾಮಗಳು ''ನಿರ್ದಿಷ್ಟ ಮತ್ತು ವರ್ಗೀಕ ವ್ಯವಸ್ಥೆಯ ಸ್ಥಳನಾಮಗಳಿಗಿಂತ ಕಾಲದ ದೃಷ್ಟಿಯಿಂದ ಹೆಚ್ಚು

ಪ್ರಾಚೀನವಾದಂತಿವೆ'[2]. ಇವುಗಳನ್ನು ಸೂಕ್ಷ್ಮವಾದ ಅಧ್ಯಯನಕ್ಕೆ ಒಳಗು ಮಾಡಿದಲ್ಲಿ ಮಾನವಶಾಸ್ತ್ರೀಯ ಹಾಗೂ ಕುಟುಂಬ ರೂಪುಗೊಂಡ ರೀತಿಯನ್ನು ಅರಿಯಲು ಸಾಧ್ಯವಾಗುತ್ತದೆ. ಏಕ ಆಕೃತಿಮಾಗಳು ಸ್ಥಳನಾಮಗಳಲ್ಲಿ ಸ್ವತಂತ್ರ ಘಟಕಗಳಾಗಿ ಬಳಕೆಯಾಗಿವೆ.

ಏಕಾಕೃತಿಮಾ ಸ್ಥಳನಾಮಗಳಲ್ಲಿ ವಿಶಿಷ್ಟ ಮತ್ತು ಸಾಮಾನ್ಯ ವಾರ್ಗಿಕ ಎಂಬ ಎರಡು ಪ್ರತ್ಯೇಕ ಘಟಕಗಳಿರದೆ, ಒಂದೇ ಆಕೃತಿಮಾ ಎರಡೂ ಕಾರ್ಯವನ್ನು ನಿರ್ವಹಿಸುತ್ತಿರುತ್ತದೆ.

ಈ ಸ್ಥಳನಾಮಗಳಲ್ಲಿನ "ಸ್ಥಳನಾಮ ಸಮಸ್ತ ಪದದಲ್ಲಿ ಭೂವೈಶಿಷ್ಟ್ಯ ವಾಚಕವಾಗಿ, ಇಲ್ಲವೇ ಸ್ಥಳ (ಗ್ರಾಮ) ವಾಚಕವಾಗಿ ಬರುವ ಕೆಲವು ಘಟಕಗಳು ಸ್ವತಂತ್ರವಾಗಿ ನಿಂತು ಒಂದೊಂದು ಊರು ಹೆಸರಾಗಿ ಬಿಟ್ಟಿರುವುದುಂಟು"[3]

ಈ ಸ್ಥಳನಾಮಗಳು "ಒಂದು ಘಟನೆ ಅಥವಾ ಕೇಂದ್ರ ವಸ್ತುವನ್ನು ಮುಖ್ಯವಾಗಿಟ್ಟುಕೊಂಡು ನಿರ್ದೇಶಿತವಾಗಿರುತ್ತವೆ. ಈ ಘಟನೆ ಅಥವಾ ವಸ್ತುಗಳು ಜನರ ನೆನಪಿನಿಂದ ದೂರವಾಗಿದ್ದರೂ ಬೇರೆ ಅರ್ಥ ಬಂದಿದ್ದರೂ ಸ್ಥಳನಾಮಗಳು ಹಾಗೆಯೇ ಉಳಿದಿರುತ್ತವೆ. ಇವು ಹೆಸರಿನ ನಿಷ್ಪತ್ತಿಯನ್ನು ಹಾಗೂ ಉದ್ದೇಶವನ್ನು ನಿರ್ದೇಶಿಸುತ್ತಿರುತ್ತದೆ".[4]

ಹೊಸ ಪ್ರದೇಶಗಳಿಗೆ ಹೆಸರಿಡುವ ಅಗತ್ಯ ಉಂಟಾದಾಗ ಒಂದೇ ರೀತಿಯ ಹೆಸರುಗಳನ್ನು ವಾರ್ಗಿಕಗಳಾಗಿ ಬಳಸಲಾಗಿದೆ. ನಾಗರೀಕತೆ ಬೆಳೆದಂತೆಲ್ಲಾ ಈ ಪ್ರಕ್ರಿಯೆ ನಿಧಾನವಾಗಿ ಬೆಳೆಯುತ್ತಾ ಬಂದಿದೆ. ಏಕಾಕೃತಿಮಾ ಸ್ಥಳನಾಮಗಳು ಕಾಲಾನುಕ್ರಮಣಿಕೆ ತಿಳಿಯಲು ಸಹಾಯಕವಾಗಿವೆ.[5]

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅರ್ಥವತ್ತಾದ ಒಂದು ಘಟಕವಿರುವ ಸ್ಥಳನಾಮಗಳನ್ನು ಗುರುತಿಸಬಹುದು. ವಿಶಿಷ್ಟ ಮತ್ತು ವಾರ್ಗಿಕಗಳು ಪ್ರತ್ಯೇಕವಾಗಿ ಬಳಕೆಯಾಗಿಲ್ಲ. ವಾರ್ಗಿಕವೇ ವಿಶಿಷ್ಟವಾಗಿ ಹಾಗೂ ಒಂದು ಆಕೃತಿಮಾವಾಗಿ ಸ್ಥಳನಾಮಗಳಲ್ಲಿ ಬಳಕೆಯಾಗಿರುವುದನ್ನು ಗುರುತಿಸಬಹುದು.

**ಒಂದು ಘಟಕವಿರುವ ಸ್ಥಳನಾಮಗಳು**

| | | | | | |
|---|---|---|---|---|---|
| ಅಗರ | - | ಕ | ಪುರ | - | ಮಾ |
| ಕೆಬ್ಬೆ | - | ಕ | ಮಟ್ಟ | - | ಮಾ |
| ಹುಳ್ಯ | - | ಕ | ಹರ್ತಿ | - | ಮಾ |
| ದಾಸವಾ | - | ಚ | ಕಲ್ಯ | - | ಮಾ |
| ಪಟ್ಲು | - | ಚ | ಬಿಡದಿ | - | ರಾ |
| ಮಾಕಳಿ | - | ಚ | ಕೊರಟಿ | - | ಹೊ |
| ಆವತಿ | - | ದೇ | ಗುಬ್ಬಿ | - | ಹೊ |
| ತಿಂಡ್ಲು | - | ದೇ | ಬೈರತಿ | - | ಹೊ |

| | | | | | |
|---|---|---|---|---|---|
| ಜಾಲಿಗೆ | - | ದೇ | ಪುರ | - | ದೇ |
| ಪಾಳ್ಯ | - | ದೇ | ಉಜ್ಜನಿ | - | ದೊ |
| ಗೂಳ್ಯ | - | ದೊ | ಮೆಣಸಿ | - | ದೊ |
| ಹಣಬೆ | - | ದೊ | ಸಾಸಲು | - | ದೊ |
| ಮಗ್ಗೆ | - | ನೆ | ಮಾದಗ | - | ನೆ |

## ಒಂದು ಘಟಕವಿರುವ ಸ್ಥಳನಾಮಗಳ ವಿಶ್ಲೇಷಣೆ

ಬಿಡದಿ (ರಾ) : ಅತಿಥಿಗಳ ವಸತಿ ಸೂಚಕ ಪದ. ಬಿಡಾರ, ವಿಶ್ರಾಂತಿಯ ತಾಣ ಎಂಬರ್ಥಗಳಿದ್ದು, ಮೈಸೂರು ಮಹಾರಾಜರಾದ ಶ್ರೀ ಕೃಷ್ಣರಾಜ ಒಡೆಯರು ಬೆಂಗಳೂರಿಗೆ ಬರುವಾಗ ತಂಗಿದ್ದ ಸ್ಥಳವಾದರಿಂದ 'ಬಿಡದಿ' ಎಂಬ ವಸತಿವಾಚಿ ಸ್ಥಳನಾಮ ಸೃಷ್ಟಿಯಾಗಿರುವ ಸಾಧ್ಯತೆ ಇದೆ.

ಅಚ್ಚಲು (ರಾ) : 'ಅಚಲು'- ಎಂಬ ಪದದಿಂದ ನಿಷ್ಪತ್ತಿಯಾಗಿದ್ದು -ಬೆಟ್ಟ, ಯೋಗಿ ಎಂಬರ್ಥ ನೀಡುತ್ತದೆ. 'ಜಡೆಮುನಿ'ಯ ಪೂಜೆಯ ಇಲ್ಲಿ ನಡೆಯುತ್ತದೆ. ಈ ಕಾರಣದಿಂದ 'ಅಚ್ಚಲು' ಸ್ಥಳನಾಮ ನಿಷ್ಪನ್ನವಾಗಿರುವ ಸಾಧ್ಯತೆ ಇದೆ.

ಕೊರಟಿ (ಹೊ) : ಕೊರಟು > ಕೊರಟು > ಕೊರಡು ಎಂಬರ್ಥ ನೀಡುವ ಘಟಕವಾಗದ್ದು ಕಪ್ಪಾದ ಮರ ಇದ್ದ ಸ್ಥಳವಾದ್ದರಿಂದ 'ಕೊರಟಿ' ಸ್ಥಳನಾಮ ನಿಷ್ಪನ್ನವಾಗಿರಬಹುದು.

ಬೈರತಿ (ಹೊ) : ಭರತಿ > ಭೈರತಿ > ಬೈರತಿ ಆಗಿರುವ ಸಾಧ್ಯತೆ ಇದೆ. ಭರತಿ = ಸಮುದ್ರ ಅಥವಾ ನದಿಯಲ್ಲಿನ ನೀರಿನ ಉಬ್ಬರ ಎಂಬರ್ಥ ನೀಡುತ್ತದೆ. ಉಬ್ಬರ – ಎತ್ತರ, ಎತ್ತರವಾದ ಭೂ ಪ್ರದೇಶವನ್ನು ಸೂಚಿಸುವ 'ವಿಶಿಷ್ಟ ವಾಗಿರುವ ಸಾಧ್ಯತೆ ಇದೆ. ಪ್ರಾಕೃತಿಕಲಕ್ಷಣ ಸೂಚಿಸುವ ಘಟಕ.



ಮಟ್ಟ (ಮಾ) : ಭೂಪ್ರದೇಶವು ಸಮತಟ್ಟಾಗಿರುವ ಪ್ರದೇಶವಾಗಿರುವುದರಿಂದ 'ಮಟ್ಟ' ಏಕಾಕೃತಿಮಾ ಎಂಬ ಪದದ ಬಳಕೆಯಿಂದ ಈ ಹೆಸರು ನಿಷ್ಪನ್ನಾಗಿರುವ ಸಾಧ್ಯತೆ ಇದೆ.
ಮಟ್ಟ – ಸಮತಟ್ಟಾದ, ಸಪಾಟಾದ ಎಂಬರ್ಥ ನೀಡುತ್ತದೆ.

ಹರ್ತಿ (ಮಾ) : ೧. ಅರ್ಥಿ < ಹರ್ತಿ ಯಾಗಿರುವ ಸಾಧ್ಯತೆ.
ಅರ್ಥಿ = ಸೇವಕ, ಯಾಚಕ – ಸಾಮಾನ್ಯ ಕೆಲಸಗಾರರು ನೆಲೆಸಿದ್ದ ಊರು.
೨. ಹರಿತ > ಹರತಿ > ಹರ್ತಿ –ಹಸಿರು ತುಂಬಿದ್ದ ಪ್ರದೇಶ, ವ್ಯವಸಾಯದ ಭೂಮಿ.

ಗೂಳ್ಯ (ದೊ) : ಗುಳೆ ಬಂದ ಜನರು ನೆಲೆಸಿರುವ ಸ್ಥಳ 'ಗುಳ್ಯ' – ಗುಳ್ಯ > ಗೂಳ್ಯ ಆಗಿದೆ. ಆರಂಭದ 'ಗ್' ವ್ಯಂಜನಕ್ಕೆ 'ಊ' ದೀರ್ಘಸ್ವರ ಸೇರಿ ಗೂಳ್ಯ ಆಗಿದೆ. ಒಂದು ಸ್ಥಳದಿಂದ ವಲಸೆ ಬಂದು ನೆಲೆಸಿದ ಜನರ ನೆಲೆಯನ್ನು 'ಗೂಳ್ಯ' ಎಂದು ಕರೆಯಲಾಗಿದೆ.

ಕೆಬ್ರೆ (ತ) : ಕೆಂಪು ಮಣ್ಣಿನ ಭೂಮಿಯನ್ನು ಹೊಂದಿರುವ ಸ್ಥಳವಾಗಿದ್ದರಿಂದ 'ಕೆಬ್ರೆ' ಎಂಬ ಹೆಸರು ನಿಷ್ಪನ್ನವಾಗಿದೆ. ಕೆಬ್ಬೆ > ಕೆಬ್ರೆ ಆಗಿರುವ ಸಾಧ್ಯತೆ ಇದೆ.

ಅಗರ (ಕ) : 'ಅಗ್ರಹಾರ' ಪದದಿಂದ ನಿಷ್ಪನ್ನವಾಗಿರುವ ಆಕೃತಿಮಾ ಆಗಿದ್ದು, ಬ್ರಾಹ್ಮಣರ ವಾಸದ ನೆಲೆಯನ್ನು ಸೂಚಿಸುತ್ತದೆ.

ಹಣಬೆ (ದೊ) : ಈ ಪ್ರದೇಶದಲ್ಲಿ ಹಣದ ಭಂಡಾರ ದೊರೆಯಿತು ಎಂಬ ಐತಿಹ್ಯವಿದೆ. ಹಣ ದೊರೆತ ಜಾಗವಾದ್ದರಿಂದ 'ಹಣಬೆ' ಎಂಬ ಹೆಸರು ನಿಷ್ಪನ್ನವಾಗಿದೆ ಎಂಬ ಐತಿಹ್ಯವಿದೆ.

ಸಾಸಲು (ದೊ) : ಸಾಸ > ಸಾಹಸ – ಸಾಹಸ ಪದಕ್ಕೆ ಸಾಮರ್ಥ್ಯ ಎಂಬರ್ಥ ಬರುತ್ತದೆ. ಒಂದು ಕಾಲದಲ್ಲಿ ಹೋರಾಟ ಮಾಡಿ ಸಾಹಸವನ್ನೂ ಮೆರೆದ ಪ್ರದೇಶವಾಗಿದ್ದು, ತೆಲುಗು ಭಾಷೆಯ 'ಸಾಹಸುಲು' ಪದದ ಪ್ರಭಾವದಿಂದ 'ಸಾಸಲು' ಸ್ಥಳನಾಮ ನಿಷ್ಪನ್ನವಾಗಿರಬಹುದು. ಸಾಹಸಲು < ಸಾಸಲು – ಆಗಿರುವ ಸಾಧ್ಯತೆ ಇದೆ.

ಮಣ್ಣೆ (ನೆ) : ಗಂಗರ ಪ್ರಮುಖ ರಾಜಬೀಡು–ಮಣ್ಣೆ. ಶಾಸನದಲ್ಲಿ 'ಮಾನ್ಯಪುರ' ಎಂಬ ಹೆಸರನ್ನು ಉಲ್ಲೇಖಿಸಿದೆ. ಗಂಗರ ರಾಜಬೀಡು ಈ ಸ್ಥಳವಾಗಿತ್ತು. ಮಾನ್ಯಪುರ < ಮಣ್ಣೆ ಎಂದು ಜನರ ಬಳಕೆಯಲ್ಲಿ ತನ್ನ ಹೆಸರು ಬದಲಾಯಿಸಿಕೊಂಡಿದ್ದು ಸೌಲಭ್ಯಾಕಾಂಕ್ಷೆ ಗುರುತಿಸಬಹುದು. ರತ್ನಪುರಿ ಪಟ್ಟಣ, ಚೋಳರು ಇದನ್ನು ವಶಪಡಿಸಿಕೊಂಡ ನಂತರ 'ಮನ್ನೈ ಕಟಕಂ' ಎಂದು ಕರೆದುಕೊಂಡಿದ್ದಾರೆ.

ಮಾದಗ (ನೆ) : ಮದಗ > ಮಾದಗ ಪ್ರಾಕೃತಿಕ ಲಕ್ಷಣ ಸೂಚಿಸುವಪದ.
ಮದಗ = ನೀರು ಹರಿಯಲು ಮಾಡಿರುವ ಕಾಲುವೆ, ಕೆರೆ ಕುಂಟೆಗಳ ತೂಬು. 'ಮ' ಅಕ್ಷರದಲ್ಲಿನ 'ಅ' ಸ್ವರ ದೀರ್ಘವಾಗಿ 'ಆ' ಬಳಕೆಯಾಗಿದೆ.

ಮಾಕಳಿ (ಚ) : ಸಸ್ಯಜಾತಿಯನ್ನು ನಿರ್ದೇಶಿಸುವ ಆಕೃತಿಮಾ ಆಗಿದ್ದು, ಸ್ಥಳನಾಮವಾಗಿ ಬಳಕೆಯಾಗಿದೆ. ಈ ಸಸ್ಯದ ಬೇರು ಔಷಧೀಯ ಗುಣ ಹೊಂದಿದೆ.

ತಿಂಡ್ಲು (ದೇ) : ಬರಗಾಲದಲ್ಲಿ ಆಹಾರವನ್ನು ಹಂಚುತ್ತಿದ್ದ ಸ್ಥಳವಾಗಿದ್ದು 'ತಿಂಡಿ' (ತಿನಿಸು)ಯನ್ನು ನೀಡುತ್ತಿದ್ದ ಸ್ಥಳವಾಗಿದ್ದರಿಂದ, ತೆಲುಗು ಭಾಷೆಯ ಪ್ರಭಾವದಿಂದ ಈ ಹೆಸರು ಬಂದಿದೆ. ತಿಂಡಿ > ತಿಂಡಿಲು > ತಿಂಡಲು > ತಿಂಡ್ಲು (ತೆಲುಗು ಭಾಷೆ, ಬಹುವಚನ)ಆಗಿರುವ ಸಾಧ್ಯತೆ ಇದೆ.

ಆವತಿ (ದೇ) : ೧. ನಾಗರಹಾವೊಂದು ಮಗುವಿನ ಜೋಳಿಗೆ ಮೇಲೆ ಹೆಡೆ ಆಡಿಸುತ್ತಿದ್ದುದರಿಂದ.
ಹಾವು + ಹತ್ತಿ > ಹಾವು + ಅತ್ತಿ > ಹಾವತ್ತಿ > ಹಾವತಿ > ಆವತಿ ಆಗಿರುವ ಸಾಧ್ಯತೆ ಇದೆ.
೨. ಶಕ್ತಿ ದೇವತೆಗೆ ಮಕ್ಕಳನ್ನು ಬಲಿಕೊಡುತ್ತಿದ್ದರಿಂದ. 'ಆಹುತಿ' ಪದವು ಆವುತಿ > ಆವತಿ ಎಂದಾಗಿದೆ ಎಂಬ ವಾದವೂ ಇದೆ.[೬]

ಏಕ ಘಟಕ ಹೊಂದಿರುವ ಸ್ಥಳನಾಮಗಳು ಪ್ರಾಚೀನತೆಯನ್ನು ಸೂಚಿಸುವ ಸ್ಥಳನಾಮಗಳಾಗಿರಬಹುದು. ಆದರೆ ಕೆಲವೊಮ್ಮೆ ಪೂರ್ವದಲ್ಲಿ ಹೆಚ್ಚಿನ ಆಕೃತಿಮಾಗಳನ್ನು ಹೊಂದಿದ್ದ ಸ್ಥಳನಾಮಗಳು, ಜನರ ಸೌಲಭ್ಯಾಕಾಂಕ್ಷೆಯಿಂದ, ಮೂಲರೂಪದಿಂದ ಸಂಕ್ಷಿಪ್ತ ರೂಪವಾಗಿ ಮಾರ್ಪಟ್ಟಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಉದಾ : ಗಂಗರ ಕಾಲದಲ್ಲಿ 'ಮಾನ್ಯಪುರ', ಚೋಳರ ಕಾಲದಲ್ಲಿ 'ಮಣ್ಣೆಕಟಕ' ಎಂಬ ಹೆಸರು ಇದ್ದ ಊರು ನಂತರದಲ್ಲಿ 'ಮಣ್ಣೆ' ಎಂಬ ಏಕಾಕೃತಿಮಾ ಸ್ಥಳನಾಮವಾಗಿ ಸ್ಥಿತ್ಯಂತರ ಗೊಂಡಿದೆ.

## ೪.೨ ಎರಡು ಆಕೃತಿಮಾ ಹೊಂದಿರುವ ಸ್ಥಳನಾಮಗಳು

ಸ್ಥಳನಾಮಗಳು ವಿಶಿಷ್ಟ ಹಾಗೂ ವಾರ್ಗಿಕಗಳನ್ನು ಹೊಂದಿರುವಿಕೆ ಸಾಮಾನ್ಯ ಗುಣವಾಗಿದೆ. 'ವಿಶಿಷ್ಟವು ಆ ಸ್ಥಳದ ವಿಶೇಷತೆಯನ್ನು, ಭೂಗುಣವನ್ನು, ವ್ಯಕ್ತಿಯನ್ನು, ಸಾಮಾಜಿಕ, ಸಾಂಸ್ಕೃತಿಕ ಮುಂತಾದ - ಅಂಶವನ್ನು ಸೂಚಿಸುತ್ತಿರುತ್ತದೆ. ಇವುಗಳು ಸ್ಥಳನಾಮದ ಮೂಲ ಅಂಶವಾಗಿದ್ದು, ಪೂರ್ವಪದದಲ್ಲಿ ಈ ವಿಶಿಷ್ಟಾಂಶವನ್ನು ಉತ್ತರಪದದಲ್ಲಿ ಸಾಮಾನ್ಯ ವಾರ್ಗಿಕವನ್ನು ಗುರುತಿಸಬಹುದು. ಏಕಾಕೃತಿಮಾ ಸ್ಥಳನಾಮಗಳಲ್ಲಿ ಇದನ್ನು ಗುರುತಿಸಲು ಸಾಧ್ಯವಿಲ್ಲವಾದರೂ, ಎರಡು ಆಕೃತಿಮಾ ಹೊಂದಿರುವ ಸ್ಥಳನಾಮಗಳಲ್ಲಿಯೂ ಕೆಲವೊಮ್ಮೆ ಸಾಮಾನ್ಯ ವಾರ್ಗಿಕವನ್ನು ಗುರುತಿಸಲು ಸಾಧ್ಯವಿಲ್ಲದಿರಬಹುದು. ವಿಶಿಷ್ಟವೇ ಸಾಮಾನ್ಯ ವಾರ್ಗಿಕವಾಗಿ ಕಾರ್ಯ ನಿರ್ವಹಿಸುತ್ತಿರುತ್ತದೆ. ಇಂತಹ ಸಂದರ್ಭದಲ್ಲಿ 'ವಿಶಿಷ್ಟವು ಬಳಕೆಯಾಗಿರುವ ಸ್ಥಾನದಿಂದ ಸಾಮಾನ್ಯ ವಾರ್ಗಿಕವನ್ನು ಪ್ರತ್ಯೇಕಿಸಿಕೊಳ್ಳಬೇಕಾಗುತ್ತದೆ.[6]

### ಅರ್ಥವತ್ತಾದ ಎರಡು ಘಟಕಗಳಿರುವ ಸ್ಥಳನಾಮಗಳು

| | |
|---|---|
| ಕನಕ + ಪುರ = ಕನಕಪುರ - ಕ | ಕರೇನ + ಹಳ್ಳಿ = ಕರೇನಹಳ್ಳಿ - ನೆ |
| ಭೂ+ ಹಳ್ಳಿ = ಭೂಹಳ್ಳಿ - ಕ | ಕರಿ+ ಮನೆ = ಕರೀಮನೆ - ನೆ |
| ಅರೆ + ಕೊಪ್ಪ= ಅರೆಕೊಪ್ಪ - ಕ | ತಾಳೆ + ಕೆರೆ = ತಾಳೆಕೆರೆ - ನೆ |
| ಕಣಿವೆ + ಕಟ್ಟೆ = ಕಣಿವೇಕಟ್ಟೆ - ಕ | ನಿಜ+ ಕಲ್ = ನಿಜಗಲ್ - ನೆ |
| ದ್ಯಾವ + ಸಂದ್ರ = ದ್ಯಾವಸಂದ್ರ - ಕ | ಶ್ರೀಕಂಠ + ಪುರ = ಶ್ರೀಕಂಠಪುರ - ನೆ |
| ಕೃಷ್ಣ + ಪುರ = ಕೃಷ್ಣಾಪುರ - ಚ | ಆಲದ + ಕಟ್ಟೆ = ಆಲದಕಟ್ಟೆ - ಮಾ |
| ಕೊಳು + ಊರು = ಕೋಳೂರು - ಚ | ಕಲ್ + ಕೆರೆ = ಕಲ್ಕೆರೆ - ಮಾ |
| ಬಳ್ಳಾ+ ಪಟ್ಟಣ = ಬಳ್ಳಾಪಟ್ಟಣ - ಚ | ಬೈರಾ+ ಪುರ = ಬೈರಾಪುರ- ಮಾ |
| ನಾಯಕನ + ಹಳ್ಳಿ = ನಾಯಕನಹಳ್ಳಿ - ಚ | ಮಾರಿ + ಕುಪ್ಪೆ = ಮಾರಿಕುಪ್ಪೆ - ಮಾ |
| ಮತ್ತಿ+ ಕೆರೆ = ಮತ್ತಿಕೆರೆ - ಚ | ಹೊಸ + ಹಳ್ಳಿ = ಹೊಸಹಳ್ಳಿ - ಮಾ |
| ಅಗಲ + ಕೋಟೆ = ಅಗಲಕೋಟೆ - ದೇ | ಈಜು + ಊರು = ಈಜೂರು - ರಾ |
| ಕೋರ + ಮಂಗಲ = ಕೋರಮಂಗಲ - ದೇ | ಕುಂಭಾ + ಪುರ = ಕುಂಭಾಪುರ - ರಾ |
| ಲಕ್ಷ್ಮೀ+ ಪುರ = ಲಕ್ಷ್ಮೀಪುರ- ದೇ | ತಾಳ + ವಾಡಿ = ತಾಳವಾಡಿ - ರಾ |
| ನೆಲ್ಲ + ಕುಂಟೆ = ನೆಲ್ಲಕುಂಟೆ - ದೇ | ಬೈರ + ಮಂಗಲ = ಬೈರಮಂಗಲ - ರಾ |
| ಭುವನ + ಹಳ್ಳಿ = ಭುವನಹಳ್ಳಿ - ದೇ | ಅಗಸನ+ ಹಳ್ಳಿ = ಅಗಸನಹಳ್ಳಿ - ಹೊ |
| ಅಂತರ+ ಹಳ್ಳಿ = ಅಂತರಹಳ್ಳಿ - ಹೊ | ಕೋಡಿ+ ಪುರ = ಕೋಡಿಪುರ - ಹೊ |

ಕಾಡ + ಕುಂಟೆ = ಕಾಡಕುಂಟೆ - ದೊ

ಕೋಳಿ + ಪುರ = ಕೋಳಿಪುರ - ದೊ

ಜಕ್ಕ+ಸಂದ್ರ = ಜಕ್ಕಸಂದ್ರ - ದೊ

ಬನ+ಅಟ್ಟಿ = ಜನವಟ್ಟಿ - ದೊ

ದೊಮ್ಮನ + ಬಂಡೆ = ದೊಮ್ಮನಬಂಡೆ - ಹೊ

ಸತ್ಯ + ಆವರ = ಸತ್ಯವಾರ - ಹೊ

ಹನಿ+ಊರು = ಹನಿಯೂರು - ಹೊ

ಅರ್ಥವತ್ತಾದ ಎರಡು ಘಟಕಗಳಿರುವ ಸ್ಥಳನಾಮಗಳೇ ಹೆಚ್ಚಾಗಿದ್ದು, ಮಾದರಿಗಾಗಿ ಕೆಲವು ಸ್ಥಳನಾಮಗಳ ವಿಶ್ಲೇಷಣೆ ಮಾಡಲಾಗಿದೆ.

ಉದಾ : ನಿಡುಗಲ್ - ಇಲ್ಲಿ ನಿಡಿದಾದ + ಕಲ್ ಎಂಬ ಘಟಕಗಳಲ್ಲಿ ಕಲ್ ಅಥವಾ ಕಲ್ಲು ಎಂಬುದು ಸಾಮಾನ್ಯವಾರ್ಗಿಕವಾಗಿದೆ. ಕಲ್ಲಹಳ್ಳಿ - ಎಂಬ ಸ್ಥಳನಾಮದಲ್ಲಿ 'ಕಲ್ಲು' ಘಟಕವು ವಿಶಿಷ್ಟವಾಗಿ ಬಳಕೆಯಾಗಿದೆ. 'ಕಲ್ಲು' ಪದ ಪೂರ್ವದಲ್ಲಿ ಬಂದರೆ 'ವಿಶಿಷ್ಟ'ವೂ, ಉತ್ತರದಲ್ಲಿ ಬಂದರೆ 'ವಾರ್ಗಿಕ'ವೂ ಆಗುತ್ತದೆ.

ಎರಡು ಆಕೃತಿಮಾ ಹೊಂದಿರುವ ಸ್ಥಳನಾಮಗಳಲ್ಲಿ ಎರಡೂ ಘಟಕಗಳು ಸಾಮಾನ್ಯವಾರ್ಗಿಕಗಳೇ ಆಗಿದ್ದು ಪೂರ್ವಪದದಲ್ಲಿನ ಸಾಮಾನ್ಯ ವಾರ್ಗಿಕವೇ ವಿಶಿಷ್ಟ ಘಟಕವಾಗಿ ಕಾರ್ಯನಿರ್ವಹಿಸುತ್ತಿರುತ್ತದೆ.

ಉದಾ :

ಹಳ್ಳಿಪುರ : ಇಲ್ಲಿನ ಆಕೃತಿಮಾಗಳೆರಡೂ ಸಾಮಾನ್ಯ ವಾರ್ಗಿಕಗಳಾಗಿದ್ದು 'ಹಳ್ಳಿ' ಘಟಕವು 'ವಿಶಿಷ್ಟ' ಸ್ಥಾನವನ್ನು ಆವರಿಸಿದೆ.

ಬೆಟ್ಟಕೋಟೆ : ಬೆಟ್ಟ + ಕೋಟೆ - ಘಟಕಗಳೆರಡೂ ಇತರ ಸಂದರ್ಭಗಳಲ್ಲಿ ಸಾಮಾನ್ಯವಾರ್ಗಿಕವೇ. ಪ್ರಸ್ತುತ ಉದಾಹರಣೆಯಲ್ಲಿ 'ಬೆಟ್ಟ' ಆಕೃತಿಮಾ ಎತ್ತರ ಭೂಪ್ರದೇಶವನ್ನು ಸೂಚಿಸುತ್ತದೆಯಾದ್ದರಿಂದ 'ವಿಶಿಷ್ಟ' ಅರ್ಥ ಪಡೆಯುತ್ತದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಎರಡು ಆಕೃತಿಮಾ ಹೊಂದಿರುವ ಸ್ಥಳನಾಮಗಳನ್ನು ಗುರುತಿಸಬಹುದಾಗಿದ್ದು. ಈ ರೀತಿಯ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ.

ಕತ್ತಿಪುರ (ರಾ) : ಲೋಹಸೂಚಕ ಸ್ಥಳನಾಮವಾಗಿದ್ದು ಮಾಗಡಿ ಕೆಂಪೇಗೌಡ ಹಾಗೂ ಟಿಪ್ಪುಸುಲ್ತಾನ್ ಸೈನ್ಯಕ್ಕೆ ಕತ್ತಿಗಳನ್ನು ತಯಾರಿಸಿಕೊಡುತ್ತಿದ್ದ ಕೇಂದ್ರವಾಗಿತ್ತು. ಈಗ ಇದು ಬೇಚರಾಕ್, ಗ್ರಾಮವಾಗಿದೆ. 'ಕತ್ತಿ' ವಿಶಿಷ್ಟವಾಗಿ 'ಪುರ' ಸಾಮಾನ್ಯವಾರ್ಗಿಕವಾಗಿ ಬಳಕೆಯಾಗಿದೆ. ಈ ಊರು ಸ್ಥಳಾಂತರವಾಗಿದ್ದು, ಇದು 'ನಿರ್ವಸತಿ'ಯಾಗಿದ್ದು. ಇದನ್ನು ಬೇಚರಾಕ್ ಗ್ರಾಮವೆಂದು ಕರೆಯಲಾಗುತ್ತಿದೆ.

ಕೊನಘಟ್ಟ (ದೊ) : ನಂದಿಬೆಟ್ಟಕ್ಕೆ ಹೊಂದಿಕೊಂಡಿರುವ ಘಟ್ಟಪ್ರದೇಶದ ಕೊನೆಯ ಭೂಭಾಗವಾಗಿದೆ. ಘಟ್ಟದ ಕೊನೆಯ ಗ್ರಾಮ ಇದಾಗಿದೆ. 'ಕೊನೆ' ವಿಶಿಷ್ಟವಾಗಿ 'ಘಟ್ಟ' ಸಾಮಾನ್ಯ ವಾರ್ಗಿಕವಾಗಿದೆ.

ಕೊನೆಯ ಘಟ್ಟ > ಕೊನೆಘಟ್ಟ > ಕೊನಘಟ್ಟ ಆಗಿದೆ. ಪ್ರಾಕೃತಿಕ ಲಕ್ಷಣ ಸೂಚಿಸುವ ಸ್ಥಳನಾಮವಾಗಿದೆ.

ತೂಬಗೆರೆ (ದೊ) : ಇದು ಜಲವಾಚಿ ಸ್ಥಳನಾಮವಾಗಿದ್ದು ಇಲ್ಲಿರುವ ಕೆರೆಗೆ ತೂಬು (ನೀರು ಹೊರಬರುವ ರಂಧ್ರ) ಇದ್ದುದರಿಂದ, ಕ್ ವ್ಯಂಜನಕ್ಕೆ 'ಗ್' ವ್ಯಂಜನ ಆದೇಶವಾಗಿ ಬಂದಿದೆ.
ತೂಬು ಇದ್ದ ಕೆರೆ > ತೂಬಿನ ಕೆರೆ > ತೂಬುಕೆರೆ > ತೂಬಗೆರೆ ಆಗಿದೆ.

ಹನಿಯೂರು (ಚ) : ಜಲವಾಚಿ ಸ್ಥಳನಾಮವಾಗಿದ್ದು ಬೆಟ್ಟಸಾಲನ್ನು ಬಳಗೊಂಡಿರುವ ಭೂಪ್ರದೇಶವಾಗಿದೆ. ಮೋಡಗಳು ಬಂದಲ್ಲಿ ಬೆಟ್ಟ ಸಾಲಿನ ಬಳಿ ತಡೆ ಉಂಟಾಗಿ ಮಳೆ ಹನಿ ಬೀಳುತ್ತಿದ್ದುದರಿಂದ, ಮಳೆ ಹನಿ + ಊರು > ಮಳೆಹನಿಊರು > ಹನಿ ಊರು ಆಗಿದೆ. 'ಮಳೆ', 'ಹನಿ' – ಎರಡೂ ವಿಶಿಷ್ಟವಾಗಿದ್ದು ಸೌಲಭ್ಯಾಕಾಂಕ್ಷೆಯಿಂದ ಒಂದು ವಿಶಿಷ್ಟ 'ಮಳೆ' ಲೋಪವಾಗಿ 'ಹನಿ' ಉಳಿದುಕೊಂಡು, 'ಊರು' ಸಾಮಾನ್ಯವಾರ್ಗಿಕದ ಜೊತೆ ಸೇರಿ 'ಹನಿಯೂರು' ಆಗಿದೆ.

ಗಜಪುರಿ (ಮಾ) : ಪ್ರಾಣಿವಾಚಿ ಸ್ಥಳನಾಮವಾಗಿದ್ದು 'ಗಜ' ವಿಶಿಷ್ಟವಾಗಿ 'ಪುರಿ' ಸಾಮಾನ್ಯವಾರ್ಗಿಕವಾಗಿದೆ. ಮೈಸೂರು ಮಹಾರಾಜರಿಂದ ಜಹಗೀರನ್ನು ಪಡೆದ 'ವಿದ್ಯಾರಾಜ' ಎಂಬ ವಿದ್ವಾಂಸನು, ಆನೆಯೊಂದನ್ನು ಮುಂದೆ ಬಿಟ್ಟು ಹಿಂದೆ ನಡೆದು ಬಂದ. ಆನೆ ನಿಂತ ಸ್ಥಳದಲ್ಲಿದ್ದ ಗ್ರಾಮವನ್ನು ಜಹಗೀರಾಗಿ ಪಡೆದಿದ್ದರಿಂದ, ಆನೆಯ ಹೆಸರಿನಲ್ಲಿ 'ಗಜಪುರ' ಎಂದು ನಾಮಕರಣ ಮಾಡಿದ್ದಾರೆ ಎಂಬ ಐತಿಹ್ಯವಿದೆ.
ಪುರ > ಪುರಿ ಆಗಿ ಬಳಕೆಯಾಗಿದೆ.

ರಾಮಪುರ (ಕ) : ವ್ಯಕ್ತಿವಾಚಿ ಸ್ಥಳನಾಮವಾಗಿದೆ. ಶ್ರೀರಾಮನ ಗುಣವುಳ್ಳ 'ರಾಮ' ಎಂಬ ವ್ಯಕ್ತಿಯ ನೆನಪಿಗೆ 'ರಾಮಪುರ' ಎಂಬ ಸ್ಥಳನಾಮ ನಿಷ್ಪನ್ನವಾಗಿದೆ ಎಂಬುದು ಇಲ್ಲಿನ ಜನರ ನಂಬಿಕೆಯಾಗಿದೆ. ಷಷ್ಠಿ 'ಅ' ಸಂಬಂಧಕಾರಕ ಪ್ರತ್ಯಯ ಇಲ್ಲದಿರುವುದರಿಂದ ಇದು ದೈವವಾಚಿಯೂ ಆಗಿರಬಹುದು.

ಚಪ್ಪರಕಲ್ಲು (ದೇ) : ಕ್ಷೇತ್ರವಾಚಕವಾಗಿದ್ದಿತು. ಈಗ ವಸತಿವಾಚಿಯಾಗಿ ಪರಿವರ್ತನೆಯಾಗುತ್ತಿದೆ. ಒಂದು ಬಂಡೆಯ ಮೇಲೆ ಕಲ್ಲಿನ ಮಂಟಪವಿದೆ. ಕಲ್ಲಿನ ಚಪ್ಪರವಿರುವ ಸ್ಥಳವಾದ್ದರಿಂದ ಚಪ್ಪರ + ಕಲ್ಲು = ಚಪ್ಪರಕಲ್ಲು ಆಗಿದೆ. ಶಿಲಾವಾಚಿ ಸ್ಥಳನಾಮವಾಗಿದೆ.

ನೀರೇರಿ (ದೇ) : ಕೆರೆಯ ಹಿನ್ನೀರಿನ ಪ್ರದೇಶವಾಗಿದ್ದು ಎತ್ತರದ ಪ್ರದೇಶವಾಗಿರುವುದರಿಂದ 'ಏರಿ' ಪದ ಬಳಕೆಯಾಗಿದೆ. ನೀರು + ಏರಿ = ನೀರೇರಿ ಆಗಿದೆ. ಜಲವಾಚಿ ಸ್ಥಳನಾಮವಾಗಿದೆ.

ಮಹಿಮಪುರ (ನೆ) : ರಂಗನಾಥ ದೇವಾಲಯವಿದ್ದು, ೩೦೦ ಅಡಿ ಎತ್ತರದ ಬೆಟ್ಟವಿದೆ. ಇಲ್ಲಿ ಅನೇಕ ಮಹಿಮೆಗಳು ನಡೆದಿವೆ ಎಂದೂ, ದೇವರನ್ನು ಮಹಿಮಾರಂಗನಾಥನೆಂದು ಕರೆಯಲಾಗುತ್ತವೆ ಮಹಿಮೆಗಳು ನಡೆದ ಸ್ಥಳವಾಗಿರುವುದರಿಂದ, 'ಮಹಿಮೆಗಳ ಪುರ' ನಂತರ ಮಹಿಮಪುರವಾಗಿದೆಯೆಂಬ ಐತಿಹ್ಯವಿದೆ.

ಹೊಸಕೋಟೆ (ಹೊ) : ಸುಗಟೂರಿನ ನಾಯಕ ತಿಮ್ಮೇಗೌಡನು ೧೫೫೫ರಲ್ಲಿ ಇಲ್ಲಿ ಹೊಸದಾಗಿ ಕೋಟೆಯನ್ನು ಕಟ್ಟಿದನೆಂಬ ಐತಿಹ್ಯವಿದೆ. ಘಟಕವಾಗಿಯೂ 'ಹೊಸ' ವಿಶೇಷಣವು ವಿಶಿಷ್ಟ ಘಟಕವಾಗಿಯೂ 'ಕೋಟೆ'ಯು ವಾರ್ಗಿಕವಾಗಿಯೂ ಕಾರ್ಯನಿರ್ವಹಿಸಿದೆ.

ಉಮ್ಮಾಳು (ಹೊ) : ಉಮ್ಮ + ಹಳು (ಪಟುವ) ಉಮ್ಮಹಳು > ಉಮ್ಮಾಳು ಆಗಿರುವ ಸಾಧ್ಯತೆ. ಉಮ್ಮ – ಉಮ್ಮೆ – ಸೆಕೆ, ಉಷ್ಣ ಸೂಚಕ ಪದ, ಪಟುವ – ಕಾಡು, ಅಡವಿ, ಬಿಸಿಯಾದ ಅಥವಾ ಉಷ್ಣತೆ ಹೆಚ್ಚು ಇದ್ದ ಪ್ರದೇಶ ಎಂದು ಅರ್ಥ ನೀಡುತ್ತದೆ.

## ೪.೩ ಎರಡಕ್ಕಿಂತ ಹೆಚ್ಚು ಆಕೃತಿಮಾಗಳಿರುವ ಸ್ಥಳನಾಮಗಳು

ಸ್ಥಳನಾಮಗಳ ರಚನೆಯಲ್ಲಿ ಆಕೃತಿಮಾಗಳು ಇಷ್ಟೆ ಇರಬೇಕೆಂಬ ನಿರ್ಬಂಧವಿಲ್ಲದಿರುವುದರಿಂದ, ಕೆಲವೊಮ್ಮೆ ಹೆಚ್ಚು ಆಕೃತಿಮಾಗಳನ್ನು ಹೊಂದಿರುತ್ತವೆ. ವ್ಯಕ್ತಿನಾಮಗಳಲ್ಲಿ ಹೆಚ್ಚಿನ ಆಕೃತಿಮಾಗಳಿದ್ದಲ್ಲಿ ಅವು, ಮಾನವನ ನಾಗರೀಕತೆ ಬೆಳೆದಂತೆ ನಿಷ್ಪನ್ನವಾಗಿರುವುದು ಎಂಬ ಆಲೋಚನೆಯಂತೆ, ಬಹು ಆಕೃತಿಮಾ ಹೊಂದಿರುವ ಸ್ಥಳನಾಮಗಳು ಕಾಲ ಮಾನದ ದೃಷ್ಟಿಯಿಂದ ಅರ್ವಾಚೀನವಾದವುಗಳು ಎಂದು ನಿರ್ಧರಿಸಬಹುದಾಗಿದೆ.

ಸ್ಥಳನಾಮಗಳಲ್ಲಿ ಹೆಚ್ಚಿನ ಆಕೃತಿಮಾಗಳ ಬಳಕೆಗೆ ಕಾರಣವೆಂದರೆ ಜನಸಂಖ್ಯೆ ಅಧಿಕ ಹಾಗೂ ಜನರು ಒಂದು ಸ್ಥಳದಿಂದ ಮತ್ತೊಂದು ಸ್ಥಳದಲ್ಲಿ ವಲಸೆ ಬಂದು ನೆಲೆಸುತ್ತಿದ್ದುದು. ಇದರ ಜೊತೆಯಲ್ಲಿ ಮಾನವನಲ್ಲಿ ಉಂಟಾದ ಜ್ಞಾನದ ವೈಶಾಲ್ಯತೆ, ಭೌಗೋಳಿಕ ತಿಳುವಳಿಕೆಗಳು, ಭಾಷೆಯಲ್ಲಿನ ಹೊಸ ಪದಗಳ ಅವಿಷ್ಕಾರಗಳು ಹೆಚ್ಚು ಆಕೃತಿಮಾಗಳು ಸೇರುವುದಕ್ಕೆ ಕಾರಣವಾಗಿರುವ ಸಾಧ್ಯತೆ ಇದೆ.[೮]

ಒಂದೇ ಹೆಸರಿನ ಊರು ಇದ್ದಲ್ಲಿ, ಘಟನೆಗಳ ವಿವರ ಹೆಚ್ಚಿದ್ದಲ್ಲಿ, ವಿಶೇಷಣಗಳು ಸೇರಿದ್ದಲ್ಲಿ, ದೈವವಾಚಿ ಹಾಗೂ ವ್ಯಕ್ತಿವಾಚಿಗಳಲ್ಲಿರುವ ಆಕೃತಿಮಾಗಳು ಒಟ್ಟಿಗೆ ಸೇರಿದಲ್ಲಿ, ಬಹು ಆಕೃತಿಮಾಗಳ ಬಳಕೆ ಹೆಚ್ಚಾಗಿರುತ್ತದೆ. ಬಹು ಆಕೃತಿಮಾಗಳ ಬಳಕೆಗೆ ನಿರ್ದಿಷ್ಟವಾದ, ಪ್ರಜ್ಞಾಪೂರ್ವಕ ಉದ್ದೇಶಗಳನ್ನು ಹೊಂದಿರುವ ಸಂದರ್ಭವಿಲ್ಲ. ಯಾದೃಚ್ಛಿಕ ಸ್ಥಳನಾಮಗಳಲ್ಲಿ ಇದನ್ನು ಹೆಚ್ಚಾಗಿ ಗುರುತಿಸಬಹುದಾಗಿದ್ದು, ಇವುಗಳು ಅನ್ವರ್ಥನಾಮಗಳಾಗಿರುವ ಸಾಧ್ಯತೆ ಇಲ್ಲ.

ಈ ಸ್ಥಳನಾಮಗಳಲ್ಲಿ ಮೊದಲಿನ ಆಕೃತಿಮಾಗಳು 'ವಿಶಿಷ್ಟ'ವಾಗಿದ್ದು ಕೊನೆಯ ಘಟಕ ಸಾಮಾನ್ಯವಾರ್ಗಿಕವಾಗಿ ಕಾರ್ಯ ನಿರ್ವಹಿಸುತ್ತಿರುತ್ತದೆ. ಬಹು ಆಕೃತಿಮಾ ಸ್ಥಳನಾಮಗಳು ಗಾತ್ರದಲ್ಲಿ ದೊಡ್ಡದಾದ ಅಥವಾ ಪ್ರಧಾನವಾದ ಊರಿನ ಸಂಬಂಧವನ್ನು ಸೂಚಿಸುವ, ಅದಕ್ಕೆ ಸಮೀಪದ ಸಣ್ಣ ಊರನ್ನು ಗುರುತಿಸುವ ಉದ್ದೇಶವನ್ನು ಇಂತಹ ಸ್ಥಳನಾಮಗಳು ಹೊಂದಿರುತ್ತವೆ.[೯] ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬಹು ಆಕೃತಿಮಾ ಹೊಂದಿರುವ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ.

### ಎರಡಕ್ಕಿಂತಲೂ ಹೆಚ್ಚು ಘಟಕಗಳಿಗಿರುವ ಸ್ಥಳನಾಮಗಳು

ಕೂತು + ಕೊಂಡ + ಹಳ್ಳಿ = ಕೂತುಗೊಂಡ ಹಳ್ಳಿ – ಕ

ಕೆರಳು + ಆಳ್ + ಸಂದ್ರ = ಕೆರಳಾಳುಸಂದ್ರ – ಕ

ಚೀಲನ +ಕೆರೆ+ ಕಾವಲು = ಚೀಲನಕೆರೆ ಕಾವಲು - ಕ

ಮಾರ+ ದೇವನ+ ಹಳ್ಳಿ = ಮಾರದೇವನಹಳ್ಳಿ - ಕ

ಹಾರುವ +ಶಿವನ+ ಹಳ್ಳಿ = ಹಾರೋಶಿವನಹಳ್ಳಿ - ಕ

ಎಲೆ+ ತೋಟದ+ ಹಳ್ಳಿ = ಎಲೆತೋಟದ ಹಳ್ಳಿ - ಕ

ಕಾಡು+ ಕೊತ್ತನ+ ಹಳ್ಳಿ = ಕಾಡುಕೊತ್ತನಹಳ್ಳಿ - ಚ

ರಾಮ+ ನರ+ ಸಿಂಹ+ ಪುರ = ರಾಮನರಸಿಂಹಪುರ - ಚ

ಹಾರುವ +ಹಳ್ಳಿ+ ದೊಡ್ಡಿ = ಹಾರೋಹಳ್ಳಿ ದೊಡ್ಡಿ - ಚ

ಹೊನ್ನ +ನಾಯಕನ +ಹಳ್ಳಿ = ಹೊನ್ನಾಯನಕಹಳ್ಳಿ - ಚ

ಸಿಂಗ +ರಾಜ+ ಪುರ = ಸಿಂಗರಾಜಪುರ - ಚ

ಕವಡ +ದಾಸನ+ ಹಳ್ಳಿ = ಕವಡದಾಸನಹಳ್ಳಿ - ದೇ

ಕೆಂಪ +ಲಿಂಗನ +ಪುರ = ಕೆಂಪಲಿಂಗನಪುರ - ದೇ

ಮಂಚಪ್ಪನ +ಹೊಸ+ ಹಳ್ಳಿ = ಮಂಚಪ್ಪನ ಹೊಸಹಳ್ಳಿ - ದೇ

ವಂಕಟ+ ಗಿರಿ+ ಕೋಟೆ = ವೆಂಕಟಗಿರಿಕೋಟೆ - ದೇ

ಹೂವಿನ +ನಾಯಕನ+ ಹಳ್ಳಿ = ಹೂವಿನನಾಯಕನಹಳ್ಳಿ - ದೇ

ಕೆಳಗಿನ +ಜೂಗನ+ ಹಳ್ಳಿ = ಕೆಳಗಿನ ಜೂಗನಹಳ್ಳಿ - ದೊ

ಜಾವ +ಕೊಂಡನ+ ಹಳ್ಳಿ = ಜಾವಗೊಂಡನಹಳ್ಳಿ - ದೊ

ದೊಡ್ಡ +ಬಳ್ಳಾ+ ಪುರ = ದೊಡ್ಡಬಳ್ಳಾಪುರ - ದೊ

ಮಧುರನ +ಹೊಸ+ ಹಳ್ಳಿ = ಮಧುರನ ಹೊಸಹಳ್ಳಿ - ದೊ

ಆರೆ +ಬೊಮ್ಮನ+ ಹಳ್ಳಿ = ಆರೆಬೊಮ್ಮನಹಳ್ಳಿ - ನೆ

ಮಾದ+ ನಾಯಕನ +ಹಟ್ಟಿ = ಮಾದನಾಯಕನಹಟ್ಟಿ - ನೆ

ಹಾಲು +ರಾಮ+ ಪುರ = ಹಾಲುರಾಮಪುರ - ನೆ

ಹಾರೊ +ಕ್ಯಾತನ+ ಹಳ್ಳಿ = ಹಾರೋಕ್ಯಾತನಹಳ್ಳಿ - ನೆ

ಕಲ್ಯಾಣ +ವಡೇರ+ ಮಠ = ಕಲ್ಯಾಣ ವಡೇರ ಮಠ - ಮಾ

ಚೋಳ+ ನಾಯಕನ +ಹಳ್ಳಿ = ಚೋಳನಾಯಕನಹಳ್ಳಿ - ಮಾ

ಮಲ್ಲಿಕ+ ಅರ್ಜುನ+ ಪಾಳ್ಯ = ಮಲ್ಲಿಕಾರ್ಜುನಪಾಳ್ಯ - ಮಾ

ಶಂಭು+ ದೇವನ+ ಹಳ್ಳಿ = ಶಂಭುದೇವನಹಳ್ಳಿ - ಮಾ

ಕಂಚು+ ಕಾರನ+ ಹಳ್ಳಿ = ಕಂಚುಗಾರನಹಳ್ಳಿ ಕಾವಲು - ರಾ

ಕುರುಬರ +ಕಾರೇನ+ಹಳ್ಳಿ = ಕುರುಬರಕಾರೇನಹಳ್ಳಿ - ರಾ

ಮಂಚ +ನಾಯಕನ +ಹಳ್ಳಿ = ಮಂಚನಾಯಕನಹಳ್ಳಿ - ರಾ

ಲಕ್ಕ+ಓಜನ +ಹಳ್ಳಿ = ಲಕ್ಕೋಜನಹಳ್ಳಿ - ರಾ

ಹುಲಿ+ಕೆರೆಗನ +ಊರು = ಹುಲಿಕೆರೆಗನ್ನೂರು - ರಾ

ಕಾಶೀ+ಪುರದ+ಕಂಬದ+ಬೀಡು = ಕಾಶೀಪುರದ ಕಂಬದಬೀಡು - ಹೊ

ಚಿನ್ನ+ತಿಮ್ಮನ +ಗೊಲ್ಲ +ಹಳ್ಳಿ = ಚಿನ್ನತಿಮ್ಮನಗೊಲ್ಲಹಳ್ಳಿ - ಹೊ

ಯಲಚ+ನಾಯಕನ +ಪುರ = ಯಲಚನಾಯಕನಪುರ - ಹೊ

ಲಿಂಗ +ಧೀರ +ಮಲ್ಲ+ಸಂದ್ರ = ಲಿಂಗಧೀರ ಮಲ್ಲಸಂದ್ರ - ಹೊ

ಹಲಸಿನ +ಕಾಯಿ +ಪುರ = ಹಲಸಿನಕಾಯಿ ಪುರ - ಹೊ

ಸೋಮ +ಸೆಟ್ಟಿ +ಹಳ್ಳಿ = ಸೋಮಸೆಟ್ಟಿಹಳ್ಳಿ -ದೊ

ದೇವರಕಗ್ಗಲಹಳ್ಳಿ (ಕ) : ದೈವವಾಚಿ ಹಾಗೂ ಶಿಲಾವಾಚಿ ಸೂಚಕ ಸ್ಥಳನಾಮವಾಗಿದೆ. ಇಲ್ಲಿ ಮೂರು 'ವಿಶಿಷ್ಟಗಳು ಹಾಗೂ ಒಂದು ಸಾಮಾನ್ಯ ವಾರ್ಗಿಕ ಹೊಂದಿದ್ದು ಒಟ್ಟು ನಾಲ್ಕು ಆಕೃತಿಮಾಗಳಿವೆ. ದೇವರು + ಕಪ್ಪು +ಕಲ್ಲು + ಹಳ್ಳಿ ಎಂಬ ನಾಲ್ಕು ಆಕೃತಿಮಾ ಇವೆ. ಮಾರಮ್ಮ ದೇವರ ದೇವಾಲಯವಿದ್ದು ಕಪ್ಪನೆಯ, ಸಮತಟ್ಟಾದ ಬಂಡೆಯ ಮೇಲೆ ಊರು ಇದೆ.

ದೇವರು +ಕಪ್ಪು +ಕಲ್ಲು +ಹಳ್ಳಿ > ದೇವರ +ಕಪ್ಪ +ಕಲ್ಲು +ಹಳ್ಳಿ > ದೇವರ ಕಗ್ಗಲ್ಲುಹಳ್ಳಿ ದೇವರಕಗ್ಗಲಹಳ್ಳಿ ಆಗಿದೆ.

ಜಕ್ಕಸಂದ್ರ ಕಾಡು (ಕ) : ಜಕ್ಕ - ವ್ಯಕ್ತಿವಾಚಿ, ಸಂದ್ರ > ಸಮುದ್ರ ಜಲವಾಚಿ ಪದ. 'ಮ್' ಉಭಯೋಷ್ಠ್ಯ 'ಮ್'ಕಾರವು ಮುಂದಿನ ದಂತ್ಯ 'ನ್'ಕಾರವಾಗಿ ಪರಿವರ್ತಿತವಾಗಿದೆ. ೧೪-೧೫ ನೇ ಶತಮಾನದಲ್ಲಿ ಬದಲಾವಣೆ ಆಗಿರಬಹುದೆಂಬ ಅಭಿಪ್ರಾಯವಿದೆ.[೧೦]

ಜಲವಾಚಿ ಕಾಡು > ಸಸ್ಯವಾಚಿ ಸೂಚಕ ಪದ. ಜಕ್ಕ ಊರಿನ ಪ್ರಮುಖವ್ಯಕ್ತಿಯಾಗಿದ್ದು ಊರಿನ ಸುತ್ತಲು ಮೂರು ಕೆರೆಗಳಿವೆ. ಆದ್ದರಿಂದ 'ಸಂದ್ರ' ವಾರ್ಗಿಕ ಸೇರಿದ್ದು ಬನ್ನೇರುಘಟ್ಟದ ಕಾಡು ಈ ಭಾಗದಲ್ಲಿ ವ್ಯಾಪಿಸಿರುವುದರಿಂದ 'ಕಾಡು' ಆಕೃತಿಮಾ ಇದೆ. ಜಕ್ಕ + ಸಂದ್ರ + ಕಾಡು = ಜಕ್ಕಸಂದ್ರಕಾಡು ಆಗಿದೆ.

ಎಲೆತೋಟದ ಹಳ್ಳಿ (ಚ) : ಎಲೆ +ತೋಟ +ಅ +ಹಳ್ಳಿ

ಕ್ಷೇತ್ರವಾಚಕ, ಕೃಷಿ ಭೂಮಿಸೂಚಕ ಹಾಗೂ ವೃಕ್ಷವಾಚಿ ವಿಶಿಷ್ಟ. 'ಅ' (ಷಷ್ಠಿ ವಿಭಕ್ತಿ) ಸಂಬಂಧ ಕಾರಕ ಪ್ರತ್ಯಯ ಬಳಕೆ. ಎಲೆ ವೃಕ್ಷವಾಚಿ, ತೋಟ - ಕ್ಷೇತ್ರವಾಚಿ, ಹಳ್ಳಿ - ವಾರ್ಗಿಕವಾಗಿದೆ.

ನೀಲಕಂಠನ ಹಳ್ಳಿ (ಚ) : ನೀಲಕಂಠ + ಅ + ಹಳ್ಳಿ

ಶಿವನ ಹೆಸರು ಸೂಚಿಸುವ ವ್ಯಕ್ತಿನಾಮವಾಗಿದ್ದು, ಷಷ್ಠಿ ವಿಭಕ್ತಿ ಪ್ರತ್ಯಯ 'ಅ' ಸಂಬಂಧ ಕಾರಕ ಅವ್ಯಯ ಹಾಗೂ 'ಹಳ್ಳಿ' ವಾರ್ಗಿಕ ಬಳಕೆಯಾಗಿದೆ. 'ಅ' ಸಂಬಂಧಕಾರಕ ಅವ್ಯಯ ಬಂದಲ್ಲಿ ಸಾಮಾನ್ಯವಾಗಿ ವ್ಯಕ್ತಿವಾಚಿಯಾಗುವ ಸಾಧ್ಯತೆ ಇರುತ್ತದೆ.

ಸಿಂಗಾಬೋಯಿದೊಡ್ಡಿ (ರಾ) : ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಪಾಲಾಬೋಯಿ ದೊಡ್ಡಿ (ರಾ) ಅರ್ಕಾವತಿ
ಪಾಲಾಬೋಯಿ ದೊಡ್ಡಿ

ನದಿಯಲ್ಲಿ ಅಂಟಿಗರ ವೃತ್ತಿ ಮಾಡುತ್ತಿದ್ದ ಬೋಯಿ ಜನಾಂಗ ಸೂಚಕ ಸ್ಥಳನಾಮ. ಕೆಂಪೇಗೌಡನ ಕಾಲದಲ್ಲಿ ಪಲ್ಲಕ್ಕಿ ಹೊರುವ ಕಾಯಕ ಮಾಡುತ್ತಿದ್ದ 'ಸಿಂಗಾಬೋಯಿ' ಹಾಗೂ 'ಪಾಲಾಬೋಯಿ' ಅತ್ಯಂತ ಪ್ರಮುಖರಾದ್ದರಿಂದ ಈ ವ್ಯಕ್ತಿವಾಚಿ ಮತ್ತು ಜನಾಂಗ ಸೂಚಿ ಸ್ಥಳನಾಮ ನಿಷ್ಪನ್ನವಾಗಿದೆ. 'ದೊಡ್ಡಿ'- ಪದವು ಮಧ್ಯೆ ಛಾವಣಿ ಇರದ ವಸತಿ ಸೂಚಕ ಪ್ರದೇಶ. ಪ್ರಾಣಿಗಳ ವಾಸದ ಸ್ಥಳ. ಪ್ರಾಣಿಗಳನ್ನು ಒಂದು ನಿರ್ದಿಷ್ಟಸ್ಥಳದಲ್ಲಿ ಕೂಡಿ ಹಾಕುತ್ತಿದ್ದ ಸ್ಥಳ.

ಮಜ್ಜಿಗೆ ಹೊಸ ಹಳ್ಳಿ (ದೇ) : ಕೆಂಪತಿಮ್ಮನಹಳ್ಳಿಯಲ್ಲಿ ಪ್ಲೇಗ್ ರೋಗ ಬಂದ ಸಂದರ್ಭದಲ್ಲಿ ಇಡೀ ಊರೇ ಸ್ಥಳಾಂತರಗೊಂಡು ಹೊಸ ಸ್ಥಳದಲ್ಲಿ ನೆಲೆಸಿತು. ಹೊಸ ನೆಲೆಗೆ 'ಹೊಸಹಳ್ಳಿ' ಎಂಬ ಹೆಸರು ಬಂದಿದೆ. ಇಲ್ಲಿನ ಪ್ರದೇಶಕ್ಕೆ ಹೊಂದಿಕೊಂಡಿದ್ದ ಮಿಲಿಟರಿಕ್ಯಾಂಪ್‌ಗೆ 'ಮಜ್ಜಿಗೆ' ಯನ್ನು ಸರಬರಾಜು ಮಾಡುತ್ತಿದ್ದರಿಂದ ಹೊಸಹಳ್ಳಿಗೆ 'ಮಜ್ಜಿಗೆ' ಎಂಬ ವಿಶೇಷಣವು ಪೂರ್ವಪದವಾಗಿ ಸೇರಿ ಮಜ್ಜಿಗೆ + ಹೊಸ + ಹಳ್ಳಿ - ಆಗಿದೆ. 'ಮಜ್ಜಿಗೆ' 'ಹೊಸ' ಆಕೃತಿಮಾಗಳು ವಿಶಿಷ್ಟವಾಗಿಯೂ, 'ಹಳ್ಳಿ' ವಾರ್ಗಿಕವಾಗಿಯೂ ಕಾರ್ಯ ನಿರ್ವಹಿಸಿದೆ.

ಮೂಡಿಗಾನಹಳ್ಳಿ (ದೇ) : 'ಎರ್ರಪ್ಪನ ಹಳ್ಳಿ' ಎಂಬ ಊರಿನಿಂದ ಸ್ಥಳಾಂತರಗೊಂಡ ಜನ ಈ ಸ್ಥಳದಲ್ಲಿ ನೆಲೆಸಿದ್ದು 'ಎರ್ರಪ್ಪನಹಳ್ಳಿ' ಈಗ ನಿರ್ವಸಿತ ಪ್ರದೇಶವಾಗಿದೆ. ಪಕ್ಕದಲ್ಲಿರುವ ದಿಬ್ಬಗಿರಿ ಬೆಟ್ಟದಲ್ಲಿ ಹುಣ್ಣಿಮೆಯ ರಾತ್ರಿ, ಗಾನ ಮಾಡಿಕೊಂಡು ಋಷಿಮುನಿಗಳು ಸುತ್ತುತ್ತಿದ್ದರೆಂಬ ಐತಿಹ್ಯವಿದೆ. ಗಾನವು ಮೂಡಿ ಬಂದದ್ದರಿಂದ, ಮೂಡಿದ - ಗಾನ - ಹಳ್ಳಿ ಆಗಿದೆ. ಮೂಡಿ < ಮೂಡು ಧಾತುವಿನಿಂದ ಸೃಷ್ಟಿಯಾಗಿದೆ. ಗಾನ - ಕ್ರಿಯಾಪದ, 'ಹಳ್ಳಿ' ವಾರ್ಗಿಕವಾಗಿದೆ.

ಪುಟ್ಟಯ್ಯನಅಗ್ರಹಾರ (ದೊ) : 'ಅಗ್ರಹಾರ' ಬ್ರಾಹ್ಮಣ ಸೂಚಕ ಜಾತಿವಾಚಿ ಸ್ಥಳನಾಮವಾಗಿದ್ದು 'ಪುಟ್ಟಯ್ಯ' ವ್ಯಕ್ತಿ ನಾಮಸೂಚಿಯಾಗಿದ್ದು, 'ಅ' ವಿಭಕ್ತಿ ಪ್ರತ್ಯಯ ಸೇರಿ ಪುಟ್ಟಯ್ಯನ ಅಗ್ರಹಾರ ಆಗಿದೆ. ಇತರ ಅಗ್ರಹಾರಗಳಿಗಿಂತ ಪ್ರತ್ಯೇಕವಾಗಿಸಿಕೊಳ್ಳಲು, ಊರಿನ ಮುಖ್ಯವ್ಯಕ್ತಿಯ ಹೆಸರನ್ನು ಪೂರ್ವಘಟಕವಾಗಿ ಹೊಂದಿದೆ. ಶ್ರೇಷ್ಠ ಹಾರುವರು ಎಂಬ ಅರ್ಥ ಬರುವ

ಅಗ್ರ + ಹಾರುವ < ಅಗ್ರಹಾರುವ < ಅಗ್ರಹಾರ ಆಗಿದೆ. ಚೋಳರ ಕಾಲದಲ್ಲಿ ಅಗ್ರಹಾರಗಳನ್ನು 'ಚತುರ್ವೇದಿಮಂಗಲ' ಎಂದು ಕರೆಯುತ್ತಿದ್ದರು.[೨೦]

ಸೋಮಶೆಟ್ಟಿಹಳ್ಳಿ (ದೊ) : 'ಸೋಮಶೆಟ್ಟಿ' ಎಂಬ ಹೆಸರಿನ ವ್ಯಕ್ತಿ ನಾಮವಾಚಿ ಸ್ಥಳನಾಮವಾಗಿದೆ. 'ಹಳ್ಳಿ' ಸಾಮಾನ್ಯ ವಾರ್ಗಿಕ ವಾಗಿದೆ. ಜನರ ಉಚ್ಚಾರಣೆಯಲ್ಲಿ ಸೋಷ್ಟಹಳ್ಳಿ < ಸೋಷ್ಟಳ್ಳಿ ಆಗಿದೆ.

ಹಲಸಿನಕಾಯಿಪುರ : ಹಲಸಿನ + ಕಾಯಿ + ಪುರ; ಹಲಸಿನಕಾಯಿ - ವಿಶಿಷ್ಟ, ಹಾಗೂ ಫಲಸೂಚಕ ಪದವಾಗಿದೆ. ಪುರ - ಸಾಮಾನ್ಯ ವಾರ್ಗಿಕ, ಹಲಸಿನಗಿಡಗಳು ಹೆಚ್ಚಾಗಿದ್ದ ಪ್ರದೇಶವೆಂಬುದು ವ್ಯಕ್ತವಾಗುತ್ತದೆ.

ನಾಗನಾಯಕನ ಕೋಟೆ : ನಾಗನಾಯಕ - ವ್ಯಕ್ತಿನಾಮವಾಚಿ ನಾಗ - ವಿಶಿಷ್ಟ ನಾಯಕ - ಜಾತಿವಾಚಿ, ಕೋಟೆ - ಸಾಮಾನ್ಯವಾರ್ಗಿಕ, ನಿರ್ಮಾಣ ವಾಚಿ 'ಅ' ಷಷ್ಠಿ ವಿಭಕ್ತಿ ಪ್ರತ್ಯಯ ಬಳಕೆ.

ದೊಡ್ಡಸೋಮನಹಳ್ಳಿ : ದೊಡ್ಡ + ಸೋಮ + ಅ+ ಹಳ್ಳಿ, ದೊಡ್ಡ - ಪರಿಮಾಣವಾಚಿ ವಿಶೇಷಣ, ಸೋಮ - ವ್ಯಕ್ತಿವಾಚಿ, 'ಅ' - ಷಷ್ಠಿ ಪ್ರತ್ಯಯ (ಸಂಬಂಧಕಾರಕ) ಹಳ್ಳಿ - ವಾರ್ಗಿಕ. ದೊಡ್ಡ ಸೋಮ - ವಿಶಿಷ್ಟ

ಅಣ್ಣೇಕಾರನಹಳ್ಳಿ (ಮಾ) : ಅಣಿಕಾರ < ಅಣ್ಣಕಾರ < ಅಣ್ಣೇಕಾರ ಆಗಿರುವ ಸಾಧ್ಯತೆ ಇದೆ. ಅಣಿಕಾರ > ಅಣಗಾರ = ಮುಖಂಡ, ವಿವೇಕಿ, ಬುದ್ಧಿವಂತ ತಮ್ಮ ನಾಯಕ ನೆಲೆಸಿರುವ ಊರು ಎಂಬ ಅರ್ಥ ನೀಡುತ್ತದೆ . ಅಣ್ಣೇಕಾರ - ವಿಶಿಷ್ಟ, ಹಳ್ಳಿ - ವಾರ್ಗಿಕ, 'ಅ' - ಷಷ್ಠಿ - ಸಂಬಂಧಕಾರಕ ಅವ್ಯಯ ಸೇರಿದೆ.

ಮೀಕರಾಜನ ಬೆಟ್ಟ (ನೆ) : 'ಮೀಕರಾಜ' - ಎಂಬ ದೊರೆ (ಪಾಳೆಯಗಾರ ಇರಬಹುದು) ವಾಸಿಸುತ್ತಿದ್ದು ಪ್ರದೇಶವಾದ್ದರಿಂದ 'ಮೀಕರಾಜ' ಎಂಬ ವಿಶಿಷ್ಟವು ವ್ಯಕ್ತಿನಾಮಸೂಚಿ ಸ್ಥಳನಾಮವಾಗಿದೆ. 'ಬೆಟ್ಟ' ಘಟಕವು ಸಾಮಾನ್ಯ ವಾರ್ಗಿಕವಾಗಿದೆ. ಮೀಕರಾಜ + ಬೆಟ್ಟ = ಮೀಕರಾಜನ ಬೆಟ್ಟ - ಇಲ್ಲಿನ ವಿಶಿಷ್ಟ ಹಾಗೂ ವಾರ್ಗಿಕದ ನಡುವೆ ವಿಶಿಷ್ಟ ಅಂತ್ಯದಲ್ಲಿ 'ಅ' - ವಿಭಕ್ತಿ ಪ್ರತ್ಯಯ ಸೇರಿದೆ.

ವರನಾಯಕನ ಹಳ್ಳಿ (ನೆ) : ವರನಾಯಕ - ವಿಶಿಷ್ಟ ಘಟಕ, ವ್ಯಕ್ತಿನಾಮವಾಚಿ, 'ಅ' - ವಿಭಕ್ತಿ ಪ್ರತ್ಯಯ ವಿಶಿಷ್ಟದ ಅಂತ್ಯದಲ್ಲಿ ಸೇರಿದೆ. 'ಹಳ್ಳಿ' ಸಾಮಾನ್ಯ ವಾರ್ಗಿಕವಾಗಿದೆ. (ವರನಾಯಕ - ಪಾಳೆಯಗಾರನಾಗಿದ್ದಾನೆ)

ಎರಡಕ್ಕಿಂತ ಹೆಚ್ಚು ಆಕೃತಿಮಾ ಹೊಂದಿರುವ ಹೆಚ್ಚು ಸ್ಥಳನಾಮಗಳಲ್ಲಿ ವ್ಯಕ್ತಿನಾಮವಾಚಿ, ದೈವನಾಮವಾಚಿ ಅಂಶಗಳನ್ನು ವಿಶಿಷ್ಟವಾಗಿ ಹೊಂದಿರುವುದು ವಿಶೇಷವಾಗಿದೆ. ಇತರೇ ಅಂಶಗಳು ಇರುವ ಸ್ಥಳನಾಮಗಳು ಇದ್ದರೂ. ಪ್ರಮಾಣದಲ್ಲಿ ಕಡಿಮೆಯಾಗಿದೆ

## ೪.೪ ವಾರ್ಗಿಕಗಳು (ಸಾಮಾನ್ಯಾಂಶ) ನಿರ್ದಿಷ್ಟವಾಗಿ ಬಳಕೆಯಾಗಿರುವ ಸ್ಥಳನಾಮಗಳು

'ನಿರ್ದಿಷ್ಟವು ಸ್ಥಳನಾಮಗಳ ಪೂರ್ವಪದವಾಗಿದ್ದು ಯಾವುದಾದರೂ ವಿಶೇಷ ಅಂಶವನ್ನು ಸೂಚಿಸುತ್ತವೆ. ನಿರ್ದಿಷ್ಟದ ಜೊತೆ ಉತ್ತರಪದವಾಗಿ ವಾರ್ಗಿಕಗಳು ಸೇರಿರುತ್ತವೆ. ವಾರ್ಗಿಕಗಳು ಊರಿನ ಪ್ರಮಾಣ, ಸ್ವರೂಪವನ್ನು ಸೂಚಿಸುತ್ತವೆ. ವಾರ್ಗಿಕವೆಂದು ಗುರುತಿಸುವ ಆಕೃತಿಮಾಗಳು ಪೂರ್ವಪದವಾಗಿ ಬಂದಲ್ಲಿ, ಅದೇ ನಿರ್ದಿಷ್ಟವಾಗಿ ಕಾರ್ಯ ನಿರ್ವಹಿಸುತ್ತದೆ. ಇಂತಹ ಸಂದರ್ಭದಲ್ಲಿ ವಾರ್ಗಿಕಗಳು ಸ್ವತಂತ್ರ್ಯ ಆಕೃತಿಮಾವಾಗಿ ಬಳಕೆಯಾಗಿರುತ್ತದೆ. ವಾರ್ಗಿಕಗಳು ಪೂರ್ವಪದದಲ್ಲಿ ಬಳಕೆಯಾದಲ್ಲಿ ನಿರ್ದಿಷ್ಟ ಆಕೃತಿಮಾವಾಗಿ ಕಾರ್ಯನಿರ್ವಹಿಸುವುದು ವಿಶೇಷವಾಗಿದೆ. ಇಂತಹ ಸ್ಥಳನಾಮಗಳಲ್ಲಿ ಉತ್ತರಪದವೂ ವಾರ್ಗಿಕವೇ ಆಗಿರುವುದರಿಂದ, ಇವುಗಳು ದ್ವಂದ್ವವಾರ್ಗಿಕ ಆಕೃತಿಮಾಗಳಾಗಿರುತ್ತವೆ. ಆ ಊರಿನ ಪರಿಸರದಲ್ಲಿ ಯಾವ ವಾರ್ಗಿಕ ಆಕೃತಿಮಾ ಹೆಚ್ಚು ಸೂಕ್ತವಾಗುತ್ತದೆಯೋ ಅದೇ ಪೂರ್ವಪದವಾಗುತ್ತದೆ. ಒಂದೇ ಆಕೃತಿಮಾ ಸ್ಥಳನಾಮಗಳಲ್ಲಿ ವಾರ್ಗಿಕವೊಂದೇ ಬಂದು, ಆ ವಾರ್ಗಿಕವೇ ನಿರ್ದಿಷ್ಟವಾಗಿ ಕಾರ್ಯ ನಿರ್ವಹಿಸುತ್ತದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಾಮಾನ್ಯಾಂಶ (ವಾರ್ಗಿಕ) ಆಕೃತಿಮಾಗಳು, ನಿರ್ದಿಷ್ಟ ಆಕೃತಿಮಾವಾಗಿ ಬಳಕೆಯಾಗಿರುವ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ.

### ವಾರ್ಗಿಕವೇ ನಿರ್ದಿಷ್ಟವಾಗಿರುವ ಸ್ಥಳನಾಮಗಳು

| | | | | | |
|---|---|---|---|---|---|
| ತೋಟಹಳ್ಳಿ | - | ಕ | ಕಲ್ಲೂರು | - | ಮಾ |
| ಕೋಟೆಕೊಪ್ಪ | - | ಕ | ಕಲ್ಕೆರೆ | - | ಮಾ |
| ಕಾಡಹಳ್ಳಿ | - | ಕ | ಕೋಡಿಪಾಳ್ಯ | - | ಮಾ |
| ಕಣವೇಕಟ್ಟೆ | - | ಕ | ಪುರದಪಾಳ್ಯ | - | ಮಾ |
| ಎಲೆತೋಟದಹಳ್ಳಿ | - | ಚ | ಬೆಟ್ಟಹಳ್ಳಿ | - | ಮಾ |
| ಕಲ್ಲಾಪುರ | - | ಚ | ಹಳ್ಳಿಮಾಳ | - | ರಾ |
| ಕೋಡಿಪುರ | - | ಚ | ಕುತಾರಬಾವಿ | - | ರಾ |
| ಕೋಡುಗುರ್ಕಿ | - | ದೇ | ಹಳ್ಳಿಮಾಳ | - | ರಾ |
| ಗುಟ್ಟಹಳ್ಳಿ | - | ದೇ | ಕಲ್ಲಹಳ್ಳಿ | - | ಹೊ |
| ಬೆಟ್ಟಕೋಟೆ | - | ದೇ | ಗುಟ್ಟಹಳ್ಳಿ | - | ಹೊ |
| ಕಲ್ಲುಕೋಟೆ | - | ದೇ | ಬನಹಳ್ಳಿ | - | ಹೊ |
| ಕಾಡನೂರು | - | ದೊ | ಬಂಡಾಪುರ | - | ಹೊ |
| ದರ್ಗಾಪುರ | - | ದೊ | ಬೀದಿಕೆರೆ | - | ದೊ |
| ಬನವಟ್ಟಿ | - | ದೊ | ಕೋಡಿಪಾಳ್ಯ | - | ನೆ |
| ಕೋಡಿಹಳ್ಳಿ | - | ನೆ | ತೋಟಗೆರೆ | - | ನೆ |
| ತೋಟನಹಳ್ಳಿ | - | ನೆ | | | |

**ಮಾದರಿ ಸ್ಥಳನಾಮಗಳ ವಿಶ್ಲೇಷಣೆ**

**ಗುಟ್ಟಹಳ್ಳಿ (ದೇ)** ಗುಡ್ಡ < ಗುಟ್ಟ - ಎತ್ತರದ ಪ್ರದೇಶ, ಎತ್ತರದ ಪ್ರದೇಶದಲ್ಲಿ ಇರುವುದರಿಂದ 'ಗುಟ್ಟದ ಮೇಲಿನ ಹಳ್ಳಿ - 'ಗುಟ್ಟಹಳ್ಳಿ' ಆಗಿದೆ.

**ಬೆಟ್ಟಕೋಟೆ (ದೇ)** : ಬೆಟ್ಟ - ನಿರ್ದಿಷ್ಟ, ಕೋಟೆ - ವಾರ್ಗಿಕ, ಬೆಟ್ಟ - ಭೌಗೋಳಿಕ ಲಕ್ಷಣ ಸೂಚಕ ಆಕೃತಿಮಾ (ವ್ಯಕ್ತಿನಾಮವೂ ಆಗಿರುವ ಸಾಧ್ಯತೆ ಇದೆ)

**ಕಲ್ಲುಕೋಟೆ (ದೊ)** : ಕಲ್ಲು - ನಿರ್ದಿಷ್ಟ, ಕೋಟೆ - ವಾರ್ಗಿಕ, ಕಲ್ಲಿನಿಂದ ಕಟ್ಟಿರುವ ಕೋಟೆ - ಕಲ್ಲುಕೋಟೆ 'ಕಲ್ಲು' - ಉತ್ತರ ಪದವಾಗಿರುವುದರಿಂದ 'ನಿರ್ದಿಷ್ಟ'ವಾಗಿ ಕಾರ್ಯನಿರ್ವಹಿಸುತ್ತದೆ.

**ಬನವಟ್ಟಿ(ದೊ)** : ಬನ < ವನ - ನಿರ್ದಿಷ್ಟ, ಅಟ್ಟಿ < ಹಟ್ಟಿ - ವಾರ್ಗಿಕ
ಕಾಡಿನ ಪ್ರದೇಶದಲ್ಲಿರುವ ಹಟ್ಟಿ - (ಮಾನವನ ಪೂರ್ವದ ನೆಲೆ)

**ಕೋಡಿ ಹಳ್ಳಿ (ನೆ)** : ಕೋಡಿ - ನಿರ್ದಿಷ್ಟ, ಹಳ್ಳಿ - ವಾರ್ಗಿಕ, ಕೋಡಿ - ಪೂರ್ವಪದದಲ್ಲಿ ಬಂದಾಗ ನಿರ್ದಿಷ್ಟವಾಗುತ್ತದೆ· ಉತ್ತರಪದದಲ್ಲಿ ಬಂದಾಗ ವಾರ್ಗಿಕವಾಗುತ್ತದೆ.

**ತೋಟಗೆರೆ (ನೆ)** : ತೋಟ + ಕೆರೆ = ತೋಟಗೆರೆ 'ಗ' ಕಾರ ಆದೇಶವಾಗಿ ಬಂದಿದೆ.
ತೋಟ - ಕ್ಷೇತ್ರವಾಚಕ, ಕೃಷಿ ಭೂಮಿ ಸೂಚಕ 'ತೋಟ' - ಪೂರ್ವಪದದಲ್ಲಿ 'ವಿಶಿಷ್ಟ'ವಾಗಿಯೂ ಉತ್ತರಪದದಲ್ಲಿ 'ವಾರ್ಗಿಕ'ವಾಗಿಯೂ ಬಳಕೆಯಾಗುತ್ತದೆ. ಕೆರೆ - ಜಲವಾಚಿ ಸೂಚಕ ಪದ.

**ಕೋಡಿಪುರ** : ಕೋಡಿ + ಪುರ , ಕೋಡಿ - ಹೆಚ್ಚಾದ ನೀರು ಕೆರೆಯಿಂದ ಹೊರಹೋಗುವ ಸ್ಥಳ.
ಪುರ - ಹಳ್ಳಿಗಿಂತಲೂ ಹೆಚ್ಚು ಜನಸಾಂದ್ರತೆ ಇರುವ ಊರು. ಕೋಡಿ ಪ್ರದೇಶದ ಪಕ್ಕದಲ್ಲಿರುವ ಊರು.

## ೪.೫ ಸಂಸ್ಕೃತೀಕರಣಗೊಂಡ ಸ್ಥಳನಾಮಗಳು

ಸ್ಥಳನಾಮಗಳು ಸ್ಥಳೀಯ ಭಾಷೆ ಹಾಗೂ ಜನರಿಂದ ಸೃಷ್ಟಿಯಾದವು. ಇವುಗಳಲ್ಲಿನ ವಿಶಿಷ್ಟಾಂಶಗಳು ಸ್ಥಳೀಯರಿಗೆ ಅಥವಾ ಸ್ಥಳೀಯ ಭಾಷೆಗೆ ಸಂಬಂಧಪಟ್ಟಿರುತ್ತವೆ. ಆ ಸಂದರ್ಭದಲ್ಲಿ ವಿಶಿಷ್ಟಗಳಿಗೆ ಇದ್ದ ಮಹತ್ವ ನಂತರದಲ್ಲಿ ಕಡಿಮೆಯಾಗುವ ಅಥವಾ ಸಂಕುಚಿತಾರ್ಥ ಅಥವಾ ಹೀನಾರ್ಥ ಪ್ರಾಪ್ತಿಯಾಗುವ ಸಂಭವವಿರುತ್ತದೆ. ಇಂತಹ ಸಂದರ್ಭದಲ್ಲಿ ಸ್ಥಳನಾಮಗಳನ್ನು ಪುನರ್ನಾಮಕರಣ ಮಾಡುವ ಅಥವಾ ಆ ವಿಶಿಷ್ಟಾಂಶಗಳನ್ನು ಸಂಸ್ಕೃತೀಕರಣಮಾಡುವ ಸಾಧ್ಯತೆಯನ್ನು ಗುರುತಿಸಬಹುದು.

ಸಂಸ್ಕೃತೀಕರಣಕ್ಕೆ ಮೇಲ್ವರ್ಗ ಅಥವಾ ಮೇಲ್ಜಾತಿ ಸಮುದಾಯದ ಪಂಡಿತವರ್ಗಗಳು ಮುಖ್ಯ ಕಾರಣವಾಗಿವೆ. ಜನಸಮುದಾಯದ ಮನ್ನಣೆ ಇದ್ದಲ್ಲಿ ಈ ಹೆಸರುಗಳು ಬಳಕೆಗೆ ಬಂದು ಉಳಿಯುವ ಸಾಧ್ಯತೆ ಇರುತ್ತದೆ. ಇಲ್ಲದಿದ್ದಲ್ಲಿ ಸಂಸ್ಕೃತ ರೂಪದ ಹೊಸ ಹೆಸರು ಅಸ್ತಿತ್ವದಲ್ಲಿ ಉಳಿದಿರುವುದಿಲ್ಲ. ಸಂಸ್ಕೃತೀಕರಣಕ್ಕೆ ಪುರಾಣದ ಕಥೆಗಳು, ಸ್ಥಳೀಯ ಕ್ಷೇತ್ರ ಮಹಾತ್ಮೆಗಳು ಕಾರಣವಾಗಿವೆ. ತಮ್ಮ ಊರಿನ ಬಗ್ಗೆ ಹೆಮ್ಮೆಪಡುವಂತೆ ಪುರಾಣೀಕರಣವನ್ನು ಮಾಡಿಕೊಳ್ಳುವ ಸ್ವಭಾವವನ್ನು ಇಲ್ಲಿ ಗುರುತಿಸಬಹುದು.

ಸಂಸ್ಕೃತೀಕರಣ ವಾಗುವ ಸಂದರ್ಭದಲ್ಲಿ ಮೂಲಹೆಸರು ದೂರಮಾಡುವುದು ಸಹಜವಾಗಿದೆ. ಮೂಲನಾಮದ ವಿಶಿಷ್ಟವನ್ನು ಸರಿಯಾಗಿ ಗ್ರಹಿಸದೆ ಅನುವಾದ ಮಾಡುವಾಗ ತಪ್ಪು ಅರ್ಥ ಬರುವ ಸಾಧ್ಯತೆ ಇದೆ. ವೈಜ್ಞಾನಿಕ ಮಾಹಿತಿಗಳ ಅಭಾವ ಹಾಗೂ ಅಜ್ಞಾನದಿಂದ, ತಪ್ಪಾಗಿ ಸ್ಥಳನಾಮ ನಿಷ್ಪತ್ತಿ ಆಗುವ ಸಾಧ್ಯತೆ ಇರುತ್ತದೆ.'[೧೧]

ಉದಾ :

ಲಕ್ಷ್ಮೀದೇವಿಪುರ (ದೊ) : ಪೂರ್ವನಾಮ - ತಿಪ್ಪೇನಹಳ್ಳಿ ವ್ಯಕ್ತಿವಾಚಿ
ಲಕ್ಷ್ಮೀದೇವಿಪುರ - ದೈವವಾಚಿ, ಲಕ್ಷ್ಮೀದೇವಿ - ವಿಶಿಷ್ಟ, ಪುರ - ವಾರ್ಗಿಕ ಉತ್ತಮಾರ್ಥ ಪ್ರಾಪ್ತಿ. ಸಂಸ್ಕೃತೀಕರಣ ಗೊಂಡಿದ್ದು, ಪೂರ್ವನಾಮ ಬಳಕೆಯಲ್ಲಿಲ್ಲ.

ವಿಜಯಪುರ (ದೇ) : ಪೂರ್ವನಾಮ - ವೇದಗಾನಹಳ್ಳಿ > ವಡಿಗೇನಹಳ್ಳಿ > ವಿಜಯಪುರ
ವೇದಗಾನ - ವಿಶಿಷ್ಟ, ವೇದಗಾನ > ವಡಿಗೇನ
ವೇದಗಾನ ಹಳ್ಳಿ > ವಡಿಗೇನಹಳ್ಳಿ > ವಿಜಯಪುರ ಆಗಿದೆ.
ವಡಿಗೇನಹಳ್ಳಿ - ಸ್ವಾತಂತ್ರ್ಯಪೂರ್ವ ನಾಮವಾಗಿದೆ. ವಿಜಯಪುರ - ಸ್ವಾತಂತ್ರ್ಯ ನಂತರದ ನಾಮವಾಗಿದ್ದು ಭಾರತಕ್ಕೆ ಸ್ವಾತಂತ್ರ್ಯ ಬಂದದ್ದರ ನೆನಪಿಗಾಗಿ ಈ ಹೆಸರು ನೀಡಲಾಗಿದೆ.

ರಾಮನಗರ (ರಾ) : ಕ್ಲೋಸ್ ಪೇಟೆ > ರಾಮನಗರ,
ಸರ್ ಬ್ಯಾರಿ ಕ್ಲೋಸ್ ನೆನಪಿಗಾಗಿ ಈ ನಾಮಕರಣ ಮಾಡಲಾಗಿದೆ. 'ರಾಮನಗರ' - ಸಂಸ್ಕೃತೀಕರಣಗೊಂಡ ಪುನರ್ನಾಮಕರಣ 'ರಾಮಗಿರಿ ಪೂರ್ವನಾಮವಾಗಿದ್ದು, ಈ ಊರು ಸ್ಥಳಾಂತರಗೊಂಡಿದೆ.
ರಾಮಗಿರಿ > ಕ್ಲೋಸ್‌ಪೇಟೆ > ರಾಮನಗರ ಆಗಿದೆ.

ದೊಡ್ಡಬಳ್ಳಾಪುರ (ದೊ) : ದೊಡ್ಡಬಳ್ಳಾಪುರ - ಪಿರಿಯಪ್ರಸ್ಥಪುರ
ದೊಡ್ಡ ಬಳ್ಳ, ಪಿರಿಯಪ್ರಸ್ಥ - ವಿಶೇಷಣ, ವಿಶಿಷ್ಟ, ಪುರ - ವಾರ್ಗಿಕ ಸಂಸ್ಕೃತೀಕರಣಗೊಂಡ ಈ ಸ್ಥಳನಾಮ ಜನಬಳಸದೇ ಇದ್ದುದರಿಂದ, ಪೂರ್ವನಾಮ ಮುಂದುವರೆದಿದೆ.[೧೨]

ಹೊಸ ಕೋಟೆ (ಹೊ) : ಹೊಸ -ವಿಶಿಷ್ಟ, ಕೋಟೆ - ವಾರ್ಗಿಕ, ನೂತನಾವರಣ ಪುರ, ನವಸಾಲಪುರ - ಎಂದು ಸಂಸ್ಕೃತೀಕರಣವಾಯಿತಾದರೂ ಬಳಕೆಯಲ್ಲಿಲ್ಲ.[೧೩]

ಗಜ್ಜಗಾರಗುಪ್ಪೆ (ದೊ) : ಗಜ್ಜಗಾರ - ವಿಶಿಷ್ಟ, ಗುಪ್ಪೆ > ಕುಪ್ಪೆ - ವಾರ್ಗಿಕ
ಗಜ್ಜಗಾರ ಗುಪ್ಪೆ > ಗಜಪುರಿ 'ಗಜಪುರಿ' - ಸಂಸ್ಕೃತೀಕರಣಗೊಂಡ ಸ್ಥಳನಾಮವಾಗಿದ್ದು ಜನ ಬಳಕೆಯಲ್ಲಿ ಇಲ್ಲ.

ಬೇಗೂರು (ದೇ) : ಬೇಗೂರು < ಗೋಪಾಲಸಾಗರ [೧೪] ಸಂಸ್ಕೃತೀಕರಣಗೊಂಡ ಈ ಸ್ಥಳನಾಮ ಬಳಕೆಯಲ್ಲಿಲ್ಲ. ಪೂರ್ವನಾಮ ಜನಬಳಕೆಯಲ್ಲಿದೆ. ಗೋಪಾಲಸಾಗರ ಶಾಸನೋಕ್ತ ಸ್ಥಳನಾಮವಾಗಿದ್ದು ಬಳಕೆಯಲ್ಲಿಲ್ಲ.

ತಾಡಿಗವಾಳಿ (ದೇ) : ತಾಡಿಗವಾಳಿ < ವಿಕ್ರಮಚೋಳಮಂಡಲಂ
ಚೋಳರ ಆಡಳಿತದಲ್ಲಿದ್ದಾಗ ಈ ಸಂಸ್ಕೃತೀಕರಣವಾಗಿ ಮರುನಾಮಕರಣವಾಗಿದೆ.
'ತಾಡಿಗವಾಳಿ' - ನಾಮವೇ ಮುಂದುವರೆದಿದೆ.
'ವಿಕ್ರಮ ಚೋಳ ಮಂಡಲಂ' ಎಂದು ಶಾಸನದಲ್ಲಿ ಉಲ್ಲೇಖಿತವಾಗಿದ್ದರೂ, ಬಳಕೆಗೆ ಬರಲಿಲ್ಲ.

ಕೂಡ್ಲೂರು (ಚ) : ಕೂಡ್ಲೂರು < ರಾಜರಾಜ ಚತುರ್ವೇದಿ ಮಂಗಲಂ ಎಂದು ಚೋಳರ ಆಡಳಿತದಲ್ಲಿ ಬದಲಾವಣೆಯಾಗಿದೆ. ಹಿಂದಿನ ಹೆಸರನ್ನೆ ಬಳಕೆಯಲ್ಲಿಟ್ಟುಕೊಳ್ಳಲಾಗಿದೆ.
'ರಾಜ ರಾಜಚತುರ್ವೇದಿ ಮಂಗಲಂ' ಶಾಸನೋಕ್ತ ಸಥಳನಾಮವಾಗಿದ್ದು ಬಳಕೆಯಲಿಲ್ಲ.

ಕೊಳತೂರು (ರಾ) : ಕೊಳಿತೂರು < ಕೊಳತ್ತೂರು = ಕೊಳದ ಊರು 'ರಾಮಸಾಗರ' - ಎಂದು ಸಂಸ್ಕೃತೀಕರಣಗೊಂಡಿದೆ.

ಹೆಸರು ಚೆನ್ನಾಗಿರಬೇಕೆಂಬ ಕಾರಣದಿಂದ ಸಂಸ್ಕೃತದ ಹೆಸರುಗಳನ್ನು ನಾಮಕರಣ ಮಾಡಿಕೊಳ್ಳಲಾಗುತ್ತದೆ. ಈ ರೀತಿಯ ಹೆಸರುಗಳು ಯಾದೃಚ್ಛಿಕವಾಗಿರುತ್ತವೆ. ಮತ್ತು ಯಾವುದೇ ಪ್ರಾಕೃತಿಕ, ಭೌಗೋಳಿಕ ಲಕ್ಷಣಗಳನ್ನು ಬಳಗೊಂಡಿರುವುದಿಲ್ಲ.

## 4.6 ಪುನರ್ನಾಮಕರಣ ಹೊಂದಿರುವ ಸ್ಥಳನಾಮಗಳು

ಸ್ಥಳನಾಮಗಳು ಸೃಷ್ಟಿಯಾಗಿರುವ ಹಿನ್ನೆಲೆಗಳು ಸ್ವಾಭಾವಿಕವಾದ ಕ್ರಿಯೆಯಾಗಿದ್ದು, ಗುರುತಿಸುವಿಕೆ ಮಾತ್ರ ಇದರ ಗುರಿಯಾಗಿದ್ದಿತು. ಈ ಕಾರಣದಿಂದ ಆ ಭೂಭಾಗದ ವಿಶಿಷ್ಟತೆ ಸಾರುವ ನಿರ್ದಿಷ್ಟ ಲಕ್ಷಣವನ್ನು ವಿಶಿಷ್ಟವಾಗಿ ಬಳಸಲಾಗಿರುತ್ತೆ. ಇಲ್ಲಿ ಯಾವುದೇ ರೀತಿಯ ಅಹಂಭಾವವಾಗಲೀ, ಅಭಿಮಾನವಾಗಲಿ, ಅಲಂಕಾರಯುತ ಭಾಷಾ ಪ್ರೌಢಿಮೆಯನ್ನಾಗಲೀ, ಸೂಚಿತವಾಗದೆ ಬಳಕೆಯಲ್ಲಿದ್ದ ಸಹಜ ಆಕೃತಿಮಾಗಳೇ ನೇರವಾಗಿ ವಿಶಿಷ್ಟವಾಗಿ ಸೇರಿರುವುದರಿಂದ, ಅಶ್ಲೀಲತೆಯ ಆಭಾಸ ಇರುವ ಸಾಧ್ಯತೆ ಇರುತ್ತದೆ. ಕಾಲಾಂತರದಲ್ಲಿ ವಿಶಿಷ್ಟ ಅಂಶಗಳ ಭಾಷಾ ಘಟಕಗಳು, ಹೀನಾರ್ಥಪ್ರಾಪ್ತಿ, ಸಂಕುಚಿತಾರ್ಥ ಹೊಂದಿರುವ ಸಾಧ್ಯತೆ ಇರುತ್ತದೆ. ಇಂತಹ ಸಂದರ್ಭದಲ್ಲಿ ತಮ್ಮ ಊರಿನ ಹೆಸರನ್ನು ಬದಲಾಯಿಸುವ ಉದ್ದೇಶದಿಂದ, ಪುನರ್ನಾಮಕರಣ ಮಾಡಲಾಗುತ್ತದೆ. ಊರುಗಳು ಬೆಳೆದಂತೆ ಹೊಸ ಹೆಸರುಗಳನ್ನು ನೀಡುತ್ತಾ ವಿಸ್ತರಿಸಿಕೊಳ್ಳಲಾಗುತ್ತದೆ.

ಅಸ್ತಿತ್ವದಲ್ಲಿರುವ ಸ್ಥಳನಾಮಗಳಿಗೆ ಪುನರ್ನಾಮಕರಣ ಮಾಡುವ ಪ್ರವೃತ್ತಿ ಬಹಳ ಹಿಂದಿನಿಂದಲೂ ನಡೆದಿದೆ. ಇದಕ್ಕೆ ಆಗಿನ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಭಾಷಿಕ, ಭೌಗೋಳಿಕ ಹಾಗೂ ನಿರ್ದಿಷ್ಟ ಘಟನೆಗಳು ಕಾರಣವಾಗಿರುತ್ತವೆ. ಜನರ ಮನಸ್ಸಿನಲ್ಲಿ ಊರಿನ ಹೆಸರನ್ನು ಬದಲಾಯಿಸಬೇಕು ಎಂಬ ಮನೋಭಾವ ಇದಕ್ಕೆ ಕಾರಣವಾಗಿದೆ.

ಪುನರ್ನಾಮಕರಣವಾದ ಸ್ಥಳನಾಮಗಳಲ್ಲಿ, ಯಾದೃಚ್ಛಿಕವಾದ ಅಂಶಗಳನ್ನು ಗುರುತಿಸಬಹುದಾಗಿದೆ. ಪೂರ್ವದಲ್ಲಿದ್ದ ಹೆಸರಿನಂತೆ ಅನ್ವರ್ಥತೆಯನ್ನು ಗುರುತಿಸಲು ಸಾಧ್ಯವಿರುವುದಿಲ್ಲ, ಯಾವುದಾದರೂ ಘಟನೆಗೆ

ಸಂಬಂಧಿಸಿದ ಸ್ಥಳ ಮಹಾತ್ಮೆ (ಪೌರಾಣಿಕೀಕರಣ), ಸಂಸ್ಕೃತೀಕರಣ. ಅನ್ಯಭಾಷೆಯ ಪ್ರಭಾವವನ್ನು, ಪಂಡಿತ ನಿಷ್ಪತ್ತಿಯನ್ನು ಇಲ್ಲಿ ಗುರುತಿಸಬಹುದಾಗಿದೆ.

ಪುನರ್ನಾಮಕರಣಗೊಂಡ ಸ್ಥಳನಾಮಗಳಲ್ಲಿ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಯ ಪದಗಳನ್ನು ಹೆಚ್ಚು ಗುರುತಿಸಬಹುದಾಗಿದೆ. ಇದು ಪಂಡಿತ ನಿಷ್ಪತ್ತಿಗೆ ಕಾರಣವಾಗಿದೆ. ಆಡಳಿತ ನಡೆಸುತ್ತಿದ್ದ ರಾಜರುಗಳು, ಹೊಸ ಪ್ರದೇಶವನ್ನು ಗೆದ್ದ ಸಂದರ್ಭದಲ್ಲಿ, ಕೆಲವು ಊರುಗಳ ಹೆಸರು ಬದಲಾಯಿಸುವುದು ಸಾಮಾನ್ಯವಾಗಿದ್ದಿತು. ಇವರಿಗೆ ಭಾಷೆ ಮುಖ್ಯವಾಗಿರದೆ, ತಮ್ಮ ಅಧೀನದಲ್ಲಿರುವ ಸ್ಥಳವನ್ನು ಗುರುತು ಹಿಡಿಯುವ ಸಂಕೇತಗಳು ಮುಖ್ಯವಾಗಿದ್ದಿತು. ಇದರಿಂದ ಊರಿನ ಹೆಸರಿನ ಹಿಂದಿನ ಉದ್ದೇಶ ಮರೆಯಾಗುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪುನರ್ನಾಮಕರಣಕ್ಕೆ ಒಳಗಾದ ಸ್ಥಳನಾಮಗಳನ್ನು ಗುರುತಿಸಬಹುದು. ಇವುಗಳಲ್ಲಿ ಕೆಲವು ಸಂಸ್ಕೃತೀಕರಣದ ಮಾದರಿಗೆ ಉದಾಹರಣೆಗಳಾಗಿವೆ.

ಜ್ಯೋತಿಪುರ (ದೇ) : ಪುನರ್ನಾಮಕರಣಗೊಂಡಿದೆ, ಪೂರ್ವನಾಮ ಬೋಕಿಪುರ,
ಬೋಕಿಪುರ > ಜ್ಯೋತಿಪುರ ಆಗಿದೆ. ಬೋಕಿ > ಜ್ಯೋತಿ – ವಿಶಿಷ್ಟಗಳಾಗಿವೆ.
ಜ್ಯೋತಿ – ದೀಪ, ಬೆಳಕು ಅರ್ಥ ನೀಡುತ್ತದೆ. ಪುರ – ವಾರ್ಗಿಕ,
ಬೋಕಿ – ಒಡೆದ ಮಡಕೆ ಚೂರು, ಬೆಲೆಯಿಲ್ಲದ್ದು ಮಹತ್ವವಿಲ್ಲದ್ದು ಎಂಬರ್ಥದಲ್ಲಿ ಬಳಕೆಯಿದೆ.
ಜ್ಯೋತಿ–ಪವಿತ್ರವಾದದ್ದು ದೈವಿಕವಾದದ್ದು ಎಂಬ ಕಲ್ಪನೆ (ಉತ್ತಮಾರ್ಥ ಪ್ರಾಪ್ತಿಯಾಗಿದೆ).

ಲಕ್ಷ್ಮಿದೇವಿಪುರ (ದೊ) : ಪುನರ್ನಾಮಕರಣಗೊಂಡಿದೆ ಪೂರ್ವನಾಮ ತಿಪ್ಪೇನಹಳ್ಳಿ. ಇದು ಲಕ್ಷ್ಮಿದೇವಿಪುರ ಆಗಿದೆ.
ತಿಪ್ಪ – ವ್ಯಕ್ತಿವಾಚಿ, ವಿಶಿಷ್ಟ ಲಕ್ಷ್ಮಿದೇವಿ – ದೈವವಾಚಿ, ವಿಶಿಷ್ಟ ಹಳ್ಳಿ – ವಾರ್ಗಿಕ ,
'ತಿಪ್ಪ' ಎಂಬ ಹೆಸರು ಕೆಳಸ್ತರದ ವ್ಯಕ್ತಿನಾಮವೆಂಬ ಭ್ರಮೆ.
ಲಕ್ಷ್ಮಿದೇವಿ – ದೈವವಾಚಿ ಸ್ಥಳನಾಮವನ್ನಾಗಿ ನಾಮಕರಣ ಮಾಡಲಾಗಿದೆ.
(ಉತ್ತಮಾರ್ಥಪ್ರಾಪ್ತಿ)

ವಿಜಯಪುರ (ದೇ) : ಈ ಹೆಸರು ಪುನರ್ನಾಮಕರಣಗೊಂಡಿದೆ.
ಪೂರ್ವನಾಮ – ವೇದಗಾನಹಳ್ಳಿ, ವಡಿಗೇನಹಳ್ಳಿ, ವಡಗು – ವಿಶಿಷ್ಟ, ಹಳ್ಳಿ – ವಾರ್ಗಿಕ, ವಿಜಯ – ವಿಶಿಷ್ಟ, ಪುರ – ವಾರ್ಗಿಕ. ಸ್ವಾತಂತ್ರ್ಯ ಬಂದ ವಿಜಯೋತ್ಸವದ ಹಿನ್ನೆಲೆಯಲ್ಲಿ 'ವಿಜಯಪುರ' ಎಂದು ಪುನರ್ನಾಮಕರಣವಾಗಿದೆ.

ರಾಮನಗರ (ರಾ) : 'ರಾಮ' ಎಂಬುದು ವಿಶಿಷ್ಟವಾಗಿ ಸೇರಿದೆ. ರಾಮದೇವರ ಗುಡಿ ಬೆಟ್ಟದಲ್ಲಿದ್ದು, 'ಸರ್ ಬ್ಯಾರಿ ಕ್ಲೋಸ್' ಎಂಬ ಇಂಗ್ಲೀಷ್ ಅಧಿಕಾರಿಯ ಹೆಸರಿನಲ್ಲಿ ಕಟ್ಟಿದ ಊರಾಗಿದ್ದು 'ಕ್ಲೋಸ್ ಪೇಟೆ' ಎಂಬ ಹೆಸರು ನೀಡಲಾಗಿದ್ದಿತು. ನಂತರದಲ್ಲಿ 'ರಾಮನಗರ' ಎಂದು

ಪುನರ್ನಾಮಕರಣ. ಕ್ಲೋಸ್ - ವ್ಯಕ್ತಿನಾಮ, ವಿಶಿಷ್ಟ, ಪೇಟೆ - ವಾರ್ಗಿಕ.
ರಾಮ - ದೈವವಾಚಿ, ವಿಶಿಷ್ಟ, 'ನಗರ' ವಾರ್ಗಿಕವಾಗಿದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 'ನಗರ' ವಾರ್ಗಿಕವು ಈ ಸ್ಥಳನಾಮದಲ್ಲಿ ಮಾತ್ರ ಬಳಕೆಯಾಗಿದೆ.

ಕೊಡ್ಲೂರು (ಚ) : ಚೋಳರ ಕಾಲದಲ್ಲಿ 'ರಾಜರಾಜ ಚತುರ್ವೇದಿ ಮಂಗಲಂ' ಎಂಬ ಹೆಸರಿದ್ದಿತು. ಇದೊಂದು ಬ್ರಾಹ್ಮಣರನೆಲೆಯಾಗಿದ್ದು, ಅಗ್ರಹಾರವಾಗಿದ್ದಿತು. ಅಗ್ರಹಾರಗಳನ್ನು - ಚತುರ್ವೇದಿ ಮಂಗಲಂ ಎಂದು ಚೋಳರು ಕರೆಯುತ್ತಿದ್ದರು.
ರಾಜ ರಾಜ ಚತುರ್ವೇದಿ - ವಿಶಿಷ್ಟ, ಮಂಗಲಂ - ವಾರ್ಗಿಕ,
ಕೂಡಲೂರು < ಕೂಡ್ಲೂರು, ಪುನರ್ನಾಮಕರಣವಾದ ಹೆಸರು.
ಅರ್ಕಾವತಿ - ಕಾವೇರಿ ನದಿಗಳು ಕೂಡುವ ಸ್ಥಳವಾಗಿದ್ದು,
ಕೂಡು < ಕೂಡಲು < ಕೂಡ್ಲು-ವಿಶಿಷ್ಟ, ಊರು - ವಾರ್ಗಿಕ ಜಲವಾಚಿ ಸ್ಥಳನಾಮ.
ಚತುರ್ವೇದಿ ಎಂಬುದು ನಿರ್ದಿಷ್ಟ ಕುಲವನ್ನು ಸೂಚಿಸುತ್ತದೆ. ನಾಲ್ಕು ವೇದ ಬಲ್ಲವನು ಎಂದರ್ಥ ನೀಡುತ್ತದೆ. ಕುಲನಾಮವಾಗಿರುವ ಸಾಧ್ಯತೆ ಇದೆ.

ಸಿಂಗರಾಜಪುರ (ಚ) : ಮೂಲ 'ಹೊಸಹಳ್ಳಿ' ಸ್ಥಳಾಂತರಗೊಂಡು, 'ಗವಿಪುರ' ಆಗಿದೆ. 'ಗವಿಪುರ' - 'ಸಿಂಗರಾಜಪುರ'ವಾಗಿ ಪುನರ್ನಾಮಕರಣ.
ಹೊಸ - ವಿಶೇಷಣ ಸೂಚಕ ವಿಶಿಷ್ಟ ಆಕೃತಿಮಾ,
ಗವಿ - ಗವಿರಂಗ (ವಿಷ್ಣುವಿನ ಹೆಸರು) - ದೈವವಾಚಿ ವಿಶಿಷ್ಟ ಆಕೃತಿಮಾ, ಸಿಂಗರಾಜ - ಶೃಂಗರಾಜ - ದೈವವಾಚಿ, ವಿಶಿಷ್ಟ ಆಕೃತಿಮಾ, ಶೃಂಗ > ಸಿಂಗ ಆಗಿದೆ. ಸೌಲಭ್ಯಾಕಾಂಕ್ಷೆಯಿಂದ ಸಿಂಹರಾಜ > ಸಿಂಗರಾಜ ಆಗಿರುವ ಸಾಧ್ಯತೆ ಇದೆ.[20] ಹೊಸಹಳ್ಳಿ ಬೇಚರಾಕ್, ನಿರ್ವಸತಿ ಸ್ಥಳನಾಮವಾಗಿದೆ.

ಲಕ್ಷ್ಮಿಪುರ (ರಾ) : ವಡವಟ್ಟ ಎಂಬುದು ೧೫೩೩೫ರ ಕೋಡಂಬಳ್ಳಿ ಶಾಸನೋಕ್ತ ಹೆಸರು.
ಪುದವಟ್ಟು > ವಡವಟ್ಟು > ವಡವಟ್ಟು > ವಡವಾಟ > ಯಡವಟ್ಟು ಎಂಬ ಸ್ಥಿತ್ಯಂತರವಾಗಿರುವ ಸಾಧ್ಯತೆ ಇದೆ.

ಕೆಂಪೇಗೌಡನಿಂದ ನಿರ್ಮಾಣವಾದ ಗ್ರಾಮ - ಎಂಬ ನಂಬಿಕೆ. ಎಡವಟ್ಟು ಎಂದು ಉಚ್ಚಾರಣೆಯಾಗುತ್ತಿದ್ದುದರಿಂದ ಶಾನುಭೋಗರೊಬ್ಬರು ತಮ್ಮ ಮಗಳಾದ 'ಲಕ್ಷ್ಮಿ' ಹೆಸರನ್ನು ಈ ಊರಿಗೆ ಪುನರ್ನಾಮಕರಣ ಮಾಡಿದ್ದಾರೆ ಎಂಬ ಐತಿಹ್ಯವಿದೆ. ಲಕ್ಷ್ಮಿ- ವ್ಯಕ್ತಿವಾಚಿ ವಿಶಿಷ್ಟ ಆಕೃತಿಮಾ. ಪುರ - ವಾರ್ಗಿಕ.

ಮಜ್ಜಿಗೆ ಹೊಸಹಳ್ಳಿ : ಮೂಲಹೆಸರು ಕೆಂಪತಿಮ್ಮನಹಳ್ಳಿ. ಕೆಂಪತಿಮ್ಮ-ವಿಶೇಷಣವಿರುವ ವಿಶಿಷ್ಟ, ವ್ಯಕ್ತಿವಾಚಿ. - ಮಜ್ಜಿಗೆ - ವಸ್ತುವಾಚಿ ವಿಶಿಷ್ಟ ಘಟಕ ಹೊಸ - ವಿಶೇಷಣ ಹಳ್ಳಿ - ವಾರ್ಗಿಕ.
ಮಿಲಿಟರಿಕ್ಯಾಂಪ್‌ಗೆ ಮಜ್ಜಿಗೆ ಸರಬರಾಜು ಮಾಡುತ್ತಿದ್ದುದರಿಂದ 'ಮಜ್ಜಿಗೆ' ಎಂಬ

ವಿಶಿಷ್ಟವೂ, ಸ್ಥಳಾಂತರಗೊಂಡು ಹೊಸ ಸ್ಥಳದಲ್ಲಿ ನೆಲೆನಿಂತುದರಿಂದ 'ಹೊಸ' ವಿಶೇಷಣ ಹೊಂದಿದ ಸ್ಥಳನಾಮವಾಗಿದೆ.

## ೪.೭ ಹ್ರಸ್ವೀಕರಣ - ಸ್ಥಳನಾಮಗಳು

ಊರುಗಳ ಹೆಸರುಗಳು ದೀರ್ಘವಾಗಿದ್ದಲ್ಲಿ ಅವುಗಳನ್ನು ಸಂಕ್ಷಿಪ್ತ ಗೊಳಿಸುವ ಉದ್ದೇಶದಿಂದ ಹ್ರಸ್ವೀಕರಣ ಮಾಡುವ ವಿಧಾನವನ್ನು ಇತ್ತೀಚೆಗೆ ಅನುಸರಿಸಲಾಗುತ್ತಿದೆ. ಹ್ರಸ್ವೀಕರಣದ ಮುಖ್ಯ ಲಕ್ಷಣವೆಂದರೆ, ಇಂಗ್ಲಿಷ್ ಅಕ್ಷರಗಳು 'ವಿಶಿಷ್ಟ' ಗಳನ್ನು ಪ್ರತಿನಿಧಿಸುತ್ತವೆ. ಸ್ಥಳನಾಮಗಳಲ್ಲಿನ 'ವಾರ್ಗಿಕ'ಗಳು ಯಥಾವತ್ತಾಗಿ ಉಳಿದುಕೊಳ್ಳುತ್ತವೆ. ಸಾಮಾನ್ಯವಾಗಿ ಒಂದು ಅಕ್ಷರ ಬಳಕೆ ಇದ್ದು ವಿಶಿಷ್ಟಗಳು ದೀರ್ಘವಾಗಿದ್ದಲ್ಲಿ ಅಕ್ಷರಗಳ ಸಂಖ್ಯೆ ಎರಡು ಇರುವ ಸಾಧ್ಯತೆ ಇರುತ್ತದೆ. ನಗರಗಳಲ್ಲಿ ಹೆಚ್ಚಾಗಿ ಬಳಕೆಯಾಗುತ್ತಿದ್ದ ಈ ಹ್ರಸ್ವೀಕರಣ ಪ್ರಕ್ರಿಯೆಯು, ಗ್ರಾಮಾಂತರ ಪ್ರದೇಶಗಳಲ್ಲೆಲ್ಲಾ ಕಂಡುಬರುತ್ತದೆ. ಹ್ರಸ್ವೀಕರಣ ಬಳಕೆಗೆ ಸೌಲಭ್ಯಾಕಾಂಕ್ಷೆಯ ಕಾರಣವಾಗಿದೆ. ಸೌಲಭ್ಯಾಕಾಂಕ್ಷೆಯ ಮುಖ್ಯ ಲಕ್ಷಣವೆಂದರೆ ಭಾಷೆಯಲ್ಲಿನ ಪದಗಳನ್ನು ಮೊಟಕುಗೊಳಿಸುವುದಾಗಿರುತ್ತದೆ. ಇದರಿಂದ ಪದಗಳ ಬರಹ ಮತ್ತು ಉಚ್ಚಾರಣೆ ಸರಳ ಹಾಗೂ ಸುಲಭವಾಗುವುದಲ್ಲದೆ. ಸಮಯದ ಉಳಿತಾಯವೂ ಆಗುತ್ತದೆ. ಆದುದರಿಂದ ಸ್ಥಳನಾಮಗಳಲ್ಲಿ ಹ್ರಸ್ವೀಕರಣವಾಗುವಿಕೆ ಸಾಮಾನ್ಯವಾದ ಲಕ್ಷಣವಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹ್ರಸ್ವೀಕರಣಗೊಂಡ ಸ್ಥಳನಾಮಗಳನ್ನು ಗುರುತಿಸಬಹುದಾಗಿದ್ದು ಕೆಳಕಂಡಂತೆ ಪಟ್ಟಿ ಮಾಡಲಾಗಿದೆ.

| ಮೂಲ ಹೆಸರು | | ಹ್ರಸ್ವೀಕರಣಗೊಂಡ ರೂಪ |
|---|---|---|
| ಹಿಂಡಿಗನಾಳ ಕ್ರಾಸ್ - (ಹೊ) | - | ಎಚ್. ಕ್ರಾಸ್ |
| ತುರುಕರ ಹೊಸಹಳ್ಳಿ - (ಕ) | - | ಟಿ. ಹೊಸ ಹಳ್ಳಿ |
| ವೆಂಕಟಗಿರಿಕೋಟೆ - (ದೇ) | - | ವಿ. ಜಿ. ಕೋಟೆ |
| ಕೋಳಂದಚನ್ನೇನಹಳ್ಳಿ (ಹೊ) | - | ಕೆ. ಚನ್ನೇನಹಳ್ಳಿ |
| ದೊಡ್ಡಬಳ್ಳಾಪುರ - (ದೊ) | - | ಡಿ. ಬಿ. ಪುರ |
| ದೊಡ್ಡಬಳ್ಳಾಪುರ ಕ್ರಾಸ್ -(ದೊ) | - | ಡಿ. ಕ್ರಾಸ್ |
| ತಿಪ್ಪಗೊಂಡನ ಹಳ್ಳಿ - (ಮಾ) | - | ಟಿ. ಜಿ. ಹಳ್ಳಿ |
| ಕೃಷ್ಣರಾಜಪುರ - (ನೆ) | - | ಕೆ. ಆರ್. ಪುರ |
| ತ್ರಿಪುರಾಂತಕ ಚನ್ನಪುರ - (ಮಾ) | - | ಟಿ . ಚನ್ನಾಪುರ |
| ಚನ್ನರಾಯಪಟ್ಟಣ (ದೇ) | - | ಸಿ. ಆರ್. ಪಟ್ಟಣ |

ಇಂಗ್ಲಿಷ್ ಅಕ್ಷರಗಳನ್ನು ಬಳಸದೆ, ಕನ್ನಡ ರೂಪಗಳಲ್ಲಿಯೇ ವ್ಯತ್ಯಾಸವನ್ನು ಮಾಡಿಕೊಂಡು ಉಚ್ಚಾರಣೆ ಮಾಡುವುದರ ಮೂಲಕವೂ ಹ್ರಸ್ವೀಕರಣ ಮಾಡಿಕೊಳ್ಳಲಾಗಿದೆ. ಇದು ಯಾವುದೇ ಉದ್ದೇಶವಿಲ್ಲದೆ ಸಾಮಾನ್ಯವಾದ ಬಳಕೆಯಲ್ಲಿಯೇ ಆಗಿರುವ ಸೌಲಭ್ಯಾಕಾಂಕ್ಷೆಯಾಗಿದೆ. ಈ ರೀತಿಯ ಹ್ರಸ್ವೀಕರಣ ರೂಪಗಳು ಅನುಪಾತದಲ್ಲಿ

ಇರುತ್ತವೆಯಾದರೂ ಶಿಷ್ಟಭಾಷೆಯಲ್ಲಿ, ಅದರಲ್ಲೂ ಬರಹ ರೂಪದಲ್ಲಿ ಈ ಹ್ರಸ್ವೀಕರಣಗಳನ್ನು ಗುರುತಿಸಲು ಸಾಧ್ಯವಿಲ್ಲ.

| ಶಿಷ್ಟರೂಪ | | ಹ್ರಸ್ವೀಕರಣ-ಬಳಕೆಯರೂಪ |
|---|---|---|
| ದೊಡ್ಡಬಳ್ಳಾಪುರ | - | ದೊಡ್‌ಬ್ಳಾಪುರ |
| ವಿಶ್ವನಾಥ ಪುರ (ದೇ) | - | ಇಶ್ನಾತ್ಪುರ |
| ಘಾಟಿ ಸುಬ್ರಹ್ಮಣ್ಯ - (ದೊ) | - | ಘಾಟಿ |
| ಚನ್ನರಾಯಪಟ್ಟಣ (ದೇ) | - | ಚನ್ರಾಯ್ಪಟ್ನ |
| ದೇವನಹಳ್ಳಿ (ದೇ) | - | ದೇವ್ನಳ್ಳಿ |
| ಬಗನಿಗೆರೆ ಕಾವಲು (ಮಾ) | - | ಬಗ್ನಿ ಗ್ರೆಕ್ಕಾವಲ್, ಬಗ್ನಿಕಾವ್ಲು |
| ವಾಜರಹಳ್ಳಿ (ರಾ) | - | ವಜ್ರಹಳ್ಳಿ, - ವಜ್ರಳ್ಳಿ |
| ಕೋಳಲದ ಚನ್ನೇನಹಳ್ಳಿ (ಹೊ) | - | ಕೊಳಚನ್ನೇನಹಳ್ಳಿ, ಕೊಳ್ಚೇನಹಳ್ಳಿ |
| ಚಿನ್ನತಿಮ್ಮನಗೊಲ್ಲಹಳ್ಳಿ (ಹೊ) | - | ಚಿಕ್ ತಿಮ್‌ಗೊಲ್ಲಳ್ಳಿ |

## ೪.೮ ಬರಹ ಹಾಗೂ ಜನ ಸಾಮಾನ್ಯರ ಉಚ್ಚಾರಣೆ

ಶಿಷ್ಟ ಭಾಷೆಯ ಮೂಲಕ ಗುರುತಿಸಲ್ಪಡುವ ಸ್ಥಳನಾಮಗಳು ಜನಸಾಮಾನ್ಯರ ಬಳಕೆಯಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಒಳಗೊಂಡಿರುತ್ತದೆ. ಈ ಉಚ್ಚಾರಣೆಯು ಅಕ್ಷರಸ್ಥ ಹಾಗೂ ಅನಕ್ಷರಸ್ಥರ ನಡುವೆ ವ್ಯತ್ಯಾಸವನ್ನು ಹೊಂದಿರುತ್ತದೆ. ಅಕ್ಷರಸ್ಥರ ಬಳಕೆಯು ಶಿಷ್ಟರೂಪಕ್ಕೆ ಸಮೀಪವಾಗಿರುತ್ತದೆ, ಅಥವಾ ಶಿಷ್ಟರೂಪವನ್ನೆ ಉಚ್ಚರಿಸುತ್ತಾರೆ. ಅನಕ್ಷರಸ್ಥರ ಬಳಕೆಯಲ್ಲಿ ಶಿಷ್ಟ ರೂಪವನ್ನು ಗುರುತಿಸಲು ಸಾಧ್ಯವಿಲ್ಲ. ಸೌಲಭ್ಯಾಕಾಂಕ್ಷೆಯೇ ಇಲ್ಲಿ ಮುಖ್ಯವಾಗಿದ್ದು ತಮಗೆ ಅನುಕೂಲವಾಗುವ ರೀತಿಯಲ್ಲಿ ಊರಿನ ಹೆಸರನ್ನು ಬಳಸಿಕೊಳ್ಳುತ್ತಾರೆ.

| ಶಿಷ್ಟರೂಪ | ಅಕ್ಷರಸ್ಥರ ಉಚ್ಚಾರಣೆ | ಅನಕ್ಷರಸ್ಥರ ಉಚ್ಚಾರಣೆ |
|---|---|---|
| ಕನಕಪುರ | ಕನಕ್ಪುರ | ಕಂಕ್ಪುರ |
| ಅಗ್ರಹಾರ | ಅಗ್‌ಹ್ರಾರ | ಅಗ್ರಾರ |
| ಕಾಂಚನಹಳ್ಳಿ | ಕಾಂಚನ್ಹಳ್ಳಿ | ಕಾಂಚ್ನಳ್ಳಿ |
| ಕೋಲಗೊಂಡನಹಳ್ಳಿ | ಕೋಲ್‌ಗೊಂಡ್ನಳ್ಳಿ | ಕೋಲ್ಗೊಂಡಹಳ್ಳಿ |
| ಚೀಲನಕೆರೆ ಕಾವಲು | ಚೀಲನ್ಕೆರೆ/ಕಾವಲ್ | ಚೀಲನ್ಕೆರೆ /ಕಾವ್ಲು |
| ಹೊನ್ನಿಗನಹಳ್ಳಿ | ಹೊನ್ನಿಗ್ನಳ್ಳಿ | ಹೊನ್ನಿಗ್ಳಿ |

| | | |
|---|---|---|
| ಚನ್ನಪಟ್ಟಣ | ಚನ್ಪಟ್ನ / ಪಟ್ಣಾ | ಚಂಪಟ್ನ / ಪಟ್ನ |
| ತೊರೆಹೊಸೂರು | ತೊರೆಹೊಸೂರ್ | ತೊರ್ಸೂರು |
| ಸೆಟ್ಟಿಹಳ್ಳಿ | ಸೆಟ್ಳ್ಳಿ | ಸೆಟ್ಳಿ |
| ಸರಗೂರು | ಸರ್ಗೂರ್ | ಸರ್ಗುರ್ |
| ದೇವನಹಳ್ಳಿ | ದೇವ್ನಳ್ಳಿ | ದ್ಯಾವ್ನಳ್ಳಿ/ ದ್ಯಾವಂಡಳ್ಳಿ |
| ಅನೀಘಟ್ಟ | ಅನ್ಘಟ್ಟ | ಅಣ್ಗಟ್ಟ |
| ಚನ್ನರಾಯಪಟ್ಟಣ | ಚನ್ರಾಯ್ಪಟ್ನ | ಚನ್ರಾಪಟ್ನ |
| ಕುರುಬರಕುಂಟೆ | ಕುರುಬ್ರುಕುಂಟೆ | ಕುರುವುಕುಂಟೆ |
| ತೆಲ್ಲೋಹಳ್ಳಿ | ತೆಲ್ ಹಳ್ಳಿ | ತೆಲ್ಳಿ |
| ಚಿಕ್ಕಹೆಜ್ಜಾಜಿ | ಚಿಕ್ಹೆಜಾಜಿ | ಚಿಕ್ಕೆಜ್ಜಾಜಿ |
| ದೊಡ್ಡಬೆಳಮಂಗಲ | ದೊಡ್ ಬೆಳ್ವಂಗ್ಲ | ದೊಬೆಳ್ವಂಗ್ಲ |
| ದೊಡ್ಡಬಳ್ಳಾಪುರ | ದೊಡ್ಬಳಾಪುರ | ದಬ್ಳಾಪುರ |
| ಪುಟ್ಟೇನಹಳ್ಳಿ | ಪುಟ್ಟೇನ್ಹಳ್ಳಿ | ಪುಟ್ನಳ್ಳಿ |
| ಮಾರಸಂದ್ರ | ಮಾರ್ಸಂದ್ರ | ಮಾರ್ಸಂದ್ರ |
| ಆಗಸರಹಳ್ಳಿ | ಅಗುಸ್ರ್ ಹಳ್ಳಿ | ಅಗುಸ್ರಳ್ಳಿ |
| ಶಿರಿವಾರ | ಶಿರ್ವಾರ | ಸಿರ್ವಾರ |
| ನೆಲಮಂಗಲ | ನೆಲ್ ಮಂಗ್ಲ | ನ್ಯಲ್ಮಂಗ್ಲ |
| ಗೆದ್ದಲಹಳ್ಳಿ | ಗೆದ್ಲ್ ಹಳ್ಳಿ | ಗೆದ್ಲಳ್ಳಿ |
| ಬ್ಯಾಡರಹಳ್ಳಿ | ಬ್ಯಾಡ್ರ್ ಹಳ್ಳಿ | ಬ್ಯಾಡ್ರಳ್ಳಿ |
| ಮುದ್ದಲಿಂಗನಹಳ್ಳಿ | ಮುದ್ಲಿಂಗ್ನ್ ಹಳ್ಳಿ | ಮುದ್ದಿಂಗ್ನಳ್ಳಿ |
| ಸೋಮಪುರ | ಸೋಂಪುರ | ಸ್ವಾಂಪುರ |
| ಅಡಕಮಾರನಹಳ್ಳಿ | ಅಡ್ಕಮಾರ್ನಳ್ಳಿ | ಅಡ್ಕ್ಯಮಾರ್ನಳ್ಳಿ |
| ಕೆಂಚಯ್ಯನಪುರ | ಕೆಂಚಯ್ನ್ಪು ರ | ಕೆಂಚುನ್ಪುರ |
| ಗೆಜ್ಜಗಾರಕುಪ್ಪೆ | ಗೆಜ್ಜಾಗ್ರುಪ್ಪೆ | ಗೆಜ್ಜಕುಪ್ಪೆ |
| ತಾವರೆಕೆರೆ | ತಾವರ್ಕೆರೆ | ತ್ಯಾವ್ರುಕೆರೆ |
| ಹೊನ್ನಿಗನಹಟ್ಟಿ | ಹೊನ್ನಿಗ್ನಟ್ಟಿ | ಹೊನ್ನಿಗ್ಟಿ |

| | | |
|---|---|---|
| ಚಿಕ್ಕಮಾನ್ಯಗುಡ್ಡೆ | ಚಿಕ್ಕಮ್ನುಗುಡ್ಡೆ | ಚಿಕ್ಕಮ್ನ್‌ಗುಡೆ |
| ಕೇಶವಪುರ | ಕ್ಯಾಸಾಪುರ | ಕ್ಯಾಸಾಪುರ |
| ಎತ್ತಿನವಡೇರಪುರ | ವಡೇರಪುರ | ಒಡೇರ್ಪುರ |
| ಗೊಡ್ಡರಾಮನಹಳ್ಳಿ | ಗೊಡ್ರಾಮ್ನಹಳ್ಳಿ | ಗೊಡ್ರಾಮ್ಳಿ |
| ನಲ್ಲಗಾನಹಳ್ಳಿ | ನಲ್ಗಾನ್ಹಳ್ಳಿ | ನಲ್ಗಾನ್ಳಿ |
| ಸಾರಕನೂರು | ಸಾರಕ್ನೂರ್ | ಸರಕ್ನೂರ್ |

ಮೇಲಿನ ಪಟ್ಟಿಯಲ್ಲಿ ಬರಹರೂಪ (ಶಿಷ್ಟರೂಪ) ಬಳಕೆಯ ರೂಪದಿಂದ ಭಿನ್ನವಾಗಿರುವುದು ಕಂಡುಬರುತ್ತದೆ. ಬಳಕೆಯ ರೂಪದಲ್ಲಿ ಅಕ್ಷರಸ್ಥ ಸಮುದಾಯ ಹಾಗೂ ಅನಕ್ಷರಸ್ಥ ಸಮುದಾಯಗಳ ನಡುವೆಯೂ ವ್ಯತ್ಯಾಸ ಕಂಡುಬರುತ್ತದೆ.

ಶಿಷ್ಟರೂಪವು ದೀರ್ಘವಾದ ಹಾಗೂ ಸ್ಪಷ್ಟ ಉಚ್ಚಾರಣೆಯನ್ನು ಒಳಗೊಂಡಿರುತ್ತದೆ. ಬಳಕೆಯ ಸ್ತರದಲ್ಲಿ ಸ್ವರಗಳ ಸಂಖ್ಯೆ ಕಡಿಮೆಯಾಗುವ ಸಾಧ್ಯತೆ ಇರುತ್ತದೆ. ಸ್ವರಗಳ ಬಳಕೆಯಿಂದ ಸ್ಥಳನಾಮಗಳು ದೀರ್ಘವಾಗುತ್ತವೆ. ಸೌಲಭ್ಯಾಕಾಂಕ್ಷೆಯ ದೃಷ್ಟಿಯಿಂದ ಉದ್ದವಾಗಿರುವ, ಹೆಚ್ಚು ನಿರ್ದಿಷ್ಟಗಳನ್ನು ಹೊಂದಿರುವ ರೂಪಗಳು ಚುಟುಕಾಗಿ ಬಳಕೆಯಾಗುತ್ತವೆ. ಚುಟುಕು ರೂಪಗಳಲ್ಲಿ ಕೆಲವೊಮ್ಮೆ ಮೂಲರೂಪದ ನಿರ್ದಿಷ್ಟದ ಒಂದು ಭಾಗವೇ ಮರೆಯಾಗಬಹುದು.

ಜನ ಬಳಕೆಯ ಉಚ್ಚಾರಣೆಯ ರೂಪಗಳು ಸ್ಥಳೀಯವಾಗಿ ಒಂದು ರೀತಿಯಲ್ಲಿದ್ದರೆ, ಇತರರು ಬಳಸುವ ರೀತಿಗೂ ವ್ಯತ್ಯಾಸ ಕಂಡುಬರುತ್ತದೆ. ಸ್ಥಳಿಯೇತರ ಜನರ ಬಳಕೆಯು ಶಿಷ್ಟರೂಪಕ್ಕೆ ಸಾಮ್ಯತೆ ಇರವ ಸಂದರ್ಭವಿರುತ್ತದೆ.

## ೪.೯ ಸ್ವರಾಂತ್ಯ ಹಾಗೂ ವ್ಯಂಜನಾಂತ್ಯ ಸ್ಥಳನಾಮಗಳು

ಬೆಂಗಳೂರು ಗ್ರಾಮಾಂತರ ಪರಿಸರದಲ್ಲಿರುವ ಶಿಷ್ಟರೂಪದ ಸ್ಥಳನಾಮಗಳಲ್ಲಿ ಸ್ವರಾಂತ್ಯಗೊಳ್ಳುವಿಕೆ ಕಂಡುಬರುತ್ತದೆ. ಸ್ವರಾಂತ್ಯ ಪದ ವಿನ್ಯಾಸವು ಕನ್ನಡದ ಪದರಚನೆಯ ನಿಯಮವಾಗಿದೆ. ಆದರೆ ಜನಬಳಕೆಯಲ್ಲಿ ಅನೇಕ ಸ್ಥಳನಾಮಗಳು ವ್ಯಂಜ್ಯನಾಂತ್ಯವಾಗುತ್ತವೆ. ವ್ಯಂಜನಾಂತ್ಯವಾಗಿ ಬಳಕೆಯಾಗುವುದಕ್ಕೆ ಮುಖ್ಯ ಕಾರಣವೆಂದರೆ ಸೌಲಭ್ಯಾಕಾಂಕ್ಷೆಯೇ ಮುಖ್ಯ ಕಾರಣವಾಗಿದೆ. ಎಲ್ಲಾ ವಾರ್ಗಿಕಗಳೂ ವ್ಯಂಜನಾಂತ್ಯವಾಗುವುದಿಲ್ಲ. ಉ, ಅ, ಎ ಸ್ವರಾಂತ್ಯವಾಗುವ ಕೆಲವು ವಾರ್ಗಿಕ ಮಾತ್ರ ಈ ರೀತಿಯ ವ್ಯಂಜ್ಯನಾಂತ್ಯವಾಗುತ್ತವೆ.

**ಉದಾ : ವಾರ್ಗಿಕಗಳು :**

| ಸ್ವರಾಂತ್ಯ | | ವ್ಯಂಜನಾಂತ್ಯ |
|---|---|---|
| ಊರು | - | ಊರ್ |
| ನಗರ | - | ನಗರ್ |

| | | |
|---|---|---|
| ಕಾವಲು | - | ಕಾವಲ್ |
| ಪೇಟೆ | - | ಪೇಟ್ |

| **ಶಿಷ್ಟರೂಪ** | | **ಬಳಕೆಯ ರೂಪ** |
|---|---|---|
| ಕನಕಪುರ | - | ಕನಕಪುರ್ |
| ರಾಮನಗರ | - | ರಾಮನಗರ್ |
| ಚೀಲೂರು | - | ಚೀಲೂರ್ |
| ಗಬ್ಬಾಡಿ ಕಾವಲು | - | ಗಬ್ಬಾಡಿಕಾವಲ್ |
| ಅಬ್ಬೂರು | - | ಅಬ್ಬೂರ್ |
| ಚಪ್ಪರಕಲ್ಲು | - | ಚಪ್ಪರ್ ಕಲ್ |
| ಶುಕ್ರವಾರ ಪೇಟೆ | - | ಶುಕ್ರವಾರ ಪೇಟೆ |
| ನಲ್ಲೂರು | - | ನಲ್ಲೂರ್ |
| ದೊಡ್ಡಬಳ್ಳಾಪುರ | - | ದೊಡ್ಡಬಳ್ಳಾಪುರ್ |
| ದಾಬಸ್ ಪೇಟೆ | - | ದಾಬಸ್‌ಪೇಟ್ |

ಮೇಲಿನ ವ್ಯಂಜನಾಂತ್ಯ ಪಟ್ಟಿಯಲ್ಲಿನ ವಾರ್ಗಿಕಗಳ ಮೇಲೆ ಇಂಗ್ಲಿಷ್ ಭಾಷೆಯ ಪ್ರಭಾವವಾಗಿರುವುದರಿಂದ ವ್ಯಂಜ್ಯನಾಂತ್ಯವಾಗಿವೆ. ಈ ರೀತಿಯ ಪ್ರಭಾವವಿಲ್ಲದಿದ್ದಲ್ಲಿ ಮೂಲರೂಪ ಹಾಗೆಯೇ ಉಳಿಯುವ ಸಾಧ್ಯತೆ ಇರುತ್ತದೆ.

| **ಶಿಷ್ಟರೂಪ** | | **ಸ್ವರಾಂತ್ಯರೂಪ** |
|---|---|---|
| ಚೀರನಗುಪ್ಪೆ | - | ಚೀರನಗುಪ್ಪೆ |
| ಗಣಳು | - | ಗಣಳು |
| ಬಿಳಿದಾಳೆ | - | ಬಿಳಿದಾಳೆ |
| ಚಿಕ್ಕಮಣ್ಣು ಗುಡ್ಡೆ | - | ಚಿಕ್ಕಮನ ಗುಡ್ಡೆ |
| ನಾಯ್ಕೊಳ್ಳೆ | - | ನಾಯ್ಕೊಳ್ಳೆ |
| ನೀಲಸಂದ್ರ | - | ನೀಲಸಂದ್ರ |
| ದೊಡ್ಡ ಸಣ್ಣೆ | - | ದೊಡ್ಡ ಸಣ್ಣೆ |
| ಅಗ್ರಹಾರ | - | ಅಗ್ರಹಾರ |
| ಉಜ್ಜನಿ | - | ಉಜ್ಜನಿ |
| ಕಾಮಕುಂಟೆ | - | ಕಾಮಕುಂಟೆ |

| | | |
|---|---|---|
| ಹಣಬೆ | - | ಹಣಬೆ |
| ಶಿವಗಂಗೆ | - | ಶಿವಗಂಗೆ |

ಶಿಷ್ಟರೂಪಗಳು ಜನಬಳಕೆಯ ಸ್ತರದಲ್ಲಿ ಮೂಲರೂಪದಿಂದ ಬದಲಾವಣೆಯಾಗುತ್ತದೆಯಾದರೂ ಅಂತ್ಯದಲ್ಲಿ ಸ್ವರವನ್ನು ಹಾಗೆಯೇ ಉಳಿಸಿಕೊಳ್ಳುವುದನ್ನು ಗುರುತಿಸಲಾಗಿದೆ. ದೇಸೀಯ ರಚನೆಯ ಮೇಲೆ ಅನ್ಯಭಾಷೆಯ ಪ್ರಭಾವವಾಗದಿದ್ದಲ್ಲಿ ಈ ಮೂಲರೂಪಗಳು ಹಾಗೆಯೇ ಉಳಿಯುವ ಸಾಧ್ಯತೆ ಇರುತ್ತದೆ.

ಸ್ಥಳನಾಮಗಳು 'ಇ' ಸ್ವರದಿಂದ ಅಂತ್ಯಂಗೊಂಡಲ್ಲಿ, ಅಂತಹ ಸ್ಥಳನಾಮಗಳಲ್ಲಿ ಯಾವುದೇ ರೀತಿಯ ವ್ಯಂಜನಾಂತ್ಯವಾಗುವುದಿಲ್ಲ. 'ಇ' ಕಾರಾಂತ್ಯವಾದಲ್ಲಿ ಅದು ಹಾಗೆಯೇ ಉಳಿಯುತ್ತದೆ. ಶಿಷ್ಟರೂಪದ ಉಚ್ಚಾರಣೆಯಲ್ಲಿ ಏನೇ ವ್ಯತ್ಯಾಸವಾದರೂ, ಅಂತ್ಯದಲ್ಲಿ 'ಇ' ಸ್ವರವೇ ಉಳಿಯುತ್ತದೆ.

ಉದಾ: ಹಳ್ಳಿ (ವಾರ್ಗಿಕ)

| **ಶಿಷ್ಟರೂಪ** | | **ಬಳಕೆಯ ರೂಪ** |
|---|---|---|
| ಲಿಂಗನಹಳ್ಳಿ | - | ಲಿಂಗ್ನಳ್ಳಿ |
| ಬೆಟ್ಟದಹಳ್ಳಿ | - | ಬೆಟ್ಟಳ್ಳಿ |
| ಮಾದೇನಹಳ್ಳಿ | - | ಮಾದ್ನಳ್ಳಿ |
| ವಾಜರಹಳ್ಳಿ | - | ವಾಜ್ರಳ್ಳಿ |
| ಚಿಕ್ಕನಹಳ್ಳಿ | - | ಚಿಕ್ನಳ್ಳಿ |
| ಹರ್ತಿ | - | ಅರ್ತಿ |
| ಆವತಿ | - | ಆವ್ತಿ |
| ಬಿಡದಿ | - | ಬಿಡ್ದಿ |
| ಬೈರತಿ | - | ಬೈರ್ತಿ |

## ೪.೧೦ ಮಹಾಪ್ರಾಣಾಕ್ಷರಗಳು ಹಾಗೂ ಸ್ಥಳನಾಮಗಳು

ಸ್ಥಳನಾಮಗಳ ಆರಂಭಿಕ ವ್ಯಂಜನಗಳು ಸಾಮಾನ್ಯವಾಗಿ ಅಲ್ಪಪ್ರಾಣಗಳಾಗಿದ್ದು ಮಹಾಪ್ರಾಣಾಕ್ಷರಗಳಿಂದ ಆರಂಭವಾಗವ ಸ್ಥಳನಾಮಗಳನ್ನು ಗುರುತಿಸಬಹುದು. ಶಿಷ್ಟರೂಪದಲ್ಲಿ ಮಹಾಪ್ರಾಣಗಳ ಬಳಕೆ ಇರುತ್ತವೆಯಾದರೂ, ಜನರ ಬಳಕೆಯಲ್ಲಿ ಅಲ್ಪಪ್ರಾಣಗಳಾಗಿ ಉಚ್ಚಾರಣೆಯಾಗುತ್ತವೆ. ಅಕ್ಷರಸ್ಥರಲ್ಲಿ ಕೆಲವರು ಮಹಾಪ್ರಾಣಗಳನ್ನು ಅದೇ ರೀತಿ ಉಚ್ಚರಿಸುವರು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮಹಾಪ್ರಾಣಾಕ್ಷರಗಳಿಂದ ಆರಂಭವಾಗುವ ಸ್ಥಳನಾಮಗಳನ್ನು ಕೆಳಗಿನಂತೆ ಪಟ್ಟಿ ಮಾಡಲಾಗಿದೆ

| | |
|---|---|
| ಭೀಮಸಂದ್ರ - ಕ | ಭೈರನಾಯಕನಹಳ್ಳಿ - ಚ |
| ಭೈರಸಟ್ಟಹಳ್ಳಿ - ಚ | ಭೈರಪ್ಪನಹಳ್ಳಿ - ದೇ |
| ಭಟ್ರಮಾರೇನಹಳ್ಳಿ - ದೇ | ಭುವನಹಳ್ಳಿ - ದೇ |
| ಭಕ್ತರಹಳ್ಳಿ - ದೊ | ಭದ್ರಾಪುರ - ದೊ |
| ಭೀಮರಾಹುತನಹಳ್ಳಿ - ದೊ | ಭಾರತೀಪುರ - ನೆ |
| ಭೂಸಂದ್ರ - ನೆ | ಭೀಮನಹಳ್ಳಿ - ರಾ |
| ಭಕ್ತಗೊಂಡನಹಳ್ಳಿ - ಹೊ | ಭಟ್ಟರಹಳ್ಳಿ - ಹೊ |
| ಭೀಮಪುರ - ಚ | ಭೂವನಹಳ್ಳಿ |
| ಝುತ್ತೇಕೆರೆ - ಚ | ಘಂಟೆಹೊಸಹಳ್ಳಿ - ನೆ |

ಮೇಲಿನ ಪಟ್ಟಿಯಲ್ಲಿರುವ ಸ್ಥಳನಾಮಗಳ ಆರಂಭಿಕ ಅಕ್ಷರಗಳೆಲ್ಲವೂ ಮಹಾಪ್ರಾಣವಾಗಿದ್ದು ಆ ಅಕ್ಷರಗಳೆಲ್ಲವೂ 'ಭ್' ಆಗಿರುವುದು ಇಲ್ಲಿನ ವಿಶೇಷವಾಗಿದೆ. 'ಭ್', 'ಝು' ಹಾಗೂ 'ಘ' ಮಹಾಪ್ರಾಣಾಕ್ಷರದ ಹೊರತಾಗಿ ಬೇರೆಯಾವುದೇ ಮಹಾಪ್ರಾಣಾಕ್ಷರಗಳೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು ಆರಂಭದಲ್ಲಿ ಬಳಕೆಯಾಗಿಲ್ಲ. ಆದರೆ ಹೆಸರಿನ ಮಧ್ಯಭಾಗದಲ್ಲಿ ಫ, ಠ, ಥ, ಧ, ಭ ಮಹಾಪ್ರಾಣಾಕ್ಷರಗಳು ಬಳಕೆಯಾಗಿವೆ.

### ೪.೧೧ ಪ > ಹ : ಬದಲಾವಣೆ

"ಭಾಷೆಯು ಬದಲಾದಾಗ, ಭಾಷೆಗಳಲ್ಲಿ ವಿವಿಧ ಅವಸ್ಥೆಗಳು ಉಂಟಾಗುವಾಗ ಶಬ್ದಗಳಲ್ಲೂ ವ್ಯತ್ಯಾಸಗಳಾಗುತ್ತವೆ. ಕನ್ನಡ ಭಾಷೆಯ ಅನೇಕ ಶಬ್ದಗಳಲ್ಲಿ ಈ ಬಗೆಯ ವ್ಯತ್ಯಾಸಗಳಿರುವುದನ್ನು ಯಾರಾದರೂ ಗಮನಿಸಬಹುದು".[೧]

ಧ್ವನಿ ವ್ಯತ್ಯಾಸವು ಒಂದೇ ಭಾಷೆಯಲ್ಲಿ ಅಥವಾ ಮತ್ತೊಂದು ಭಾಷೆಯ ಪ್ರಭಾವದಿಂದ ಉಂಟಾಗುವ ಸಾಧ್ಯತೆ ಇರುತ್ತದೆ. ಪ್ > ಹ್ ಕಾರವಾಗಿ ಸ್ಥಿತ್ಯಂತರವಾಗಿರುವುದನ್ನು ಧ್ವನಿರೂಢಿ ಎಂದೂ ಕರೆಯಲಾಗಿದೆ. 'ಪ'ಕಾರದಿಂದ ಆರಂಭವಾಗುವ ಪದಗಳೆಲ್ಲವೂ ಬದಲಾವಣೆ ಆಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಕೆಲವೊಮ್ಮೆ ಪರಿವರ್ತನೆಯಾಗುವುದಿಲ್ಲ. ಸ್ಥಳನಾಮಗಳಲ್ಲಿನ ಪೂರ್ವಪದದ ಆರಂಭದಲ್ಲಿರುವ 'ಪ'ಕಾರ 'ಹ'ಕಾರವಾಗಿರುವುದಕ್ಕೆ ಕೆಲವು ಮಾದರಿಗಳನ್ನು ಇಲ್ಲಿ ಗುರುತಿಸಲಾಗಿದೆ.

ಪಾರುವ ಹಳ್ಳಿ > ಹಾರೋಹಳ್ಳಿ (ದೊ)

ಪೆರ್ಗಡೆಹಳ್ಳಿ > ಹೆಗ್ಗಡಹಳ್ಳಿ (ದೊ)

### ೪.೧೨ ತೆಲುಗು ಭಾಷೆಯ ಪದಗಳನ್ನೊಳಗೊಂಡಿರುವ ಸ್ಥಳನಾಮಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ತೆಲುಗು ಭಾಷೆಯ ಪದಗಳನ್ನೊಳಗೊಂಡಿರುವ ಸ್ಥಳನಾಮಗಳನ್ನು ಗುರುತಿಸಬಹುದು. ಈ ರೀತಿಯ ಸ್ಥಳನಾಮಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗಡಿಭಾಗಕ್ಕೆ ಹೊಂದಿಕೊಂಡಿರುವ ಕೋಲಾರ ಜಿಲ್ಲೆಯ ಪರಿಸರದಲ್ಲಿ ಹಾಗೂ ತೆಲುಗು ಮಾತನಾಡುವ ಜನರಿರುವಲ್ಲಿ ಕಂಡುಬರುತ್ತದೆ. ಈ ರೀತಿಯ

ಸ್ಥಳನಾಮಗಳ ನಿಷ್ಪನ್ನಕ್ಕೆ, ತೆಲುಗು ಪ್ರದೇಶದಿಂದ ವಲಸೆ ಬಂದಿರುವ ಜನಾಂಗವು ಕಾರಣವಾಗಿರುತ್ತದೆ. ತೆಲುಗು ಮಾತನಾಡುವ ಜನರು ಈ ಪ್ರದೇಶದಲ್ಲಿ ವಾಸವಿದ್ದು, ಅದರ ಪ್ರಭಾವದಿಂದಲೇ ಈ ಹೆಸರುಗಳು ಬಂದಿರುವ ಸಾಧ್ಯತೆ ಇದೆ.

**ಉದಾ:**

ರಾಳ್ಳಕುಂಟೆ (ಹೊ) : ರಾಳ್ಳು - ಕಲ್ಲು ಅರ್ಥ ನೀಡುವ ತೆಲುಗು ಪದವಾಗಿದೆ. ಕುಂಟೆ - ನೀರು ನಿಂತಿರುವ ಸ್ಥಳ. ತಗ್ಗಾದ ಭಾಗದಲ್ಲಿ ನೀರನ್ನು ತಡೆಯಲು ಕಟ್ಟೆಕಟ್ಟಿರುವುದು.
ರಾಳ್ಳು + ಕುಂಟೆ = ರಾಳ್ಳುಕುಂಟೆ > ರಾಳ್ಳಕುಂಟೆ ಆಗಿದೆ. ಇದು ಎರಡು ಭಾಷೆಗಳ ಮಿಶ್ರಣದಿಂದ ನಿಷ್ಪನ್ನಗೊಂಡಿದೆ.

ತಿಂಡ್ಲು (ದೇ) : ತಿಂಡಿ ಕನ್ನಡ ಪದವಾಗಿದೆ.
ತಿಂಡೀಲು - ತೆಲುಗು ಬಳಕೆಯ ಪದ, ಬಹುವಚನ ರೂಪ
ತಿಂಡಿಲು > ತಿಂಡಲು > ತಿಂಡುಲು > ತಿಂಡ್ಲು ಆಗಿರುವ ಸಾಧ್ಯತೆ ಇದೆ.
ಬರಗಾಲದ ಸಂದರ್ಭದಲ್ಲಿ ಜನರಿಗೆ ಆಹಾರವನ್ನು ಹಂಚುತ್ತಿದ್ದ ಸ್ಥಳವಾಗಿದ್ದಿತೆಂದೂ ಆದುದರಿಂದಲೇ 'ತಿಂಡ್ಲು' ಎಂಬ ಹೆಸರು ಬಂದಿರುವ ಸಾಧ್ಯತೆ ಇದೆ ಎಂದೂ ಹೇಳಲಾಗುತ್ತದೆ. ಕನ್ನಡದ 'ತಿಂಡಿ'ಗೆ 'ಲು' ತೆಲುಗು ಬಹುವಚನ ರೂಪ ಸೇರಿದೆ.

ಚಿನ್ನತಿಮ್ಮನಗೊಲ್ಲಹಳ್ಳಿ (ಹೊ) : ಚಿನ್ನ + ತಿಮ್ಮ + ಅ + ಗೊಲ್ಲ + ಹಳ್ಳಿ.
'ಚಿನ್ನ' ಎಂಬುದು ತೆಲುಗು ಪದವಾಗಿದ್ದು, 'ಚಿಕ್ಕ' ಎನ್ನುವ ಅರ್ಥವಿದೆ.
ಚಿಕ್ಕತಿಮ್ಮ - ವ್ಯಕ್ತಿವಾಚಿ, ಗೊಲ್ಲಹಳ್ಳಿ - ಜಾತಿವಾಚಿ ಆಗಿದೆ.

ಮಾರಲಗೊಂಡ್ಲ (ಮಾ) : ಮಾರಲು + ಕೊಂಡಲು > ಮಾರಲುಕೊಂಡಲು
ಮಾರಲುಕೊಂಡಲು > ಮಾರಲಕೊಂಡ್ಲು > ಮಾರಲಕೊಂಡ್ಲ ಆಗಿದೆ. 'ಲು' ಬಹುವಚನ ರೂಪವಾಗಿದೆ.
ಮಾರಲು - ವ್ಯಕ್ತಿವಾಚಿ ಬಹುವಚನ ರೂಪವಾಗಿರುವ ಸಾಧ್ಯತೆ ಇದೆ.
ಕೊಂಡಲು - 'ಬೆಟ್ಟಗಳು' ಎಂಬರ್ಥ ನೀಡುವ ಬಹುವಚನ ಪದ.

ಗುಂಡಲಹಳ್ಳಿ (ದೇ) : ಗುಂಡಲು + ಹಳ್ಳಿ > ಗುಂಡಲುಹಳ್ಳಿ
ಗುಂಡಲ - ಗುಂಡುಗಳು, ಕಲ್ಲುಗುಂಡುಗಳು, ಬಹುವಚನ ರೂಪ.
ತೆಲುಗಿನಲ್ಲಿ 'ಲ'ಕಾರವು ಬಹುವಚನ ಸಂಬಂಧವಾಚಿಯಾಗಿದೆ.
ಗುಂಡು - ಕನ್ನಡದಲ್ಲಿ ಬಳಕೆಯಲ್ಲಿದ್ದು ನುಣ್ಣನೆಯ ಮೂಲೆಗಳಿಲ್ಲದ ದುಬ್ಬು ಗುಂಡಾಕಾರದ ಕಲ್ಲು ಎಂಬರ್ಥ ನೀಡುತ್ತದೆ.

ಚೆಂಡಿನಾಕಾರದ ಕಲ್ಲುಗಳು, ಆಟಗಳಲ್ಲಿ ಬಳಸುವ ಗುಂಡುಗಳು, ಕೋವಿಯಲ್ಲಿ ಬಳಸುವ ಗುಂಡುಗಳು ಎಂಬರ್ಥ ನೀಡುತ್ತದೆ.

ತಾತವಾಲು : ತಾತ - ಅಜ್ಜ ಎಂಬರ್ಥ ನೀಡುವ ಕನ್ನಡ ಹಾಗೂ ತೆಲುಗು ಬಳಕೆಯ ಪದ. ವಾಲು < ವಾಳ್ಳು - ಬಹುವಚನ ನೀಡುವ ತೆಲುಗು ಪದವಾಗಿರುವ ಸಾಧ್ಯತೆ ಇದೆ. ವಾಳ್ಳು - ಅವರು ಎಂಬರ್ಥ ನೀಡುತ್ತದೆ. ಹಿರಿಯರು ವಾಸವಿದ್ದ ಸ್ಥಳ ಎಂಬರ್ಥ ನೀಡುತ್ತದೆ.

ಗುತ್ತಲಹುಣಸೆ (ಕ) : ಗುತ್ತಲ + ಹುಣಸೆ = ಗುತ್ತಲಹುಣಸೆ
ಗುತ್ತಲ – 'ಗೊಂಚಲು' ಅರ್ಥ ನೀಡುತ್ತದೆ. ಹುಣಸೆ – ವೃಕ್ಷವಾಚಿ, ಹುಣಸೇಮರ ಹುಣಸೆಮರದ ಗೊಂಚಲಿನಿಂದ ಈ ಹೆಸರು ನಿರ್ದೇಶನವಾಗಿರುವ ಸಾಧ್ಯತೆ ಇದೆ. 'ಲ' ಕಾರವು ಸಂಬಂಧವಾಚಿ ಅವ್ಯಯವಾಗಿದೆ.

ಪೇದ್ದನಪಾಳ್ಯ (ಮಾ) : ಪೆದ್ದ + ಅ + ಪಾಳ್ಯ
ಪೆದ್ದ – ಹಿರಿಯ ಎಂಬರ್ಥ ನೀಡುವ ತೆಲುಗುಪದ
'ಅ' ಷಷ್ಠಿ ಸಂಬಂಧಕಾರಕ ಅವ್ಯಯ
ಪಾಳ್ಯ – ವಾರ್ಗಿಕವಾಗಿದೆ.

ಬಂಡನ ಹಳ್ಳಿ (ಹೊ) : ಬಂಡ – ಕನ್ನಡದಲ್ಲಿ 'ಬಂಡೆ' ಅರ್ಥ ನೀಡುವ ಪದ.
ಬಂಡ + ಹಳ್ಳಿ > ಬಂಡಹಳ್ಳಿ

ಆಚಾರ್ಯ ಹಳ್ಳಿ : ಆಚಾರ್ಯ + ಹಳ್ಳಿ ಆಚಾರ್ಯ (ತೆ) – ಆಚಾರಿಗಳು ಕೆತ್ತನೆಯ, ಲೋಹಶಿಲ್ಪಿಗಳ, ಲೋಹದ ಕೆಲಸ ಮಾಡುವವ = ಅಕ್ಕಸಾಲಿಗ, ಕಮ್ಮಾರ ಅಕ್ಕಸಾಲಿನ ನೆಲೆ ಸೂಚಕ ಸ್ಥಳನಾಮವಾಗಿದೆ.

ತೆಲುಗು ಭಾಷೆಯನ್ನು ಪ್ರತಿನಿಧಿಸುವ ಸ್ಥಳನಾಮಗಳಲ್ಲಿ ಕಂಡುಬರುವ ತೆಲುಗು ಪದಗಳು ಸೇರಿರುವುದಕ್ಕೆ ತೆಲುಗು ಭಾಷಿಕರು ಕಾರಣರಾಗಿದ್ದಾರೆ. ಕನ್ನಡ ಪದ ಬಳಕೆಯಲ್ಲಿದ್ದು, ಅದನ್ನು ತೆಲುಗಿಗೆ ಅನುವಾದ ಮಾಡಿಕೊಂಡು ಬಳಸಿಕೊಂಡಿರುವ ಸಾಧ್ಯತೆ ಇದೆ.

ತೆಲುಗು ಮಾತೃ ಭಾಷೆಯನ್ನು ಹೊಂದಿರುವ ಜನರು ಕನ್ನಡದ ಸ್ಥಳನಾಮಗಳನ್ನು ತೆಲುಗೀಕರಣ ಮಾಡುವುದನ್ನು ಗುರುತಿಸಬಹುದು. ಈ ರೀತಿಯ ಸ್ಥಳನಾಮ ಬಳಕೆಯು ಆ ನಿರ್ದಿಷ್ಟ ವಲಯದಲ್ಲಿ ಬಳಕೆಯಲ್ಲಿರುತ್ತದೆ. ಸಾರ್ವಜನಿಕ ವಲಯದಲ್ಲಿ ಬಳಸಿರುವ ಉಚ್ಚಾರಣ ಮಾದರಿಗಳನ್ನು ಗುರುತಿಸಬಹುದು. ಈ ರೀತಿಯ ಉಚ್ಚಾರಣಾ ರೂಪಗಳನ್ನು ತೆಲುಗು ಮಾತೃಭಾಷಿಕರಲ್ಲಿ ಮಾತ್ರ ಗುರುತಿಸಬಹುದು.

| ನಿಜನಾಮ ರೂಪ | ತೆಲುಗುಭಾಷಿಕ ರೂಪ |
|---|---|
| ದೊಡ್ಡಬಳ್ಳಾಪುರ | ಪೆದ್ದಬಳ್ಳಾಪುರಂ |
| ದೇವನಹಳ್ಳಿ | ದೇವನಪಲ್ಲಿ |

| | |
|---|---|
| ಚನ್ನಪಟ್ಟಣ | ಚನ್ನಪಟ್ಟಣಂ |
| ಚಿಕ್ಕಬೆಳವಂಗಲ | ಚಿನ್ನ ಬೆಳವಂಗಲಂ |
| ಹುಲ್ಲುಕುಂಟೆ | ಹುಲ್ಕುಂಟ |
| ಆಗಲಕುಪ್ಪೆ | ಆಗಲಕುಪ್ಪ |
| ಹೊಸಕೋಟೆ | ಕೊತ್ತಕೋಟ |
| ಬಿದರಹಳ್ಳಿ | ಬಿದುರಪಲ್ಲಿ |
| ಮೇಲಿನತೋಟ | ಪೈನತೋಟಂ |

**೪.೧೩ ಭಾಷಾವಾರು ವಾರ್ಗಿಕಗಳು**

| ಕನ್ನಡ | ಸಂಸ್ಕೃತ | ತದ್ಭವರೂಪ | ತೆಲುಗು |
|---|---|---|---|
| ಊರು | ದುರ್ಗ | ಕೊಂಡ (ಕುಂಡ) | ಪುರಂ |
| ಏರಿ | ನಗರ | ಪಟ್ಟಣ (ಪತ್ತನ ) | ಪಟ್ಟಣಂ |
| ಕಣಿವೆ | ಪುರ | ವರ–ವಾರ (ಪುರ ) | ಪಲ್ಲಿ |
| ಕಲ್ಲು | ಪಟ್ಟಣ | ಸಂತೆ (ಸಂಸ್ಥಾ) | ತೋಟಂ |
| ಕುಂಟೆ | ಸಮುದ್ರ | ಹಳ್ಳಿ (ಪಲ್ಲೀ ) | ವಾಕಿಲು |
| ಕೆರೆ | | | ಕುಂಟೆ |
| ಕುಪ್ಪ | | | |
| ಕೊಪ್ಪಲು | | | |
| ಕೋಟೆ | | | |
| ಕೋಡು | | | |
| ಗದ್ದೆ | | | |
| ಗುಡ್ಡ | | | |
| ಗುಂಡು | | | |
| ತೋಟ | | | |
| ದೊಡ್ಡಿ | | | |
| ಬಾವಿ | | | |
| ಬೆಟ್ಟ | | | |
| ಹಟ್ಟಿ | | | |
| ವಾಡಿ | | | |

ಸೌಲಭ್ಯಾಕಾಂಕ್ಷೆಯು ಭಾಷೆಯ ಪ್ರಮುಖ ಲಕ್ಷಣವಾಗಿದೆ. ವಾಕ್ಯದಲ್ಲಿ ಬಳಕೆಯಾಗಿರುವ ಪದಗಳಲ್ಲಿ ಅಥವಾ ಬಿಡಿ ಪದಗಳು ಒಟ್ಟಿಗೆ ಸೇರಿದಾಗ ಅರ್ಥದ ಉತ್ಪತ್ತಿಯಾಗುತ್ತದೆ. ಈ ರೀತಿ ಎರಡು ಪದಗಳು ಒಟ್ಟಿಗೆ ಸೇರುವಿಕೆಯನ್ನು ಸಂಧಿಕಾರ್ಯ ಎಂದು ಕರೆಯಬಹುದು. ಇಂತಹ ಸಂದರ್ಭದಲ್ಲಿ ಮೇಲ್ನೋಟಕ್ಕೆ ಎರಡು ಪದಗಳು ಸೇರುದಂತೆ ಕಂಡುಬರುತ್ತದೆಯಾದರೂ, ಇಲ್ಲಿ ಸೇರುವುದು ಎರಡು ಅಕ್ಷರವಾಗಿರುತ್ತದೆ. ಈ ರೀತಿ ಅಕ್ಷರಗಳು ಸೇರಿ ಸಂಧಿ ಕಾರ್ಯ ನಡೆದಾಗ ಹೊಸ ಪದ ಸೃಷ್ಟಿಯಾಗುವಿಕೆಯನ್ನು ಗುರುತಿಸಬಹುದು. ಕೆಲವೊಮ್ಮೆ ಅಕ್ಷರ ಲೋಪವಾಗುವ, ಹೊಸದಾಗಿ ಆಗಮಿಸುವ, ಒಂದು ಅಕ್ಷರಕ್ಕೆ ಬದಲಾಗಿ ಮತ್ತೊಂದು ಅಕ್ಷರ ಪರ್ಯಾಯವಾಗಿ ಬಂದು ಸೇರುವ ಸಾಧ್ಯತೆ ಇರುತ್ತದೆ. ಈ ರೀತಿಯ ಬದಲಾವಣೆಗಳು ನಡೆಯದೇ ಇದ್ದಲ್ಲಿ ಅಂತಹ ಪದಗಳನ್ನು 'ಪ್ರಕೃತಿಭಾವ' ಎಂದು ಕರೆಯಬಹುದು. ಎರಡು ಪದಗಳು ಸೇರಿ ಸಂಧಿಕಾರ್ಯ ನಡೆಯುವಾಗ, ಅರ್ಥವು ಕೆಡುವಂತಿರಬಾರದು. ಆ ರೀತಿ ಅರ್ಥವು ಕೆಡುವಂತಿದ್ದರೆ ಸಂಧಿ ಮಾಡಬಾರದು.

ಸ್ಥಳನಾಮಗಳು ಎರಡು ಘಟಕಗಳಿಂದ ಕೂಡಿರುವುದನ್ನು ಗುರುತಿಸಬಹುದು. ನಿರ್ದಿಷ್ಟ ಮತ್ತು ವಾರ್ಗಿಕಗಳೆರಡೂ ಸೇರಿ ಸ್ಥಳನಾಮವಾಗಿ ರೂಪಿತವಾಗುವಾಗ ಸಂಧಿಕಾರ್ಯ ನಡೆದಿರುವ ಸಾಧ್ಯತೆ ಇರುತ್ತದೆ. ಸಂಧಿ ನಡೆಯದೇ ಇದ್ದಾಗ ಆ ಬಿಡಿ ಪದಗಳು ಹಾಗೆಯೇ ಉಳಿದು ಪ್ರಕೃತಿಭಾವವಾಗುತ್ತದೆ .

## ೪.೧೪ ಲೋಪಸಂಧಿಯಾಗಿರುವ ಸ್ಥಳನಾಮ ಮಾದರಿಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಈ ರೀತಿ ಸಂಧಿಕಾರ್ಯ ನಡೆದಿರುವ ಸ್ಥಳನಾಮಗಳನ್ನು ಗುರುತಿಸಲಾಗಿದೆ.ಲೋಪ ಸಂಧಿಯಾಗಿರುವುದರ ಸ್ಥಳನಾಮ ಮಾದರಿಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದ್ದು , ಪೂರ್ವಪದದ ಕೊನೆಯ ಸ್ವರಗಳು ಲೋಪವಾಗಿ ಉತ್ತರ ಪದಾದಿಯ ಸ್ವರವು ,ಪೂರ್ವಪದದ ಕೊನೆಯಲ್ಲಿ ಸೇರುವಿಕೆಯನ್ನು ಇಂತಹ ಸ್ಥಳನಾಮಗಳಲ್ಲಿ ಗುರುತಿಸಲಾಗಿದೆ.

| | |
|---|---|
| ಗೂಡು + ಊರು | = ಗೂಡೂರು - ಕ |
| ಚಿಕ್ಕ + ಕೊಪ್ಪ | = ಚಿಕ್ಕೊಪ್ಪ - ಕ |
| ಬ್ಯಾಳ + ಆಳು | = ಬ್ಯಾಳಾಳು - ಕ |
| ಸೋಲಿಗ + ಕೆರೆ | = ಸೋಲಿಗ್ಗೆರೆ - ಕ |
| ಕುಕ್ಕು + ಊರು | = ಕುಕ್ಕೂರು - ಚ |
| ಕೊಡ್ಲು + ಊರು | = ಕೊಡ್ಲೂರು - ಚ |
| ನೆರಳು + ಊರು | = ನೆರಳೂರು - ಚ |
| ವಿಠಲ + ಈಶ + ಹಳ್ಳಿ | = ವಿಠಲೇಶಹಳ್ಳಿ - ಚ |
| ಅಣ್ಣ + ಈಶ್ವರ | = ಅಣ್ಣೇಶ್ವರ - ದೇ |

ಹೊಸ + ಊರು = ಹೊಸೂರು - ದೇ

ನೀರು + ಏರಿ = ನೀರೇರಿ - ದೇ

ಬಿಜ್ಜ + ಆವರ = ಬಿಜ್ಜಾವರ - ದೇ

ಕಾಡನ + ಊರು = ಕಾಡನೂರು -ದೊ

ತೊಗರಿ + ಘಟ್ಟ = ತೊಗರೀಘಟ್ಟ - ದೊ

ಮಾದ + ಈಶ್ವರ = ಮಾದೇಶ್ವರ - ದೊ

ರಾಮ + ಈಶ್ವರ = ರಾಮೇಶ್ವರ - ದೊ

ಶ್ರವಣ + ಊರು = ಶ್ರವಣೂರು - ದೊ

ಹೊನ್ನ + ಆವರ = ಹೊನ್ನಾವರ - ದೊ

ದೊಡ್ಡ + ಏರಿ = ದೊಡ್ಡೇರಿ - ನೆ

ಹುರಳಿ + ಹಳ್ಳಿ = ಹುರಳೀಹಳ್ಳಿ - ನೆ

ಕೂಡು + ಊರು = ಕೂಡೂರು - ಮಾ

ಬಾಳೆ + ಕಟ್ಟೆ = ಬಾಳೇಕಟ್ಟೆ - ಮಾ

ರಂಗ +ಆಚಾರಿ + ಪಾಳ್ಯ = ರಂಗಾಚಾರಿಪಾಳ್ಯ - ಮಾ

ಸೋಲು + ಊರು = ಸೋಲೂರು - ಮಾ

ಲಕ್ಕ + ಓಜನ + ಹಳ್ಳಿ = ಲಕ್ಕೋಜನ ಹಳ್ಳಿ - ರಾ

ಹೊಸ + ಊರು = ಹೊಸೂರು - ರಾ

ಈಸ್ತು + ಊರು = ಈಸ್ತೂರು - ಹೊ

ಕಾನು + ಊರು = ಕಾನೂರು - ಹೊ

ಕಿತಿಗನ + ಊರು = ಕಿತಿಗನೂರು - ಹೊ

ಗಣಗಲು + ಊರು = ಗಣಗಲೂರು - ಹೊ

ಮೇದ + ಊರು = ಮೇದೂರು - ಹೊ

ಮಂದ + ಊರು = ಮಂದೂರು - ಹೊ

ಸೊಳ + ಊರು = ಸೊಳೂರು - ಹೊ

## ೪.೧೫ ಹೊಸ ಅಕ್ಷರ ಆಗಮವಾಗಿರುವ ಸ್ಥಳನಾಮಗಳು

ಹೊಸ ಅಕ್ಷರಗಳು ಆಗಮವಾಗಿರುವ ಸ್ಥಳನಾಮ ಮಾದರಿಗಳನ್ನು ಇಲ್ಲಿ ಪಟ್ಟಿಮಾಡಲಾಗಿದ್ದು, ನಿರ್ದಿಷ್ಟ ಹಾಗೂ ವಾರ್ಗಿಕಗಳು ಸೇರಿದಾಗ, ಹೊಸ ಅಕ್ಷರಗಳು ಬಂದು ಸೇರುವುದನ್ನು ಗುರುತಿಸಲಾಗಿದೆ. ಈ ಪಟ್ಟಿಯಲ್ಲಿ 'ಯ' ಹಾಗೂ 'ನ' ವ್ಯಂಜನಗಳು ಹೊಸದಾಗಿ ಸೇರಿರುವುದನ್ನು ಗುರುತಿಸಬಹುದು. 'ನ' ಕಾರಗಮವಾಗಿರುವ ಸ್ಥಳನಾಮಗಳು ಸಂಖ್ಯೆಯಲ್ಲಿ ಅಧಿಕವಾಗಿವೆ.

ರಾಮ + ಹಳ್ಳಿ = ರಾಮನಹಳ್ಳಿ – 'ಅ' ವಿಭಕ್ತಿ ಪ್ರತ್ಯಯದ ಜೊತೆ 'ನ್' ವ್ಯಂಜನ ಸೇರಿದೆ. ಈ ರೀತಿ 'ನ್'ಕಾರ ಬಂದಲ್ಲಿ, ವಿಶಿಷ್ಟ ಪದವು ವ್ಯಕ್ತಿವಾಚಿಯಾಗಿರುವ ಸಾಧ್ಯತೆ ಇರುತ್ತದೆ.

ಮಾದ + ಹಳ್ಳಿ = ಮಾದನಹಳ್ಳಿ – ಕ 'ನ 'ಕಾರಗಮ – ಕ

ಹನಿ+ ಊರು = ಹನಿಯೂರು – ಚ 'ಯ'ಕಾರಗಮ – ಚ

ಎಲೆ + ಊರು = ಎಲಿಯೂರು – 'ಯ'ಕಾರಾಗಮ – ಚ

ಸೌತೆಗೌಡ + ಹಳ್ಳಿ = ಸೌತೆಗೌಡನಹಳ್ಳಿ – 'ನ'ಕಾರಗಮ – ದೇ

ಸಾತ + ಊರು = ಸಾತನೂರು – 'ನ'ಕಾರಗಮ – ದೇ

ಕಾಡ +ಊರು = ಕಾಡನೂರು – 'ನ'ಕಾರಾಗಮ – ದೊ

ಕೆಂಗ + ಹಳ್ಳಿ = ಕೆಂಗನಹಳ್ಳಿ – 'ನ'ಕಾರಗಮ – ನೆ

ಬೇಣಚು + ಹಳ್ಳಿ = ಬೇಣಚನ ಹಳ್ಳಿ – 'ನ'ಕಾರಗಮ – ನೆ

ಬೊಮ್ಮ + ಹಳ್ಳಿ = ಬೊಮ್ಮನ ಹಳ್ಳಿ – 'ನ'ಕಾರಗಮ – ನೆ

ಮೈಲ + ಹಳ್ಳಿ = ಮೈಲನ ಹಳ್ಳಿ – 'ನ'ಕಾರಗಮ – ನೆ

ಶಿವ + ಪುರ = ಶಿವನಪುರ – 'ನ'ಕಾರಗಮ – ನೆ

ಕಣ್ಣ + ಊರು = ಕಣ್ಣನೂರು – 'ನ'ಕಾರಗಮ – ಮಾ

ನಾಗ + ಹಳ್ಳಿ = ನಾಗನ ಹಳ್ಳಿ – 'ನ'ಕಾರಗಮ – ಮಾ

ಭೀಮ + ಹಳ್ಳಿ = ಭೀಮನ ಹಳ್ಳಿ – 'ನ'ಕಾರಗಮ – ರಾ

ಮಾಯಿಗೆ + ಹಳ್ಳಿ = ಮಾಯಿಗನ ಹಳ್ಳಿ – 'ನ'ಕಾರಗಮ – ರಾ

ಚಿಕ್ಕ + ಹಳ್ಳಿ = ಚಿಕ್ಕನ ಹಳ್ಳಿ – 'ನ'ಕಾರಗಮ – ಹೊ

ತೆನೆ + ಊರು = ತೆನೆಯೂರು – 'ಯ'ಕಾರಗಮ –ಹೊ

ಆದೇಶ ಸಂಧಿ ಕಾರ್ಯವಾಗಿರುವ ಸ್ಥಳನಾಮ ಮಾದರಿಗಳನ್ನು ಮಹಾಪ್ರಬಂಧದಲ್ಲಿ ಪಟ್ಟಿಮಾಡಲಾಗಿದೆ. ಎರಡು ಪದಗಳು ಸೇರಿದಾಗ, ಉತ್ತರ ಪದಾದಿಯಲ್ಲಿರುವ ಕ್, ತ್,ಪ್ ವ್ಯಂಜನಗಳಿಗೆ ಆದೇಶವಾಗಿ ಗ್, ದ್, ಬ್ ವ್ಯಂಜನಗಳು ಬಂದು ಸೇರುತ್ತವೆ. ಅಧ್ಯಯನ ವ್ಯಾಪ್ತಿಯಲ್ಲಿರುವ ಸ್ಥಳನಾಮಗಳಲ್ಲಿ ಆದೇಶ ಸಂಧಿಯಾಗಿರುವ ಸ್ಥಳನಾಮಗಳನ್ನು ಗುರುತಿಸಲಾಗಿದೆ

ಅತ್ತಿ + ಕುಪ್ಪೆ = ಅತ್ತಿಗುಪ್ಪೆ - 'ಗ್'ಕಾರಾದೇಶ - ಕ

ಕೀರನ + ಕೆರೆ = ಕೀರನ ಗೆರೆ - 'ಗ್'ಕಾರಾದೇಶ - ಕ

ಕೋಟ +ಕಲ್ಲು = ಕೋಟಗಲ್ಲು - 'ಗ್'ಕಾರಾದೇಶ -ಕ

ತಟ್ಟಿ + ಕುಪ್ಪೆ = ತಟ್ಟಿಗುಪ್ಪೆ - 'ಗ್'ಕಾರಾದೇಶ - ಕ

ದೊಡ್ಡ + ಕುಳಿ = ದೊಡ್ಡಗುಳಿ - 'ಗ್'ಕಾರಾದೇಶ - ಕ

ನಿಡು + ಕಲ್ಲು = ನಿಡುಗಲ್ಲು - 'ಗ್'ಕಾರಾದೇಶ - ಕ

ಬಿಳಿ + ತಾಳೆ = ಬಿಳಿದಾಳೆ - 'ದ್'ಕಾರಾದೇಶ - ಕ

ಬೆಣ್ಣೆ + ಕೋಡು = ಬೆಣ್ಣೆಗೋಡು - 'ಗ್'ಕಾರಾದೇಶ - ಕ

ಸುನಂದ + ಕಟ್ಟೆ = ಸುನಂದಗಟ್ಟೆ - 'ಗ್'ಕಾರಾದೇಶ - ಕ

ಕೋಡಂ + ಪಳ್ಳಿ = ಕೋಡಂಬಳ್ಳಿ - 'ಬ್'ಕಾರಾದೇಶ - ಚ

ಮಲ್ಲನ + ಕೆರೆ = ಮಲ್ಲನಗೆರೆ - 'ಗ್'ಕಾರಾದೇಶ - ಚ

ಗೊಬ್ಬರ + ಕುಂಟೆ = ಗೊಬ್ಬರ ಗುಂಟೆ - 'ಗ್'ಕಾರಾದೇಶ - ದೇ

ಮೂಡು + ಕುರಿಕೆ = ಮೂಡುಗುರ್ಕಿ - 'ಗ್'ಕಾರಾದೇಶ - ದೇ

ಗರುಡ + ಕಲ್ಲು = ಗರುಡಗಲ್ಲು - 'ಗ್'ಕಾರಾದೇಶ - ದೊ

ತೂಬು + ಕೆರೆ = ತೂಬುಗೆರೆ - 'ಗ್'ಕಾರಾದೇಶ - ದೊ

ಕಡಬ + ಕೆರೆ = ಕಡಬಗೆರೆ - 'ಗ್'ಕಾರಾದೇಶ - ನೆ

ಕುಟ್ಟನ + ಕೆರೆ = ಕುಟ್ಟನಗೆರೆ - 'ಗ್'ಕಾರಾದೇಶ - ಮಾ

ದುಬ್ಬ + ಕೊಟ್ಟಿಗೆ = ದುಬ್ಬಗೊಟ್ಟಿಗೆ - 'ಗ್'ಕಾರಾದೇಶ - ಮಾ

ಮಾನ + ಕಲ್ಲು = ಮಾನಗಲ್ಲು - 'ಗ್'ಕಾರಾದೇಶ - ಮಾ

ಹೂಜಿ + ಕಲ್ಲು = ಹೂಜಿಗಲ್ಲು - 'ಗ್'ಕಾರಾದೇಶ - ಮಾ

ಗಣ + ಕಲ್ಲು = ಗಣಗಲ್ಲು - 'ಗ್'ಕಾರಾದೇಶ - ರಾ

ಬಿಳಿ + ಕುಂಬ = ಬಿಳಿಗುಂಬ - 'ಗ್'ಕಾರಾದೇಶ - ರಾ

ದಬ್ಬ + ಕುಂಟೆ = ದಬ್ಬಗುಂಟೆ - 'ಗ್'ಕಾರಾದೇಶ - ಹೊ

ಯನ + ಕುಂಟೆ = ಯನಗುಂಟೆ - 'ಗ್'ಕಾರಾದೇಶ - ಹೊ

ಚಿಕ್ಕ + ಅರಳ + ಕೆರೆ = ಚಿಕ್ಕಅರಳಗೆರೆ - 'ಗ್'ಕಾರಾದೇಶ -ಹೊ

ನಿರ್ದಿಷ್ಟ ಹಾಗೂ ವಾರ್ಗಿಕಗಳು ಸೇರಿ ಸ್ಥಳನಾಮ ರೂಪುಗೊಳ್ಳುವಾಗ ಉತ್ತರ ಪದಾದಿಯ ವ್ಯಂಜನಾಕ್ಷರವು ಬದಲಾವಣೆಯಾಗಿ ಮತ್ತೊಂದು ಅಕ್ಷರ ಸೇರುವಿಕೆಯನ್ನು 'ಅಕ್ಷರ ವ್ಯತ್ಯಯ' ಎಂದು ಕರೆಯಬಹುದು. ಈ ರೀತಿಯ ಅಕ್ಷರ ವ್ಯತ್ಯಯ ಹೊಂದಿರುವ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ.

ಉಯ್ಯ + ಹಳ್ಳಿ = ಉಯ್ಯಂಬಳ್ಳಿ - ಕ

ಕೋಡಿ + ಹಳ್ಳಿ = ಕೋಡಂಬಳ್ಳಿ - ಕ

ಬನ + ಹಟ್ಟಿ = ಬನವಟ್ಟಿ - ದೊ

ತೋಟ + ಹಳ್ಳಿ = ತೋಟದಳ್ಳಿ - ಕ

ದೇಶ + ಹಳ್ಳಿ = ದೇಶವಳ್ಳಿ - ಕ

ದೊಡ್ಡ ಕಲ್ಲ + ಹಳ್ಳಿ = ದೊಡ್ಡಕಲ್ಲಬಳ್ಳಿ - ಕ

ಹಸಿರು + ಹಳ್ಳಿ = ಹಸಿರುವಳ್ಳಿ - ಮಾ

## ೪.೧೬ ಸ್ಥಳನಾಮಗಳು ಹಾಗೂ ಸಮಾಸ ಪದಗಳು

ಎರಡು ಅಥವಾ ಹೆಚ್ಚಿನ ಪದಗಳು ಸೇರಿ ಅರ್ಥ ಬರುವಂತೆ ಒಂದೇ ಪದವಾಗುವಿಕೆಯೇ 'ಸಮಾಸ' ವೆಂದೂ 'ಸಮಸ್ತಪದ' ವೆಂದೂ ಕರೆಯಬಹುದು. ಬಿಡಿ ಪದಗಳನ್ನು ವಿಗ್ರಹ ವಾಕ್ಯ ಅಥವಾ ವ್ಯಸ್ತ ಪದವೆಂದು ಕರೆಯಲಾಗುತ್ತದೆ. ಸಮಾಸವಾಗುವಾಗ ಬಿಡಿಪದಗಳಲ್ಲಿ ಸೇರಿರುವ ವಿಭಕ್ತಿ ಪ್ರತ್ಯಯಗಳು ಲೋಪವಾಗಿ ಪ್ರಾತಿಪದಿಕಗಳು (ಪದಗಳು) ಒಂದಾಗುತ್ತವೆ.

ಸ್ಥಳನಾಮಗಳಲ್ಲಿ ಸಮಾಸವಾಗಿರುವಿಕೆಯನ್ನು ಗುರುತಿಸಬಹುದು. ಎರಡು ನಾಮಪದಗಳು ಸೇರಿ ಸಮಾಸವಾಗುವಾಗ ಉತ್ತರ ಪದದ ಅರ್ಥವು ಪ್ರಧಾನವಾಗಿದ್ದು ಪೂರ್ವಪದದ ಅರ್ಥಕ್ಕೆ ಅಧೀನವಾಗಿದ್ದಲ್ಲಿ ಅಂತಹ ಪದಗಳನ್ನು ತತ್ಪುರುಷ ಸಮಾಸವಾಗಿರುವ 'ಸಮಸ್ತ ಪದ' ವೆಂದು ಗುರುತಿಸಬಹುದು ನಿರ್ದಿಷ್ಟ ಹಾಗೂ ವಾರ್ಗಿಕಗಳು ಸೇರಿ ಸ್ಥಳನಾಮವಾಗುವ ಸಂದರ್ಭದಲ್ಲಿ ವಾರ್ಗಿಕವೇ ಪ್ರಧಾನ ಕಾರ್ಯ ನಿರ್ವಹಿಸುವುದನ್ನು 'ತತ್ಪುರುಷ ಸಮಾಸ ಪದ' ವೆಂದು ಗುರುತಿಸಬಹುದು.

ಅತ್ತಿಯ + ಕುಪ್ಪೆ = ಅತ್ತಿಗುಪ್ಪೆ - ಕ

ಕಣಿವೆಯ + ಕಟ್ಟೆ = ಕಣಿವೇಕಟ್ಟೆ - ಕ

ಕಾಡನ + ಹಳ್ಳಿ = ಕಾಡಹಳ್ಳಿ - ಕ

ಕೋಟೆಯ + ಕೊಪ್ಪ = ಕೋಟೆ ಕೊಪ್ಪ - ಕ

ತೇರಿನ + ಬೀದಿ = ತೇರು ಬೀದಿ - ಕ

ನಿಡಿದಾದ + ಕಲ್ಲು = ನಿಡುಗಲ್ಲು - ಕ

ಬಾಳೆಯ + ಪುರ = ಬಾಳೇ ಪುರ - ಕ

ಸೋಲಿಗರ + ಕೆರೆ = ಸೋಲಿಗ್ಗೆರೆ - ಕ

ಹೂವಿನ + ಕುಂಡ = ಹೂಕುಂಡ - ಕ

ಕೋಡಿಯ + ಪುರ = ಕೋಡಿಪುರ - ಚ

ಬ್ರಾಹ್ಮಣರ + ಪುರ = ಬಾಹ್ಮಣಪುರ - ಚ

ಸಿದ್ಧನ + ಪುರ = ಸಿದ್ಧಾಪುರ - ಚ

ಗೊಲ್ಲರ + ಹಳ್ಳಿ = ಗೊಲ್ಲಹಳ್ಳಿ - ಚ

ದೊಡ್ಡದು + ಜಾಲ = ದೊಡ್ಡಜಾಲ - ದೇ

ನೀರಿನ + ಏರಿ = ನೀರೇರಿ - ದೇ

ಪಂಡಿತನ + ಪುರ = ಪಂಡಿತ ಪುರ - ದೇ

ವೆಂಕಟನ + ಪುರ = ವೆಂಕಟಾಪುರ - ದೇ

ಹರಳಿನ + ಊರು = ಹರಳೂರು - ದೇ

ಹೊಸದು + ಹಳ್ಳಿ = ಹೊಸಹಳ್ಳಿ - ದೇ

ಕಲ್ಲಿನ + ಕೋಟೆ = ಕಲ್ಲುಕೋಟೆ - ದೊ

ಕಾಡನ + ಊರು = ಕಾಡನೂರು - ದೊ

ಕೋಳಿಯ + ಪುರ = ಕೋಳಿಪುರ - ದೊ

ಗಾಳಿಯ + ಪೂಜೆ = ಗಾಳಿಪೂಜೆ - ದೊ

ಜೋಯಿಸನ + ಅಗ್ರಹಾರ = ಜೋಯಿಸ ಅಗ್ರಹಾರ - ದೊ

ರಾಜನ + ಘಟ್ಟ = ರಾಜಘಟ್ಟ - ದೊ

ಕೃಷ್ಣರಾಜನ + ಪುರ = ಕೃಷ್ಣರಾಜಪುರ - ನೆ

ಗೌಡರ + ಹಳ್ಳಿ = ಗೌಡಹಳ್ಳಿ - ನೆ

ಲಕ್ಷ್ಮಿಯ + ಪುರ = ಲಕ್ಷ್ಮೀಪುರ - ನೆ

ಶ್ರೀಕಂಠನ + ಪುರ = ಶ್ರೀಕಂಠಪುರ - ನೆ

ಹಿರಿಯ + ಕುಂದ = ಹೆಗ್ಗುಂದ - ನೆ

ಕಲ್ಲಿನ + ಕೆರೆ = ಕಲ್ಕೆರೆ - ಮಾ

ಗಣಪತಿಯ + ಹಳ್ಳಿ = ಗಣಪತಿ ಹಳ್ಳಿ - ಮಾ

| | | |
|---|---|---|
| ಗಾಣದ + ಕಲ್ಲು | = | ಗಾಣಕಲ್ಲು - ಮಾ |
| ವಾಡೆಯ + ಹಳ್ಳಿ | = | ವಾಡಹಳ್ಳಿ - ಮಾ |
| ಹೊನ್ನಿನ + ಪುರ | = | ಹೊನ್ನಾಪುರ - ಮಾ |
| ತಡಿಕೆಯ + ವಾಗಿಲು | = | ತಡಿಕೆವಾಗಿಲು - ರಾ |
| ಒಡೆಯರ + ಹಳ್ಳಿ | = | ಒಡೇರಹಳ್ಳಿ - ರಾ |
| ಮಳೆಯ + ಹಳ್ಳಿ | = | ಮಳೆಹಳ್ಳಿ - ರಾ |
| ಕೆಂಪನ + ಪುರ | = | ಕೆಂಪಪುರ - ಹೊ |
| ನಿಡದು + ಘಟ್ಟ | = | ನಿಡಘಟ್ಟ - ಹೊ |
| ಭೀಮನ + ಪುರ | = | ಭೀಮಪುರ - ಹೊ |
| ಹಳೆಯ + ಹಳ್ಳಿ | = | ಹಳೇಹಳ್ಳಿ - ಹೊ |
| ಹಾರುವ + ಹಳ್ಳಿ | = | ಹಾರೋಹಳ್ಳಿ - ಹೊ |

ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಪದಗಳು ಸೇರಿ ಸಮಾಸಪದವಾಗುವ ಸಂದರ್ಭದಲ್ಲಿ, ಪೂರ್ವ ಪದವೇ ಪ್ರಧಾನವಾದಾಗ ಅದನ್ನು 'ವಿಶೇಷಣ'ವೆಂದು ಕರೆಯಲಾಗುವುದು. ಉತ್ತರ ಪದವು ವಿಶಿಷ್ಟವಾಗಿರುತ್ತದೆ. ಈ ಸಮಾಸದಲ್ಲಿ ಪೂರ್ವಪದವು ವಿಶೇಷಣವಾಗಿದ್ದು, ಸ್ಥಳನಾಮಗಳಲ್ಲಿನ ನಿರ್ದಿಷ್ಟಗಳು 'ವಿಶೇಷಣ'ಗಳಾಗುತ್ತವೆ. ವಾರ್ಗಿಕಗಳು ವಿಶೇಷ್ಯವಾಗಿರುತ್ತವೆ. ಕರ್ಮದಾರಯ ಈ ರೀತಿಯ ಸಮಾಸವಾಗುವಿಕೆಯನ್ನು '**ಕರ್ಮಧಾರಯ ಸಮಾಸ**'ವೆಂದು ಕರೆಯಬಹುದು.

| | | |
|---|---|---|
| ಕಾಡು ಇರುವ + ಹಳ್ಳಿ | = | ಕಾಡಹಳ್ಳಿ - ಕ |
| ಕೋಟೆಯಿರುವ + ಕೊಪ್ಪ | = | ಕೋಟೆಕೊಪ್ಪ - ಕ |
| ತಿಗಳರಿರುವ + ಹಳ್ಳಿ | = | ತಿಗಳರಹಳ್ಳಿ - ಕ |
| ದೇವರಿರುವ + ಹಳ್ಳಿ | = | ದೇವರಹಳ್ಳಿ - ಕ |
| ದೊಡ್ಡದಾದ + ಕೊಪ್ಪ | = | ದೊಡ್ಡಕೊಪ್ಪ - ಕ |
| ಬಾಳೆಯಿರುವ + ಪುರ | = | ಬಾಳೇಪುರ - ಕ |
| ಶಿವನಿರುವ + ಹಳ್ಳಿ | = | ಶಿವನಹಳ್ಳಿ - ಕ |
| ಹೊಸದಾದ + ಕೋಟೆ | = | ಹೊಸಕೋಟೆ - ಕ |
| ಎಲೆತೋಟವಿರುವ + ಹಳ್ಳಿ | = | ಎಲೆತೋಟದಹಳ್ಳಿ - ಚ |
| ಎಲೆಗಳಿರುವ + ಊರು | = | ಯಲೆಯೂರು - ಚ |

| | | |
|---|---|---|
| ರಾಮನಿರುವ + ಪುರ | = | ರಾಮಪುರ -ಚ |
| ಸೆಟ್ಟಿಯಿರುವ + ಹಳ್ಳಿ | = | ಸೆಟ್ಟಹಳ್ಳಿ -ಚ |
| ಹಾರುವನಿರುವ + ಕೊಪ್ಪ | = | ಹಾರೋಕೊಪ್ಪ -ಚ |
| ಕಗ್ಗಲ್ಲಿರುವ + ಹಳ್ಳಿ | = | ಕಗ್ಗಲಹಳ್ಳಿ -ದೇ |
| ಕೊಡುಗೆಯ + ಹಳ್ಳಿ | = | ಕೊಡಿಗೇನಹಳ್ಳಿ -ದೇ |
| ಪಂಡಿತನಿರುವ + ಪುರ | = | ಪಂಡಿತ ಪುರ -ದೇ |
| ಒಡೆಯರಿರುವ + ಹಳ್ಳಿ | = | ವಡೇರಹಳ್ಳಿ -ದೇ |
| ಕೆಳಗಿರುವ + ಜೂಗನಹಳ್ಳಿ | = | ಕೆಳಗಿನ ಜೂಗನ ಹಳ್ಳಿ -ದೇ |
| ಬನವಿರುವ + ಹಟ್ಟಿ | = | ಬನವಟ್ಟಿ -ದೊ |
| ಬ್ಯಾಡರಿರುವ + ಹಳ್ಳಿ | = | ಬ್ಯಾಡರಹಳ್ಳಿ -ದೊ |
| ಹಳೆಯದಾದ + ಕೋಟೆ | = | ಹಳೆಕೋಟೆ -ದೊ |
| ವಣಿಕರಿರುವ + ಹಳ್ಳಿ | = | ವಣಗರ ಹಳ್ಳಿ -ದೊ |
| ಕೆಂಪದಾದ + ಕಲ್ಲು | = | ಕಂಗಲ್ಲು -ನೆ |
| ತಾವರೆ ಗಿಡಗಳಿರುವ + ಕೆರೆ | = | ತಾವರೆ ಕೆರೆ -ನೆ |
| ದೊಡ್ಡದಾದ + ಬೇಲಿ | = | ದೊಡ್ಡಬೇಲಿ (ದೊಡ್ಡ ಬೆಲೆ) -ನೆ |
| ಮಹಿಮೆಯಿರುವ + ಪುರ | = | ಮಹಿಮಾ ಪುರ -ನೆ |
| ಕಂಚುಗಾರನಿರುವ + ಹಳ್ಳಿ | = | ಕೆಂಚುಗಾರನ ಹಳ್ಳಿ - ಮಾ |
| ದೊಡ್ಡದಾದ + ಏರಿ | = | ದೊಡ್ಡೇರಿ -ಮಾ |
| ಬೆಟ್ಟವಿರುವ + ಹಳ್ಳಿ | = | ಬೆಟ್ಟಹಳ್ಳಿ -ಮಾ |
| ಸೀಗೆಯಿರುವ + ಕುಪ್ಪೆ | = | ಸೀಗೆಕುಪ್ಪೆ -ಮಾ |
| ಹುಲಿಯಿರುವ + ಕಟ್ಟೆ | = | ಹುಲಿಕಟ್ಟೆ -ಮಾ |
| ಅರ್ಚಕರಿರುವ + ಹಳ್ಳಿ | = | ಅರ್ಚಕರ ಹಳ್ಳಿ -ರಾ |
| ಕುರುಬರಿರುವ + ಕಾರೇನ ಹಳ್ಳಿ | = | ಕುರುಬರ ಕಾರೇನಹಳ್ಳಿ -ರಾ |
| ಬಿಳಿಯದಾದ + ಕೆಂಪನ ಹಳ್ಳಿ | = | ಬಿಳಿಯಕೆಂಪನ ಹಳ್ಳಿ -ರಾ |
| ಶಾನಭೋಗನಿರುವ + ಹಳ್ಳಿ | = | ಶಾನಭೋಗನ ಹಳ್ಳಿ -ರಾ |
| ಹಿರಿದಾದ + ಜಾಲ | = | ಹೆಜ್ಜಾಲ -ರಾ |

ಕಾಡು ಇರುವ + ಅಗ್ರಹಾರ = ಕಾಡುಅಗ್ರಹಾರ -ಹೊ

ದಂಡು ಇರುವ + ಪಾಳ್ಯ = ದಂಡುಪಾಳ್ಯ -ಹೊ

ಭಟ್ಟರು ಇರುವ + ಹಳ್ಳಿ = ಭಟ್ಟರ ಹಳ್ಳಿ -ಹೊ

ಹನಿ ಬೀಳುವ + ಊರು = ಹನಿಯೂರು -ಹೊ

## ೪.೧೭ ದ್ವಿಗು ಸಮಾಸದ ಮಾದರಿಗಳು

ಪೂರ್ವಪದವು ಸಂಖ್ಯೆಸೂಚಕವಾಗಿದ್ದರೆ, ಅಂತಹ ಪದವು ದ್ವಿಗುಸಮಾಸದ ಮಾದರಿಯಾಗಿರುತ್ತದೆ. ಸ್ಥಳನಾಮಗಳಲ್ಲಿ ನಿರ್ದಿಷ್ಟವಾಗಿ ಸೇರಿರುವ ಪೂರ್ವ ಪದಾದಿಯಲ್ಲಿ ಈ ರೀತಿಯ ಸಂಖ್ಯಾವಾಚಕಗಳು ಸೇರಿರುವುದಕ್ಕೆ ಮಾದರಿಯನ್ನು ಗುರುತಿಸಬಹುದು.

ಏಕಾಕ್ಷಿ ಪುರ - ದೊ

ಇರ್ (ಎರಡು) ಇಗ್ರಿಚೇನಹಳ್ಳಿ - ನೆ

ಏಕ ರಾಜಪುರ -ತಿ ಹೊ

## ೪.೧೮ ವಿರುದ್ಧಾರ್ಥಕ ಘಟಕಗಳಿರುವ ಸ್ಥಳನಾಮಗಳು

ಸ್ಥಳನಾಮಗಳಲ್ಲಿ ವಿರುದ್ಧಾರ್ಥಕ ವಿಶಿಷ್ಟಗಳನ್ನು ಗುರುತಿಸಬಹುದಾಗಿದ್ದು, ಅಂತಹ ಮಾದರಿಗಳನ್ನು ಗುರುತಿಸಲಾಗಿದೆ.

ಚಿಕ್ಕ ಕಲ್ಲ ಬಾಳು x ದೊಡ್ಡ ಕಲ್ಲ ಬಳ್ಳಿ -ಕ

ಚಿಕ್ಕ ಮರಳ ವಾಡಿ x ದೊಡ್ಡ ಮರಳ ವಾಡಿ -ಕ

ಚಿಕ್ಕ ಮಾದುಡೆ x ದೊಡ್ಡ ಮುದುವಾಡಿ (ಮುದುವಾಡಿ । ಮಾದುಡೆ ಆಗಿರುವ ಸಾಧ್ಯತೆ ಇದೆ )-ಕ

ಚಿಕ್ಕ ಸಾದೇನ ಹಳ್ಳಿ x ದೊಡ್ಡ ಸಾದೇನ ಹಳ್ಳಿ -ಕ

ಚಿಕ್ಕ ಕೊಪ್ಪ x ದೊಡ್ಡ ಕೊಪ್ಪ -ಕ

ಚಿಕ್ಕೇನ ಹಳ್ಳಿ x ದೊಡ್ಡ ನ ಹಳ್ಳಿ -ಚ

ಹಳೇ ಹಳ್ಳಿ x ಹೊಸ ಹಳ್ಳಿ -ಚ

ಚಿಕ್ಕ ಗೊಲ್ಲ ಹಳ್ಳಿ x ದೊಡ್ಡ ಗೊಲ್ಲ ಹಳ್ಳಿ -ದೇ

ಚಿಕ್ಕ ತಟ್ಟೆ ಮಂಗಲ x ದೊಡ್ಡ ತಟ್ಟೆ ಮಂಗಲ -ದೇ

ಚಿಕ್ಕನ ಹಳ್ಳಿ x ದೊಡ್ಡಪ್ಪನ ಹಳ್ಳಿ -ದೇ

ಚಿಕ್ಕ ಸನ್ನೆ x ದೊಡ್ಡ ಸನ್ನೆ -ದೇ

ಚಿಕ್ಕ ಜಾಲ x ದೊಡ್ಡ ಜಾಲ -ದೇ

ಮೇಲಿನ ತೋಟ x ಕೆಳಗಿನ ತೋಟ –ದೇ

ಚಿಕ್ಕ ತುಮಕೂರು x ದೊಡ್ಡ ತುಮಕೂರು –ದೊ

ಚಿಕ್ಕ ಬೆಳವಂಗಲ x ದೊಡ್ಡ ಬೆಳವಂಗಲ–ದೊ

ಚಿಕ್ಕ ಮಂಕನಾಳು x ದೊಡ್ಡ ಮಂಕನಾಳು–ದೊ

ಚಿಕ್ಕ ಹೆಜ್ಜಾಜಿ x ದೊಡ್ಡ ಹೆಜ್ಜಾಜಿ –ದೊ

ಚಿಕ್ಕ ವಡಿಗೆರೆ x ದೊಡ್ಡ ವಡಿಗೆರೆ –ದೊ

ಹಳೆಕೋಟೆ x ಹೊಸಕೋಟೆ

ಮೇಲಿನ ನಾಯಕರ ಹಳ್ಳಿ x ಕೆಳಗಿನ ನಾಯಕರ ಹಳ್ಳಿ –ದೊ

ಮೇಲಿನ ಜೂಗನ ಹಳ್ಳಿ x ಕೆಳಗಿನ ಜೂಗನ ಹಳ್ಳಿ –ದೊ

ಹಳೇನ ಹಳ್ಳಿ x ಹೊಸ ಹಳ್ಳಿ –ನೆ

ಚಿಕ್ಕನ ಹಳ್ಳಿ x ದೊಡ್ಡನ ಹಳ್ಳಿ –ಮಾ

ಚಿಕ್ಕ ಮಸ್ಕಲ್ಲು x ದೊಡ್ಡ ಮಸ್ಕಲ್ಲು –ಮಾ

ಚಿಕ್ಕ ಮೂಡಿಗೆರೆ x ದೊಡ್ಡ ಮೂಡಿಗೆರೆ –ಮಾ

ಚಿಕ್ಕ ಅಮಾನಿಕೆರೆ x ದೊಡ್ಡ ಅಮಾನಿಕೆರೆ –ಮಾ

ಚಿಕ್ಕ ಅರಳಗೆರೆ x ದೊಡ್ಡ ಅರಳಗೆರೆ –ಮಾ

ಚಿಕ್ಕ ಕೂಳಿಗ x ದೊಡ್ಡ ಕೂಳಿಗ–ಹೊ

ಚಿಕ್ಕ ಗಟ್ಟಿಗ ನಬ್ಬೆ x ದೊಡ್ಡ ಗಟ್ಟಿಗ ನಬ್ಬೆ –ಹೊ

ಚಿಕ್ಕ ತಗಲಿ x ದೊಡ್ಡ ತಗಲಿ –ಹೊ

ಹಳೇನ ಹಳ್ಳಿ x ಹೊಸ ಹಳ್ಳಿ –ಹೊ

ಮೇಲಿನ ಪಟ್ಟಿಯಲ್ಲಿರುವ ವಿರುದ್ಧಾರ್ಥಕ ಪದಗಳೆಂದರೆ, ಚಿಕ್ಕ x ದೊಡ್ಡ, ಹಳೆ x ಹೊಸ, ಮೇಲಿನ x ಕೆಳಗಿನ ವಿಶೇಷಣ ಸೂಚಕ ಅಂಶಗಳಾಗಿವೆ.

## ೪.೧೯ ಸ್ಥಳನಾಮಗಳಲ್ಲಿ ಭಾಷಿಕ ಬದಲಾವಣೆ

ಭಾಷಿಕ ಬದಲಾವಣೆಯು ಜೀವಂತ ಭಾಷೆಯ ಲಕ್ಷಣವಾಗಿರುವುದರಿಂದ , ಸ್ಥಳನಾಮಗಳಲ್ಲಿ ಇದು ಸಾಮಾನ್ಯವಾಗಿದೆ . ಈ ರೀತಿಯ ಬದಲಾವಣೆಗಳಿಗೆ ಸೌಲಭ್ಯಾಕಾಂಕ್ಷೆ ಮತ್ತು ಮಿತವ್ಯಯಾಸಕ್ತಿಗಳು ಕಾರಣವಾಗಿವೆ. ಅವುಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. 'ಎ' ಸ್ವರವು 'ಯ' ವ್ಯಂಜನವಾಗಿ ಬದಲಾವಣೆಯಾಗಿರುವಿಕೆ.

ಎಡೆಮಾರನಹಳ್ಳಿ > ಯೆಡೆಮಾರನಹಳ್ಳಿ > ಯಡಮಾರನಹಳ್ಳಿ –ಕ

ಎರೆಹಳ್ಳಿ > ಯೆರೆಹಳ್ಳಿ > ಯರೆಹಳ್ಳಿ –ಕ

ಎಲಚವಾಡಿ > ಯೆಲಚಹಳ್ಳಿ > ಯಲಚಹಳ್ಳಿ -ಕ

ಎಲೆಯೂರು > ಯೆಲೆಯೂರು > ಯಲಿಯೂರು -ಚ

ಎಲೆಹೊಸಹಳ್ಳಿ > ಯೆಲೆಹೊಸಹಳ್ಳಿ > ಯಲೆಹೊಸಹಳ್ಳಿ -ಚ

ಎದ್ದಲಹಳ್ಳಿ > ಯೆದ್ಲಹಳ್ಳಿ > ಯದ್ಲ ಹಳ್ಳಿ -ದೊ

ಎರಮಂಚನ ಹಳ್ಳಿ > ಯೆರಮಂಚನ ಹಳ್ಳಿ > ಯರಮಂಚನ ಹಳ್ಳಿ

ಎಲಚಗೆರೆ > ಯೆಲಚಗೆರೆ > ಯಲಚಗೆರೆ -ನೆ

ಎಲೆಕ್ಯಾತನ ಹಳ್ಳಿ > ಯೆಲೆಕ್ಯಾತನ ಹಳ್ಳಿ > ಯಲೆಕ್ಯಾತನಹಳ್ಳಿ - ನೆ

ಎಲಚಗುಪ್ಪೆ > ಯೆಲಚಗುಪ್ಪೆ > ಯಲಚ ಗುಪ್ಪೆ -ಮಾ

ಎಲ್ಲಾಪುರ > ಯೆಲ್ಲಾಪುರ > ಯಲ್ಲಾಪುರ -ಮಾ

ಎರೆಪಾಳ್ಯ > ಯೆರೆಪಾಳ್ಯ > ಯರೆಪಾಳ್ಯ -ರಾ

ಎನಗುಂಟೆ > ಯುನಗುಂಟೆ > ಯನಗುಂಟೆ -ಹೊ

ಎಡಗೊಂಡನ ಹಳ್ಳಿ > ಯೆಡಗೊಂಡನ ಹಳ್ಳಿ > ಯಡಗೊಂಡನ ಹಳ್ಳಿ -ಹೊ

ಎರಪ್ಪನಹಳ್ಳಿ > ಯೆರಪ್ಪನ ಹಳ್ಳಿ > ಯರಪ್ಪನಹಳ್ಳಿ -ಹೊ

ಎಲಚನಾಯಕನಪುರ > ಯೆಲಚನಾಯಕನಪುರ > ಯಲಚನಾಯಕನಪುರ -ಹೊ

### ೪.೨೦ ಅವಧಾರಣೆ

ಆದಿಯಲ್ಲಿ ಬರುವ 'ಎ' ಕಾರಕ್ಕೆ 'ಯ್' ಕಾರವನ್ನು ದೀರ್ಘ ಸ್ವರದೊಂದಿಗೆ ಸೇರಿಸಿ ಉಚ್ಚಾರಣೆ ಮಾಡುವುದು ಸಹಜವಾಗಿರುತ್ತದೆ. ಇವುಗಳನ್ನು ಅವಧಾರಣೆ ಎಂದು ಕರೆಯಬಹುದು.

ದೇವಸಂದ್ರ > ದ್ಯಾವಸಂದ್ರ -ಕ

ಬೇಡರ ಹಳ್ಳಿ > ಬ್ಯಾಡರ ಹಳ್ಳಿ -ಚ

ದೇವರ ಹಳ್ಳಿ > ದ್ಯಾವರ ಹಳ್ಳಿ -ದೇ

ತೇಮಗೊಂಡ್ಲು > ತ್ಯಾಮಗೊಂಡ್ಲು -ನೆ

ತೇಗದ ಹಳ್ಳಿ > ತ್ಯಾಗದಹಳ್ಳಿ -ನೆ

### ೪.೨೧ ಆದಿಯ 'ಒ' ಸ್ವರವು 'ವ' ಕಾರವಾಗಿ ಬಳಕೆಯಾಗಿರುವಿಕೆ

ಒಡೆಯರ ಹಳ್ಳಿ > ಒಡೇರಹಳ್ಳಿ > ವಡೇರ ಹಳ್ಳಿ -ಕ

ಓಜರ ಹಳ್ಳಿ > ವಾಜರ ಹಳ್ಳಿ -ದೇ

ಒಡ್ಡರ ಹಳ್ಳಿ > ವಡ್ಡರ ಹಳ್ಳಿ-ದೊ

ಓಬಸಂದ್ರ > ವಾಬಸಂದ್ರ ದೊ

ಓಬನಾಯಕನ ಹಳ್ಳಿ > ವಾಬನಾಯಕನ ಹಳ್ಳಿ -ನೆ

ಓ ಜರ ಪಾಳ್ಯ > ವಾಜರ ಪಾಳ್ಯ -ನೆ

ಒಳಗೇರಿ ಪುರ > ವಳಗೇರಿ ಪುರ -ಹೊ

## ೪.೨೨ ಆದಿಯಲ್ಲಿನ 'ಹ್'ಕಾರ ಲೋಪವಾಗಿರುವ ಸ್ಥಳನಾಮಗಳು

ಅನುಮನ ಹಳ್ಳಿ < ಹನುಮನ ಹಳ್ಳಿ -(ಕ ಹಾಗೂ ರಾ)

ಆವತಿ < ಹಾವತಿ -ದೇ

## ೪.೨೩ ಪದಮಧ್ಯದ 'ಹ್'ಕಾರ ಲೋಪ

ಪದಮಧ್ಯದ 'ಹ್'ಕಾರ ಲೋಪವಾಗಿ 'ಆ' ಸ್ವರ ಮಾತ್ರ ಉಳಿದುಕೊಳ್ಳುವಿಕೆಯನ್ನು ಸ್ಥಳನಾಮಗಳಲ್ಲಿ ಗುರುತಿಸಬಹುದು. ಬರವಣಿಗೆಯಲ್ಲಿ 'ಹ್'ಕಾರ ಬಳಕೆಯಾಗಿದ್ದರೂ, ಉಚ್ಚಾರಣೆಯಲ್ಲಿ ಮಾತ್ರ ಇದು ಬಿಟ್ಟು ಹೋಗುತ್ತದೆಯಾದ್ದರಿಂದ, ಇದಕ್ಕೆ ಸೌಲಭ್ಯಾಕಾಂಕ್ಷೆ ಕಾರಣವಾಗಿದೆ.

ಆಲ + ಹಳ್ಳಿ = ಆಲಳ್ಳಿ -ಕ

ಕಲ್ಲ + ಹಳ್ಳಿ = ಕಲ್ಲಳ್ಳಿ -ಕ

ದೊಡ್ಡ + ಕಬ್ಬ + ಹಳ್ಳಿ = ದೊಡ್ಡ ಕಬ್ಬಳ್ಳಿ -ಕ

ಹೊಸ + ಹಳ್ಳಿ = ಹೊಸಳ್ಳಿ -

ಕೋತನ + ಹಳ್ಳಿ = ಕೋತನಳ್ಳಿ -ಚ

ಬ್ಯಾಡರ + ಹಳ್ಳಿ = ಬ್ಯಾಡರಳ್ಳಿ -ಚ

ಬೊಮ್ಮನ + ಹಳ್ಳಿ = ಬೊಮ್ಮನಳ್ಳಿ -ಚ

ಮಾಗೇನ + ಹಳ್ಳಿ = ಮಾಗೇನಳ್ಳಿ -ಚ

ಸಾದ + ಹಳ್ಳಿ = ಸಾದಳ್ಳಿ -ಚ

ಕಗ್ಗಲ + ಹಳ್ಳಿ = ಕಗ್ಗಲಳ್ಳಿ -ದೇ

ಚಿಕ್ಕನ + ಹಳ್ಳಿ = ಚಿಕ್ಕನಳ್ಳಿ -ದೇ

ಮೈಲನ + ಹಳ್ಳಿ = ಮೈಲನಳ್ಳಿ -ದೇ

ಹಂದರ + ಹಳ್ಳಿ = ಹಂದರಳ್ಳಿ -ದೇ

ಹೆಗ್ಗನ + ಹಳ್ಳಿ = ಹೆಗ್ಗನಳ್ಳಿ -ದೇ

ಕಾಳೇನ + ಹಳ್ಳಿ = ಕಾಳೇನಳ್ಳಿ -ದೊ

ಗಂಟಿಗಾನ + ಹಳ್ಳಿ = ಗಂಟಿಗಾನಳ್ಳಿ -ದೊ

ನರಗನ + ಹಳ್ಳಿ = ನರಗನಳ್ಳಿ -ದೊ

ಲಿಂಗನ + ಹಳ್ಳಿ = ಲಿಂಗನಳ್ಳಿ -ದೊ

ಸೊಣ್ಣೇನ + ಹಳ್ಳಿ = ಸೊಣ್ಣೇನಳ್ಳಿ -ದೊ

ಕಾಚನ + ಹಳ್ಳಿ = ಕಾಚನಳ್ಳಿ -ನೆ

ಕೋಡಿ +ಹಳ್ಳಿ = ಕೋಡಿಅಳ್ಳಿ -ನೆ

ಪಿಲ್ಲ + ಹಳ್ಳಿ = ಪಿಲ್ಲಳ್ಳಿ -ನೆ

ಗೌಡ + ಹಳ್ಳಿ = ಗೌಡಳ್ಳಿ -ನೆ

ಮುದ್ದೇನ + ಹಳ್ಳಿ = ಮುದ್ದೇನಳ್ಳಿ -ನೆ

ಅಜ್ಜನ + ಹಳ್ಳಿ = ಅಜ್ಜನಳ್ಳಿ -ಮಾ

ಗುಡ್ಡಲ + ಹಳ್ಳಿ = ಗುಡ್ಡಲಹಳ್ಳಿ -ಮಾ

ಜುಟ್ಟನ + ಹಳ್ಳಿ = ಜುಟ್ಟನಹಳ್ಳಿ -ಮಾ

ಬೆಟ್ಟ + ಹಳ್ಳಿ =ಬೆಟ್ಟಹಳ್ಳಿ -ಮಾ

ಸುಗ್ಗನ + ಹಳ್ಳಿ = ಸುಗ್ಗನಳ್ಳಿ -ಮಾ

ಅಂಕನ + ಹಳ್ಳಿ = ಅಂಕನಳ್ಳಿ -ರಾ

ಕೆಂಚಿಗರ + ಹಳ್ಳಿ = ಕೆಂಚಿಗರಳ್ಳಿ -ಕ

ಜಿಗೇನ + ಹಳ್ಳಿ = ಜಿಗೇನಳ್ಳಿ -ರಾ

ಮಾಯಿಗನ + ಹಳ್ಳಿ = ಮಾಯಿಗನಳ್ಳಿ -ರಾ

ಶಿವನ + ಹಳ್ಳಿ = ಶಿವನಳ್ಳಿ -ರಾ

ಕಟ್ಟಿಗೇನ + ಹಳ್ಳಿ = ಕಟ್ಟಿಗೇನಳ್ಳಿ -ಹೊ

ಗೇರ + ಹಳ್ಳಿ = ಗೇರಳ್ಳಿ -ಹೊ

ಬಂಡ + ಹಳ್ಳಿ = ಬಂಡಳ್ಳಿ -ಹೊ

ಬಿಟ್ಟ + ಹಳ್ಳಿ = ಬಿಟ್ಟಳ್ಳಿ -ಹೊ

ಸಿದ್ದನ + ಹಳ್ಳಿ = ಸಿದ್ದನಳ್ಳಿ -ಹೊ

### ೪.೨೪ ಸಜಾತೀಯ ಒತ್ತಕ್ಷರದ ಸ್ಥಳನಾಮಗಳು

ಗುಳ್ಳಹಟ್ಟಿಕಾವಲು = ಗ್+ಉ+ಳ್+ಳ್+ಅ+ಹ್+ಅ+ಟ್+ಟ್+ಇ+ಕ್+ಆ+ವ್+ಅ+ಲ್+ಉ-ಕ

ತಮ್ಮಸಂದ್ರ = ತ್+ಅ+ಮ್+ಮ್+ಅ+ಸ್+ಅಂ+ದ್+ರ್+ಅ -ಕ

ದೊಡ್ಡಕಲ್ಲಬಳ್ಳಿ = ದ್+ಒ+ಡ್+ಡ್+ಅ+ಕ್+ಅ+ಲ್+ಲ್+ಅ+ಬ್+ಅ+ಳ್+ಳ್+ಇ-ಕ

ಬನ್ನಿಮುಕ್ಕೋಡ್ಲು = ಬ್+ಅ+ನ್+ನ್+ಇ+ಮ್+ಉ+ಕ್+ಕ್+ಓ+ಡ್+ಲ್+ಉ-ಕ

ಮಲ್ಲಾಪುರ = ಮ್+ಅ+ಲ್+ಲ್+ಆ+ಪ್+ಉ+ರ್+ಅ -ಕ

ಅಬ್ಬೂರು = ಅ+ಬ್+ಬ್+ಊ+ರ್+ಉ-ಚ

ಚಿಕ್ಕಮಣ್ಣುಗುಡ್ಡೆ = ಚ್+ಇ+ಕ್+ಕ್+ಅ+ಮ್+ಅ+ಣ್+ಣ್+ಉ+ಗ್+ಉ+ಡ್+ಡ್+ಎ-ಚ

ಬಳ್ಳಾಪಟ್ಟಣ = ಬ್+ಅ+ಳ್+ಳ್+ಆ+ಪ್+ಅ+ಟ್+ಟ್+ಅ+ಣ್+ಅ-ಚ

ಸುಣ್ಣಘಟ್ಟ = ಸ್+ಉ+ಣ್+ಣ್+ಅ+ಘ್+ಅ+ಟ್+ಟ್+ಅ-ಚ

ಕೊಟ್ಟಿಗೆತಿಮ್ಮನಹಳ್ಳಿ =

ಕ್+ಒ+ಟ್+ಟ್+ಇ+ಗ್+ಎ+ತ್+ಇ+ಮ್+ಮ್+ಅ+ನ್+ಅ+ಹ್+ಅ+ಳ್+ಳ್+ಇ -ದೇ

ದೊಡ್ಡ ಸನ್ನೆ = ದ್+ಒ+ಡ್+ಡ್+ಅ+ಸ್+ಅ+ನ್+ನ್+ಎ -ದೇ

ಬಿಜ್ಜಾವರ = ಬ್+ಇ+ಜ್+ಜ್+ಆ+ವ್+ಅ+ರ್+ಅ -ದೇ

ಹೆಗ್ಗನ ಹಳ್ಳಿ = ಹ್+ಎ+ಗ್+ಗ್+ಅ+ನ್+ಅ+ಹ್+ಅ+ಳ್+ಳ್+ಇ -ದೇ

ಕಲ್ಲು ಕೋಟೆ = ಕ್+ಅ+ಲ್+ಲ್+ಉ+ಕ್+ಓ+ಟ್+ಎ -ದೊ

ಚಿಕ್ಕ ಹೆಜ್ಜಾಜಿ = ಚ್+ಇ+ಕ್+ಕ್+ಅ+ಹ್+ಎ+ಜ್+ಜ್+ಆ+ಜ್+ಇ -ದೊ

ತಮ್ಮಶೆಟ್ಟಿ ಹಳ್ಳಿ = ತ್+ಅ+ಮ್+ಮ್+ಅ+ಶ್+ಎ+ಟ್+ಟ್+ಇ+ಹ್+ಅ+ಳ್+ಳ್+ಇ -ದೊ

ದೊಡ್ಡಬಳ್ಳಾಪುರ = ದ್+ಒ+ಡ್+ಡ್+ಅ+ಬ್+ಅ+ಳ್+ಳ್+ಆ+ಪ್+ಉ+ರ್+ಅ -ದೊ

ಗೊಲ್ಲರ ಪಾಳ್ಯ = ಗ್+ಒ+ಲ್+ಲ್+ಅ+ರ್+ಅ+ಪ್+ಆ+ಳ್+ಯ್+ಅ -ನೆ

ಚಿಕ್ಕಣ್ಣನ ಹಳ್ಳಿ = ಚ್+ಇ+ಕ್+ಕ್+ಅ+ಣ್+ಣ್+ಅ+ನ್+ಅ+ಹ್+ಅ+ಳ್+ಳ್+ಇ -ನೆ

ಬಳ್ಳಕೆರೆ =ಬ್+ಅ+ಳ್+ಳ್+ಅ+ಕ್+ಎ+ರ್+ಎ -ನೆ

ಬಿಲ್ಲನ ಕೋಟೆ = ಬ್+ಇ+ಲ್+ಲ್+ಅ+ನ್+ಅ+ಕ್+ಓ+ಟ್+ಎ -ನೆ

ಆಲದ ಕಟ್ಟೆ = ಅ+ಲ್+ಅ+ದ್+ಅ+ಕ್+ಅ+ಟ್+ಟ್+ಎ -ಮಾ

ಗಟ್ಟೀ ಪುರ = ಗ್+ಅ+ಟ್+ಟ್+ಈ+ಪ್+ಉ+ರ್+ಅ -ಮಾ

ಗುಡ್ಡಲ ಹಳ್ಳಿ = ಗ್+ಉ+ಡ್+ಡ್+ಅ+ಹ್+ಅ+ಳ್+ಳ್+ಇ -ಮಾ

ಜುಟ್ಟನ ಹಳ್ಳಿ = ಜ್+ಉ+ಟ್+ಟ್+ಅ+ನ್+ಅ+ಹ್+ಅ+ಳ್+ಳ್+ಇ -ಮಾ

ದಬ್ಬಗುಳ್ಳಿ = ದ್+ಅ+ಬ್+ಅ+ಗ್+ಉ+ಳ್+ಳ್+ಇ -ಮಾ

ಅಣ್ಣ ಹಳ್ಳಿ = ಅ+ಣ್+ಣ್+ಅ+ಹ್+ಅ+ಳ್+ಳ್+ಇ -ರಾ

ಚನ್ನಮ್ಮನ ಹಳ್ಳಿ = ಚ್+ಅ+ನ್+ನ್+ಅ+ಮ್+ಮ್+ಅ+ನ್+ಅ+ಹ್+ಅ+ಳ್+ಳ್+ಇ -ರಾ

ಬಣ್ಣ ಹಳ್ಳಿ = ಬ್+ಅ+ಣ್+ಣ್+ಅ+ಹ್+ಅ+ಳ್+ಳ್+ಇ -ರಾ

ಸಬ್ಬಕೆರೆ = ಸ್+ಅ+ಬ್+ಬ್+ಅ+ಕ್+ಎ+ರ್+ಎ -ರಾ

ಕನ್ನೂರು ಹಳ್ಳಿ = ಕ್+ಅ+ನ್+ನ್+ಊ+ರ್+ಅ+ಹ್+ಅ+ಳ್+ಳ್+ಇ -ಹೊ

ಚಿಕ್ಕ ಕಗ್ಗಲಿ = ಚ್+ಇ+ಕ್+ಕ್+ಅ+ಕ್+ಅ+ಗ್+ಗ್+ಅ+ಲ್+ಇ -ಹೊ

ಚೊಕ್ಕಹಳ್ಳಿ = ಚ್+ಒ+ಕ್+ಕ್+ಅ+ಹ್+ಅ+ಳ್+ಳ್+ಇ -ಹೊ

ತಿಮ್ಮಪ್ಪನ ಹಳ್ಳಿ = ತ್+ಇ+ಮ್+ಮ್+ಅ+ಪ್+ಪ್+ಅ+ನ್+ಅ+ಹ್+ಅ+ಳ್+ಳ್+ಇ -ಹೊ

ಸೆಟ್ಟಿಹಳ್ಳಿ = ಸ್+ಎ+ಟ್+ಟ್+ಇ+ಹ್+ಅ+ಳ್+ಳ್+ಇ -ಹೊ

## ೪.೨೫ ವಿಜಾತೀಯ ಒತ್ತಕ್ಷರದ ಸ್ಥಳನಾಮ ಮಾದರಿಗಳು

ಕೆಬ್ರೆ = ಕ್+ಎ+ಬ್+ರ್+ಎ -ಕ

ತಮ್ಮಸಂದ್ರ = ತ್+ಅ+ಮ್+ಮ್+ಅ+ಸ್+ಅಂ+ದ್+ರ್+ಅ -ಕ

ಸೋಮೇದ್ಯಾಪನ ಹಳ್ಳಿ = ಸ್+ಓ+ಮ್+ಎ+ದ್+ಯ್+ಆ+ಪ್+ಅ+ನ್+ಅ+ಹ್+ಅ+ಳ್+ಳ್+ಇ -ಕ

ಹಾರೋವತಿ ಪಾಳ್ಯ = ಹ್+ಆ+ರ್+ಓ+ವ್+ಅ+ತ್+ಇ+ಪ್+ಆ+ಳ್+ಯ್+ಅ -ಕ

ಕೃಷ್ಣಾಪುರ = ಕ್+ಋ+ಷ್+ಣ್+ಆ+ಪ್+ಉ+ರ್+ಅ -ಚ

ಬ್ಯಾಡರ ಹಳ್ಳಿ = ಬ್+ಯ್+ಆ+ಡ್+ಅ+ರ್+ಅ+ಹ್+ಅ+ಳ್+ಳ್+ಇ -ಚ

ಬ್ರಾಹ್ಮಣಪುರ = ಬ್+ರ್+ಆ+ಹ್+ಮ್+ಣ್+ಇ+ಪ್+ಉ+ರ್+ಉ–ಚ

ಮಾರ್ಚನ್ನ ಹಳ್ಳಿ = ಮ್+ಆ+ರ್+ಚ್+ಅ+ನ್+ನ್+ಅ+ಹ್+ಅ+ಳ್+ಳ್+ಇ -ಚ

ಶುಕ್ರವಾರ ಪೇಟೆ = ಶ್+ಉ+ಕ್+ರ್+ಅ+ವ್+ಆ+ರ್+ಅ+ಪ್+ಏ+ಟ್+ಎ -ಚ

ತಿಂಡ್ಲು = ತ್+ಇಂ+ಡ್+ಲ್+ಉ–ದೇ

ಪ್ರಸನ್ನ ಹಳ್ಳಿ = ಪ್+ರ್+ಅ+ಸ್+ಅ+ನ್+ನ್+ಅ+ಹ್+ಅ+ಳ್+ಳ್+ಇ -ದೇ

ಯಂಬ್ರ ಹಳ್ಳಿ = ಯ್+ಅಂ+ಬ್+ರ್+ಅ+ಹ್+ಅ+ಳ್+ಳ್+ಇ–ದೇ

ಶ್ರೋತ್ರೀಯ ತೆಲ್ಲೋಹಳ್ಳಿ = ಶ್+ರ್+ಓ+ತ್+ರ್+ಈ+ಯ್+ಅ+ತ್+ಎ+ಲ್–ದೇ

ಶ್ಯಾನಪ್ಪನ ಹಳ್ಳಿ = ಶ್+ಯ್+ಆ+ನ್+ಅ+ಪ್+ಪ್+ಅ+ನ್+ಅ+ಹ್+ಅ+ಳ್+ಳ್+ಇ -ದೇ

ಏಕಾಕ್ಷಿಪುರ = ಏ+ಕ್+ಆ+ಕ್+ಷ್+ಇ+ಪ್+ಉ+ರ್+ಅ -ದೊ

ಗಂದ್ರಗೊಲ್ಲಿಪುರ = ಗ್+ಅ+ದ್+ರ್+ಅ+ಗ್+ಒ+ಲ್+ಲ್+ಇ+ಪ್+ಉ+ರ್+ಅ -ದೊ

ಕೀಲಾರ್ಲಹಳ್ಳಿ = ಕ್+ಈ+ಲ್+ಆ+ರ್+ಲ್+ಅ+ಹ್+ಅ+ಳ್+ಳ್+ಇ -ದೊ

ಭದ್ರಾಪುರ = ಭ್+ಅ+ದ್+ರ್+ಆ+ಪ್+ಉ+ರ್+ಅ -ದೊ

ಶಾಸ್ತ್ರೀ ಪಾಳ್ಯ = ಶ್+ಆ+ಸ್+ತ್+ರ್+ಈ+ಪ್+ಆ+ಳ್+ಯ್+ಅ -ದೊ

ಕೃಷ್ಣರಾಜಪುರ = ಕ್+ಋ+ಷ್+ಣ್+ಅ+ರ್+ಆ+ಜ್+ಅ+ಪ್+ಉ+ರ್+ಅ -ನೆ

ಗ್ರಿಗೇನಹಳ್ಳಿ = ಗ್+ರ್+ಇ+ಗ್+ಏ+ನ್+ಅ+ಹ್+ಅ+ಳ್+ಳ್+ಇ -ನೆ

ಶ್ರೀಕಂಠಪುರ = ಶ್+ರ್+ಈ+ಕ್+ಅಂ+ಠ್+ಅ+ಪ್+ಉ+ರ್+ಅ -ನೆ

ಹುಸ್ಕೂರು = ಹ್+ಉ+ಸ್+ಕ್+ಊ+ರ್+ಉ -ನೆ

ಹ್ಯಾದಾಳು =ಹ್+ಯ್+ಆ+ದ್+ಆ+ಳ್+ಉ -ನೆ

ಕಾರ್ಲಹಳ್ಳಿ = ಕ್+ಆ +ರ್+ಲ್+ಅ+ಹ್+ಅ+ಳ್+ಳ್+ಇ -ಮಾ

ಚಕ್ರ ಭಾವಿ =ಚ್+ಅ+ಕ್+ರ್+ಅ+ಭ್+ಆ+ವ್+ಇ -ಮಾ

ಪಾರ್ವತ ಪಾಳ್ಯ = ಪ್+ಆ+ರ್+ವ್+ಅ+ತ್+ಅ+ಪ್+ಆ+ಳ್+ಯ್+ಅ -ಮಾ

ಬಾಲ್ಯದ ಕೆರೆ = ಬ್+ಯ್+ಆ+ಲ್+ಅ+ದ್+ಅ+ಕ್+ಎ+ರ್+ಎ -ಮಾ

ಲಕ್ಕ ಸಂದ್ರ = ಲ್+ಅ+ಕ್+ಕ್+ಅ+ಸ್+ಅಂ+ದ್+ರ್+ಅ -ರಾ

ಲಕ್ಷ್ಮೀ ಪುರ = ಲ್+ಅ+ಕ್+ಷ್+ಮ್+ಈ+ಪ್+ಉ+ರ್+ಅ -ರಾ

ಸಿಡ್ಲ ಕಲ್ಲು = ಸ್+ಇ+ಡ್+ಲ್+ಅ+ಕ್+ಅ+ಲ್+ಲ್+ಉ-ರಾ

ಹರಿಸಂದ್ರ = ಹ್+ಅ+ರ್+ಇ+ಸ್+ಅಂ+ದ್+ರ್+ಅ-ರಾ

ಈಸ್ತೂರು = ಈ+ಸ್+ತ್+ಊ+ರ್+ಉ- ಹೊ

ಭಕ್ತರ ಹಳ್ಳಿ = ಭ್+ಅ+ಕ್+ತ್+ಅ+ರ್+ಅ+ಹ್+ಅ+ಳ್+ಳ್+ಇ -ಹೊ

ಸತ್ಯವಾರ = ಸ್+ಅ+ತ್+ಯ್+ಅ+ವ್+ಆ+ರ್+ಅ -ಹೊ

ವಾಬಸಂದ್ರ = ವ್+ಆ+ಬ್+ಅ+ಸ್+ಅಂ+ದ್+ರ್+ಅ -ಹೊ

ವಗಟಾ ಅಗ್ರಹಾರ = ವ್+ಅ+ಗ್+ಅ+ಟ್+ಆ+ಅ+ಗ್+ರ್+ಅ+ಹ್+ಆ+ರ್+ಅ -ಹೊ

---

ಅಡಿ ಟಿಪ್ಪಣಿಗಳು

೧. ಡಾ। ಸೋಮಶೇಖರಗೌಡ, ಭಾಷೆ ರಚನೆ - ಬಳಕೆ, ಪುಟ ೦೭

೨. ಡಾ। ಆರ‍್ಕೆ ಮಣಿಪಾಲ, ಹೆಸರಿನಲ್ಲೇನಿದೆ? ಪುಟ ೧೯

೩. ಕೆಮ್ತೂರು ರಘುಪತಿಭಟ್ಟ, ತುಳುನಾಡಿನ ಸ್ಥಳನಾಮಗಳು, ಪುಟ ೧೫

೪. ಕೆಮ್ತೂರು ರಘುಪತಿಭಟ್ಟ, ತುಳುನಾಡಿನ ಸ್ಥಳನಾಮಗಳು, ಪುಟ ೧೮

೫. ಡಾ। ಆರ್ಕೆ ಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೧೯

೬. ರಾಜೇಗೌಡ ಎಚ ಕೆ. ಬೆಂಗಳೂರು ಕೆಂಪೇಗೌಡ ಮತ್ತು ಅವನ ವಂಶಸ್ಥರು, ಪುಟ [illegible]

೭. ಡಾ। ಆರ್ಕೆ ಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೧೮

೮. ಡಾ। ಆರ್ಕೆ ಮಣಿಪಾಲ, ಹೆಸರಿನಲ್ಲೇನಿದೆ? ಪುಟ ೧೯

೯. ಕೆಮ್ತೂರ ರಘುಪತಿ ಭಟ್ಟ, ತುಳುನಾಡಿನ ಸ್ಥಳನಾಮಗಳು, ಪುಟ ೧೭

೧೦. ಡಾ। ಚಿದಾನಂದ ಮೂರ್ತಿ ಎಂ., ಕರ್ನಾಟಕ ಸ್ಥಳನಾಮಗಳು, ವಾಗರ್ಥ, ಪುಟ ೨೭

೧೧. ಡಾ। ಆರ್ಕೆ ಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೩೦

೧೨. ಡಾ। ಆರ್ಕೆ ಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೧೨

೧೩. ಡಾ। ಗೋಪಾಲಕೃಷ್ಣ ಎ., ಸ್ಥಳನಾಮ ಅಧ್ಯಯನಗಳು, ಪುಟ ೭೦

೧೪. ಡಾ। ಗೋಪಾಲಕೃಷ್ಣ ಎ., ಸ್ಥಳನಾಮ ಅಧ್ಯಯನಗಳು, ಪುಟ ೬೯

೧೫. ಎಪಿಗ್ರಾಫಿಕಾ ಕರ್ನಾಟಕ IX ದೇವನಹಳ್ಳಿ

೧೬. ಎಪಿಗ್ರಾಫಿಕಾ ಕರ್ನಾಟಕ IX ದೇವನಹಳ್ಳಿ

೧೭. ಎಪಿಗ್ರಾಫಿಕಾ ಕರ್ನಾಟಕ IX ದೇವನಹಳ್ಳಿ

೧೮. ಡಾ। ಎಂ. ಚಿದಾನಂದ ಮೂರ್ತಿ, ಕರ್ನಾಟಕ ಸ್ಥಳನಾಮಗಳು, ವಾಗರ್ಥ, ಪುಟ ೩೫

೧೯. ಡಾ। ಆರ್ಕೆ ಮಣಿಪಾಲ , ಹೆಸರಿನಲ್ಲೇನಿದೆ?, ಪುಟ ೧೨

೨೦. ಬೊಮ್ಮೇಗೌಡ, ಚನ್ನಪಟ್ಟಣ ತಾಲ್ಲೂಕು ಸ್ಥಳನಾಮಗಳು, (ಅಪ್ರಕಟಿತ ಎಂ.ಫಿಲ್. ನಿಬಂಧ) ಬೆಂಗಳೂರು ವಿ.ವಿ., ಪುಟ ೪೯

# ೫

# ಸ್ಥಳನಾಮಗಳ ಸಾಮಾಜಿಕ ಅಧ್ಯಯನ

## ಪ್ರವೇಶ

ಸಮಾಜವು ಮಾನವನ ಸಾಂಘಿಕ ಜೀವನವನ್ನು ಸೂಚಿಸುತ್ತದೆ. ಸಂಸ್ಕೃತಿಯು ಮಾನವನ ಬುದ್ಧಿ ವಿಕಾಸ, ಮಾನಸಿಕ ಪಕ್ವತೆ, ನಾಗರಿಕತೆ ಹಾಗೂ ಬೌದ್ಧಿಕ ಸಾಧನೆಯ ಸಂಕೇತವಾಗಿದೆ. ಸಂಸ್ಕೃತಿಯು ಯಾದೃಚ್ಛಿಕವಾಗಿದ್ದು ಕಾಲದಿಂದ ಕಾಲಕ್ಕೆ ಹಾಗೂ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಜನಜೀವನ ವಿಧಾನವನ್ನು ಪ್ರತಿಬಿಂಬಿಸುವ ಶಕ್ತಿ ಸಮಾಜ ಮತ್ತು ಸಂಸ್ಕೃತಿ. ಮಾನವನ ವರ್ತನೆ, ಭಾಷೆ, ಆಚಾರ, ಧರ್ಮ, ಉಡುಗೆ - ತೊಡುಗೆ ಮುಂತಾದ ಅಂಶಗಳೆಲ್ಲವೂ ಸಂಸ್ಕೃತಿಯಿಂದಲೇ ವ್ಯಕ್ತವಾಗುತ್ತದೆ. ಈ ಅಂಶಗಳ ಮೂಲಕವೇ ಪ್ರಾಚೀನಮಾನವನ ಬೌದ್ಧಿಕವಿಕಾಸ ತಿಳಿದುಬರುತ್ತದೆ. ಸ್ಥಳನಾಮಗಳು ಪ್ರಾಚೀನ ಸಮಾಜ ಮತ್ತು ಸಂಸ್ಕೃತಿಯನ್ನು ಅರಿಯಲು ಮುಖ್ಯ ಸಾಧನವಾಗಿದ್ದು ಶಂಬಾ ಜೋಶಿಯವರು ತಮ್ಮ ಸಂಸ್ಕೃತಿ ಅಧ್ಯಯನ ಕೃತಿಗಳ ಮೂಲಕ ತೋರಿಸಿಕೊಟ್ಟಿದ್ದಾರೆ. ಸ್ಥಳನಾಮಗಳನ್ನು ಸಂಸ್ಕೃತಿವಾಹಕ ಸಾಧನಗಳೆಂದು ಗುರುತಿಸಿಕೊಂಡು ಕರ್ನಾಟಕದ ಸಂಸ್ಕೃತಿಯ ಅಧ್ಯಯನ ಮಾಡಿದ್ದಾರೆ.

ಸ್ಥಳನಾಮಗಳು ಸಾಮಾಜಿಕ ಅಂಶಗಳನ್ನು ಬಿಂಬಿಸುವ ಪ್ರಮುಖವಾದ ಸಾಧನವಾಗಿದೆ. ವ್ಯಕ್ತಿ ಜಾತಿ, ವೃತ್ತಿ, ವರ್ಗ, ದೈವಿಕ ವಿಷಯ ಮುಂತಾದವು ಸಾಮಾಜಿಕ ಅಂಶಗಳಲ್ಲಿ ಮುಖ್ಯವಾಗಿವೆ. ಒಂದು ಊರು ಅಥವಾ ಭೂಪ್ರದೇಶಗಳಲ್ಲಿ ಗುರುತಿಸಲ್ಪಡುವ ವಿಶಿಷ್ಟತೆಗಳಲ್ಲಿ ಸಾಮಾಜಿಕ - ಸಾಂಸ್ಕೃತಿಕ ಅಂಶಗಳು ಸೇರಿವೆ.

ಸಾಂಘಿಕ ಜೀವನದಲ್ಲಿ ಪರಸ್ಪರ ಅವಲಂಬನೆ ಗುರುತಿಸಬಹುದು. ಈ ರೀತಿಯ ಅವಲಂಬನೆಯಿಂದಾಗಿಯೇ ನಾಲ್ಕು ವರ್ಣಗಳು ಸೃಷ್ಟಿಯಾದವು. ಕಾಲಾಂತರದಲ್ಲಿ ನಾಲ್ಕು ವರ್ಣಗಳು ಕೆಳಸ್ತರದ ಸಣ್ಣ ಸಣ್ಣ ಗುಂಪುಗಳಾಗಿ ವಿಭಜನೆಯಾಗಿ, ಅನೇಕ ಜಾತಿ - ಉಪಜಾತಿಗಳು ಸೃಷ್ಟಿಯಾದವು. ಕೆಲವು ಜಾತಿಗಳು-ನಿರ್ದಿಷ್ಟ ವೃತ್ತಿಯನ್ನಿಟ್ಟುಕೊಂಡವು. ಅದೇ ಕುಲಕಸುಬುಗಳಾದವು. ಆ ವೃತ್ತಿಗಳು ಮತ್ತು ಜಾತಿಗಳು ಪರಸ್ಪರ ಒಂದನ್ನೊಂದು ಪ್ರತಿಬಿಂಬಿಸುವಂತೆ ಸಮಾಜದಲ್ಲಿ ಅಳವಡಿಕೆಯಾಯಿತು. ಜಾತಿ ಮತ್ತು ವೃತ್ತಿ ಎಷ್ಟು ಪ್ರಾಮುಖ್ಯತೆ ಪಡೆಯಿತೆಂದರೆ, ಒಂದು ಸ್ಥಳವನ್ನು ಗುರುತಿಸಲು ಇದೇ ನಿರ್ದಿಷ್ಟಗಳಾಗಿ ಬಳಕೆಯಾದವು. ಈ ರೀತಿಯ ಸ್ಥಳನಾಮಗಳು ಎಲ್ಲಾ ಪ್ರದೇಶಗಳಲ್ಲಿಯೂ ಗುರುತಿಸಬಹುದು.

ಸಾಮಾಜಿಕ - ಸಾಂಸ್ಕೃತಿಕತೆಯಲ್ಲಿ ಮತ್ತೊಂದು ಮುಖ್ಯ ಅಂಶವೆಂದರೆ, ವ್ಯಕ್ತಿ ಮತ್ತು ದೈವಿಕ ಕಲ್ಪನೆಗಳು. ಮಾನವನು ಪ್ರಕೃತಿಯನ್ನೇ ಅವಲಂಬಿಸಿದ್ದನು. ತನ್ನ ಬೌದ್ಧಿಕತೆಗೆ ನಿಲುಕದ ಅನೇಕ ಘಟನೆಗಳು ನಡೆಯುತ್ತಿದ್ದವು. ಗುಡುಗುಸಿಡಿಲು, ಮಳೆಯ ಆರ್ಭಟ, ಭೂಕಂಪ ಮುಂತಾದ ನೈಸರ್ಗಿಕ ವಿಕೋಪಗಳಿಗೆ ಹಾಗೂ ಪ್ರಕೃತಿಯಲ್ಲಿನ ಸೃಷ್ಟಿನಾಶ ಮುಂತಾದವುಗಳಿಗೆ ವಿಶೇಷವಾದ ಹಾಗೂ ಅಗೋಚರ ಶಕ್ತಿಯಿದೆಯೆಂದು ನಂಬಿದ್ದರಿಂದಲೇ ದೈವಿಕ ಪರಿಕಲ್ಪನೆ ಅವನ ಮನಸ್ಸಿನಲ್ಲಿ ಮೂಡಿಬಂದಿತು. ಪ್ರಪಂಚದಲ್ಲಿ ನಡೆಯುವ ಪ್ರತಿಯೊಂದು ಕ್ರಿಯೆಗೂ ದೈವಾಂಶವೇ ಕಾರಣವೆಂಬ ನಂಬಿಕೆ ಬಂದದ್ದರಿಂದಲೇ, ಅನೇಕ ಹೆಸರುಗಳ ಮೂಲಕ ದೇವರನ್ನು ಕಾಣಲು ಪ್ರಯತ್ನಿಸಿದ. ತಾನು ಆರಾಧಿಸುವ ರೀತಿಗನುಗುಣವಾಗಿ 'ಧರ್ಮ - ದೇವರ' ಪರಿಕಲ್ಪನೆ ಬಂದು, ಅತ್ಯಂತ ಪ್ರಮುಖವಾದ ಅಂಶವಾಗಿ ಬೆಳೆಯಿತು. ಸ್ಥಳನಾಮಗಳಲ್ಲಿ ದೈವಿಕ ಅಂಶ ಸೂಚಿಸುವ ನಿರ್ದಿಷ್ಟಗಳನ್ನು ಗುರುತಿಸಬಹುದು.

ಮಾನವನ ಬೌದ್ಧಿಕ ವಿಕಾಸಕ್ಕೆ ನಿದರ್ಶನವೆಂದರೆ ವಸ್ತುವಿಗೆ ಹೆಸರು ನೀಡುವುದನ್ನು ಪ್ರಾರಂಭಿಸಿದ್ದು. ಒಬ್ಬ ವ್ಯಕ್ತಿಯನ್ನು ಮತ್ತೊಬ್ಬ ವ್ಯಕ್ತಿಯಿಂದ ಬೇರ್ಪಡಿಸಿಕೊಳ್ಳಲು ಹಾಗೂ ವ್ಯಕ್ತಿಯ ಅನುಪಸ್ಥಿತಿಯಲ್ಲಿ ಅವನನ್ನು ಸ್ಮರಿಸಲು ವ್ಯಕ್ತಿನಾಮ ನೀಡುವ ರೂಢಿಯು ಸಾಮಾಜಿಕವಾಗಿ ಮಹತ್ವವಾದ ಅಂಶವಾಗಿದೆ. ವ್ಯಕ್ತಿನಾಮಗಳಲ್ಲಿನ ನಿರ್ದಿಷ್ಟಗಳು ದೇವರ ಹೆಸರನ್ನು ಸೂಚಿಸಬಹುದು. ಇಂತಹ ವ್ಯಕ್ತಿನಾಮಗಳನ್ನೆ ಸ್ಥಳನಾಮನಿರ್ದೇಶನ ಮಾಡಲು ಬಳಸಿಕೊಂಡಿರುವುದನ್ನು ಗುರುತಿಸಬಹುದು. ಈ ಅಂಶವು ಸಾಮಾಜಿಕ ದೃಷ್ಟಿಯಿಂದ ಅಧ್ಯಯನಕ್ಕೆ ಒಳಗಾಗಬೇಕಿದೆ. ಆಧುನಿಕ ಸ್ಥಳನಾಮಗಳು ಯಾದೃಚ್ಛಿಕವಾಗಿರುವುದರಿಂದ ಸಾಮಾಜಿಕ -ಸಾಂಸ್ಕೃತಿಕ ಅಂಶಗಳನ್ನು ಗುರುತಿಸಲು ಸಾಧ್ಯವಿಲ್ಲ. ಪ್ರಾಚೀನ ಸ್ಥಳನಾಮಗಳ ಅಧ್ಯಯನ ಮಾಡುವುದರ ಮೂಲಕ ಸಾಮಾಜಿಕ-ಸಾಂಸ್ಕೃತಿಕ ಅಂಶಗಳನ್ನು ಹುಡುಕುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

## ೫.೧ ಜಾತಿ ವಾಚಿ ಸ್ಥಳನಾಮಗಳು

ಸಾಮಾಜಿಕ ಅಧ್ಯಯನದಲ್ಲಿ ಮುಖ್ಯವಾದ ಅಂಶವೆಂದರೆ ಜಾತಿ ಮತ್ತು ವೃತ್ತಿಗಳು. ಹುಟ್ಟಿನ ಆಧಾರದ ಮೇಲೆ ಗುರುತಿಸಲ್ಪಡುವ ನಿರ್ದಿಷ್ಟ ಗುಂಪನ್ನು ಜಾತಿ ಎಂದು ಕರೆಯಬಹುದು. ನಿರ್ದಿಷ್ಟ ಜಾತಿಯನ್ನು ಸ್ಥಳನಾಮಗಳಲ್ಲಿ ವಿಶಿಷ್ಟವಾಗಿ ಸೇರಿಸಿಕೊಳ್ಳಲಾಗಿದೆ. ಜಾತಿಯ ಹೆಸರಿನ ಮೂಲಕವೇ ಊರಿನ ಹೆಸರು ನಿರ್ದೇಶಿತವಾಗಿದೆ.

ಜಾತಿಸೂಚಕ ಸ್ಥಳನಾಮಗಳು ಆ ಪ್ರದೇಶದ ಸಮಾಜವನ್ನು ಬಿಂಬಿಸುತ್ತವೆ. ''ಲಿಖಿತ ಆಧಾರಗಳ ಕೊರತೆಯಿದ್ದಲ್ಲಿ ಒಂದು ಜನಾಂಗವು ನೆಲೆಸಿದ್ದ ಒಂದು ಪ್ರದೇಶದ ಸ್ಥಳನಾಮಗಳಲ್ಲಿನ ಸಮಾನ ರೂಪಗಳನ್ನು ಪರಿಶೀಲಿಸಬೇಕು.''[೧] ಜಾತಿ - ವೃತ್ತಿ ಮುಂತಾದ ಪ್ರಾಚೀನ ಸಾಮಾಜಿಕ ಅಂಶಗಳನ್ನು ಅರಿಯಲು ಸ್ಥಳನಾಮಗಳನ್ನು ಆಕರವಾಗಿ ಗುರುತಿಸಿಕೊಳ್ಳಬಹುದು. ''ಸಾಂಸ್ಕೃತಿಕ ಸ್ತರಗಳ ನಾನಾ ಜನಾಂಗಗಳ ಅಸ್ತಿತ್ವವು ಸ್ಥಳನಾಮಗಳಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಸ್ಥಳನಾಮಗಳಲ್ಲಿ ಕಾಣಬಹುದಾಗಿದೆ.''[೨] ಇತಿಹಾಸ ಪೂರ್ವಕಾಲದ ಅನೇಕ ವಿಚಾರಗಳನ್ನು ತಿಳಿಯಲು ಸ್ಥಳನಾಮಗಳು ಸಹಾಯಕವಾಗಿದ್ದು, ''ಸಮಾಜದಲ್ಲಿನ ವರ್ಣವ್ಯವಸ್ಥೆ, ನಾಗರೀಕತೆ, ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಾಗುತ್ತದೆ.''[೩] ಸ್ಥಳನಾಮಗಳು ಈ ರೀತಿಯ ಯಾವುದೇ ಸಾಮಾಜಿಕ ಅಂಶಗಳನ್ನು ಎಲ್ಲಾ ಸಂದರ್ಭದಲ್ಲಿಯೂ ನೇರವಾಗಿ ಬಿಂಬಿಸದಿದ್ದರೂ, ''ಸಂಸ್ಕೃತಿಯ ಪಳೆಯುಳಿಕೆಗಳಂಥ ಅವಶೇಷಗಳಾಗಿರುವುದರಿಂದ

ಅವು ಪರೋಕ್ಷವಾಗಿಯಾದರೂ ಜನತೆ ಮತ್ತು ನಿರ್ದಿಷ್ಟಕಾಲದ ಸಮಾಜದ ಕುರಿತು ಅತ್ಯಂತ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ"[9]

ಸ್ಥಳನಾಮಗಳಲ್ಲಿ ಕಂಡು ಬರುವ ಜಾತಿಗಳ ಜೊತೆಗೆ ಕುಟುಂಬ, ವಂಶ ಮುಂತಾದ ಸಾಮಾಜಿಕ ಅಂಶಗಳನ್ನು ಗುರುತಿಸಬಹುದು. ಸಾಮಾಜಿಕ ಅಧ್ಯಯನವು ಧರ್ಮಸೂಚಕ ಸ್ಥಳನಾಮಗಳನ್ನು ಗುರುತಿಸಿ ಅವುಗಳ ಹಿನ್ನೆಲೆಯನ್ನು ಅರಿಯಲು ಸಹಾಯಕವಾಗಿವೆ.

ಆರಂಭಕಾಲದ ಊರುಗಳಲ್ಲಿ ನಿಸರ್ಗವಾಚಿ ನಿರ್ದಿಷ್ಟಗಳು ಹೆಚ್ಚಾಗಿ ಕಂಡುಬರುತ್ತವೆ. ನಾಗರಿಕನಾದ ಮಾನವ ಸಾಮಾಜಿಕ-ಸಾಂಸ್ಕೃತಿಕ ಅಂಶಗಳಾದ ವ್ಯಕ್ತಿನಾಮ, ಜಾತಿ, ವೃತ್ತಿ, ದೈವವಾಚಿ ಅಂಶಗಳನ್ನು ಸ್ಥಳನಾಮಗಳಲ್ಲಿ 'ವಿಶಿಷ್ಟ'ಗಳನ್ನಾಗಿ ಬಳಸಿಕೊಂಡಿದ್ದಾನೆ.

**ಜಾತಿವಾಚಿ ಸ್ಥಳನಾಮಗಳ ಪಟ್ಟಿ**

| | |
|---|---|
| ಕುರುಬರ ಹಳ್ಳಿ - ಕ | ಗೊಲ್ಲಹಳ್ಳಿ -ಕ |
| ಗೊರವನ ಹಳ್ಳಿ - ಕ | ತಿಗಳರಹಳ್ಳಿ - ಕ |
| ತಿಗಳರ ಹೊಸಹಳ್ಳಿ - ಕ | ಬೊಮ್ಮಸಂದ್ರ - ಕ |
| ನಾಯಕನಹಳ್ಳಿ - ಕ | ಮೇದಮಾರನ ಹಳ್ಳಿ -ಕ |
| ಬ್ಯಾಡರಹಳ್ಳಿ - ಚ | ಬ್ರಾಹ್ಮಣೀಪುರ - ಚ |
| ಬೊಮ್ಮನಹಳ್ಳಿ - ಚ | ಸೆಟ್ಟಿಹಳ್ಳಿ - ಚ |
| ಹಾರೋಹಳ್ಳಿದೊಡ್ಡಿ - ಚ | ಕುರುಬರ ಕುಂಟೆ - ದೇ |
| ಗೊಲ್ಲಹಳ್ಳಿ - ದೇ | ಬೇಡರಹಳ್ಳಿ - ದೇ |
| ರೆಡ್ಡೀಹಳ್ಳಿ - ದೇ | ಬೊಮ್ಮಾವರ - ದೇ |
| ವಾಜರಹಳ್ಳಿ - ದೇ | ಸೆಟ್ಟೀಹಳ್ಳಿ - ದೇ |
| ಕೆಳಗಿನ ನಾಯಕರಹಳ್ಳಿ - ದೊ | ಬೊಮ್ಮನಹಳ್ಳಿ - ದೊ |
| ಮುದಬ್ಯಾಡರಹಳ್ಳಿ - ದೊ | ಹಾರೋಹಳ್ಳಿ - ದೊ |
| ಕಮ್ಮಸಂದ್ರ - ದೊ | ಗೊರವನಹಳ್ಳಿ - ನೆ |
| ಗೊಲ್ಲರಪಾಳ್ಯ - ನೆ | ಗೊಲ್ಲಹಳ್ಳಿ - ನೆ |
| ದಾಸನಪುರ - ನೆ | ದೊಂಬರ ಹಳ್ಳಿ - ನೆ |
| ಬೊಮ್ಮನಹಳ್ಳಿ - ನೆ | ಬೊಮ್ಮಸೆಟ್ಟಿಹಳ್ಳಿ - ನೆ |

| | |
|---|---|
| ವಡ್ಡರಹಳ್ಳಿ - ನೆ | ವಡ್ಡರಪಾಳ್ಯ - ನೆ |
| ಕುರುಬರಹಳ್ಳಿ - ಮಾ | ಗೊಲ್ಲರಪಾಳ್ಯ |
| ಗೊಲ್ಲಹಳ್ಳಿ - ಮಾ | ಬೊಮ್ಮೇನಹಳ್ಳಿ - ಮಾ |
| ವಡ್ಡರಹಳ್ಳಿ - ಮಾ | ಅಗಸರಹಳ್ಳಿ - ಹೊ |
| ಕುರುಬರಗೊಲ್ಲಹಳ್ಳಿ - ಹೊ | ಕುರುಬರಹಳ್ಳಿ - ಹೊ |
| ದಾಸರಹಳ್ಳಿ - ಹೊ | ಸೆಟ್ಟಿಹಳ್ಳಿ - ಹೊ |
| ಹಾರೋಹಳ್ಳಿ - ಹೊ | |

### ೩.೧.೧ ಬ್ರಾಹ್ಮಣರು

ವರ್ಣಗಳನ್ನು ಸೃಷ್ಟಿಸಿಕೊಂಡ ಮಾನವನು ಬ್ರಾಹ್ಮಣರಿಗೆ ಅಗ್ರಸ್ಥಾನ ನೀಡಿದ್ದನು. ಪ್ರಾಚೀನ ಸಮಾಜದಲ್ಲಿ ಬ್ರಾಹ್ಮಣರು ವೇದಾಧ್ಯಯನ ಮಾಡುತ್ತಾ, ಧಾರ್ಮಿಕ ಆಚರಣೆಗಳನ್ನು ಮಾಡಿಸುವ, ರಾಜನಿಗೆ - ಸಮಾಜಕ್ಕೆ ಬೇಕಾದ ಸಲಹೆಗಳನ್ನು ನೀಡುತ್ತಾ, ಎಲ್ಲಾ ಜನಸಮುದಾಯದಿಂದ ಗೌರವಕ್ಕೆ ಒಳಗಾಗಿದ್ದ ಸಮುದಾಯವಾಗಿದ್ದಿತು. ಈ ಕಾರಣದಿಂದಾಗಿಯೇ ಬ್ರಾಹ್ಮಣರ ವಾಸಕ್ಕೆಂದೇ ಕೆಲವು ಊರುಗಳನ್ನು ನಿರ್ಮಿಸಲಾಯಿತು. 'ಬ್ರಾಹ್ಮಣ'- ಪದಕ್ಕೆ ಪರ್ಯಾಯವಾಗಿ ಹಾರುವ, ಪಾರುವ, ಬೊಮ್ಮ ಬ್ರಹ್ಮ ಜೋಯಿಸ, ಭಟ್ಟ, ಶ್ರೋತ್ರೀಯ, ಪಂಡಿತ, ಪುರೋಹಿತ, ಶಾಸ್ತ್ರೀ ಪೂಜಾರಿ, ಮಂಗಲ ಮುಂತಾದ ಪದಗಳು ಸ್ಥಳನಾಮ ನಿರ್ದೇಶನಗಳಲ್ಲಿ ಬಳಕೆಯಾಗಿವೆ, ಇದರ ಜೊತೆಗೆ 'ಅಗ್ರಹಾರ' ಎಂದು ಕರೆಯಲ್ಪಡುವ ಊರುಗಳು ಮತ್ತು ಸ್ಥಳನಾಮದ ಉತ್ತರ ಪದದಲ್ಲಿ 'ಅಗ್ರಹಾರ' ಬಳಕೆಯಾಗಿರುವ ಊರುಗಳೆಲ್ಲವೂ ಬ್ರಾಹ್ಮಣ ವಾಸ್ತವ್ಯವನ್ನೆ ಸೂಚಿಸುತ್ತವೆ. ಕೆಲವೊಮ್ಮೆ 'ಅಗ್ರಹಾರ' ಪದವು 'ಅಗರ' ಆಗಿ ಬಳಕೆಯಾಗಿದೆ. ರಾಜರುಗಳ ಆಳ್ವಿಕೆಯಲ್ಲಿ ಬ್ರಾಹ್ಮಣರು ನೆಲೆಸಲು ಬೇಕಾದ ಸೌಕರ್ಯಗಳನ್ನು ನೀಡುವುದರ ಜೊತೆಗೆ, ದತ್ತಿ, ದಾನ ಮುಂತಾದುವುಗಳ ಮೂಲಕ ಬ್ರಾಹ್ಮಣ ಅಸ್ತಿತ್ವವನ್ನು ಉಳಿಸಿಕೊಂಡಿದ್ದರು.

"ಅಗ್ರಹಾರ, ಅಗರ, ಮಂಗಲಗಳು ಬ್ರಾಹ್ಮಣರಿಗೆ ಕೊಟ್ಟ ಊರುಗಳನ್ನು ಸೂಚಿಸುವಂತೆ, ಬೊಮ್ಮ - ಹಾರುವ ಪದಗಳೂ ಅಂತಹ ಅಗ್ರಹಾರ ಸೂಚಕಗಳಾಗಿವೆ."[౯] ಬ್ರಾಹ್ಮಣ ಜಾತಿಸೂಚಕ ಸ್ಥಳನಾಮಗಳಲ್ಲಿ, ಎಲ್ಲಾ ಜಾತಿಯವರೂ ವಾಸಿಸುತ್ತಿದ್ದರು. ಈ ರೀತಿಯ ಸ್ಥಳನಾಮಗಳು ಸಾಮಾಜಿಕ- ರಾಜಕೀಯ ಕಾರಣಗಳಿಗಾಗಿ ಸಂಸ್ಕೃತೀಕರಣ ಅಥವಾ ಪುನರ್ನಾಮಕರಣ ವಾಗಿರುವ ಸಾಧ್ಯತೆಯೂ ಇದೆ. ಒಂದು ನಿರ್ದಿಷ್ಟ ಕಾಲದಲ್ಲಿ ಮಾತ್ರ ವಾಸವಿದ್ದ ಈ ಸಮುದಾಯಗಳು ನಂತರದಲ್ಲಿ ವಲಸೆ ಹೋಗಿರುವ ಸಾಧ್ಯತೆಯೂ ಇದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬ್ರಾಹ್ಮಣ ಸಮುದಾಯ ನೆಲೆಯನ್ನು ಸೂಚಿಸುವ ಸ್ಥಳನಾಮಗಳು ಈ ಕೆಳಗಿನಂತಿವೆ.

| | |
|---|---|
| ಅಗರ - ಕ | ಬೊಮ್ಮನಹಳ್ಳಿ - ದೊ |
| ಅಗ್ರಹಾರ -ಕ | ಹಾರೋಹಳ್ಳಿ - ನೆ |
| ಬೊಮ್ಮನಹಳ್ಳಿ -ಕ | ಅಗ್ರಹಾರ ಪಾಳ್ಯ -ನೆ |

ಬೊಮ್ಮಸಂದ್ರ -ಚ

ಅಗ್ರಹಾರವಾಳ ಗೆರೆಹಳ್ಳಿ - ಚ

ಕನ್ನಮಂಗಲ - ಚ

ಬ್ರಾಹ್ಮಣಪುರ - ಚ

ಬೊಮ್ಮನಹಳ್ಳಿ - ಚ

ಪಂಡಿತ ಪುರ - ದೇ

ಭಟ್ರಮಾರೇನಹಳ್ಳಿ - ದೇ

ಭಿನ್ನಮಂಗಲ - ದೇ

ಚನ್ನಾದೇವಿ ಅಗ್ರಹಾರ - ದೊ

ಜೋಯಿಸ ಅಗ್ರಹಾರ - ದೊ

ಪುಟ್ಟಯ್ಯನ ಅಗ್ರಹಾರ - ದೊ

ಕಲ್ಲುಕಂಟೆ ಅಗ್ರಹಾರ - ಹೊ

ಬೊಮ್ಮನ ಬಂಡೆ - ಹೊ

ಹಾರೋಹಳ್ಳಿ- ಹೊ

ಕುಂಟಬೊಮ್ಮನಹಳ್ಳಿ - ನೆ

ಬೊಮ್ಮನಹಳ್ಳಿ - ನೆ

ಭಟ್ಟರಹಳ್ಳಿ - ನೆ

ಹಾರೋಕ್ಯಾತನಹಳ್ಳಿ - ನೆ

ಅಣ್ಣಯ್ಯ ಶಾಸ್ತ್ರಿಪಾಳ್ಯ -ಮಾ

ಬೋಮ್ಮೇನಹಳ್ಳಿ - ಮಾ

ಸುಬ್ಬಾಶಾಸ್ತ್ರೀ ಪಾಳ್ಯ - ಮಾ

ಹಾರೋ ಹಳ್ಳಿ - ಮಾ

ಅರ್ಚಕರಹಳ್ಳಿ - ಮಾ

ಬೊಮ್ಮಚಾನಹಳ್ಳಿ - ರಾ

ಅಗ್ರಹಾರ ವಡ್ಡರಹಳ್ಳಿ - ಹೊ

ಪೂಜೇನ ಅಗ್ರಹಾರ -ಹೊ

ಭಟ್ಟರ ಹಳ್ಳಿ - ಹೊ

### ೫೧.೨ 'ಲಿಂಗಾಯಿತ' ಜನಾಂಗ ಸೂಚಕ ಸ್ಥಳನಾಮಗಳು

'ಲಿಂಗಾಯಿತ' ಪದವು 'ಶೈವ' ಜನಾಂಗವನ್ನು ಸೂಚಿಸುವ ಜನಾಂಗವಾಚಿ ಪದವಾದರೂ, ಶಿವನ ಆರಾಧಕರೆಲ್ಲರೂ ಈ ವರ್ಗಕ್ಕೆ ಸೇರುವುದಿಲ್ಲ. ಈ ಜನಾಂಗವಾಚಿ ಸ್ಥಳನಾಮಗಳನ್ನು ಎರಡು ರೀತಿಯಲ್ಲಿ ವರ್ಗೀಕರಿಸಬಹುದು. ''ಲಿಂಗಾಯತರ ಊರುಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ಗುರುತಿಸಬಹುದು. ಹನ್ನೆರಡನೆಯ ಶತಮಾನದಲ್ಲಿ ಆರಂಭವಾದ ವೀರಶೈವ ಧರ್ಮದಿಂದ ಉಂಟಾದ ಸ್ಥಳನಾಮಗಳು ಹಾಗೂ ಈ ಧರ್ಮಕ್ಕಿಂತ ಮುಂಚೆ ಇದ್ದ ಶೈವ ಪಂಥದಿಂದ ನಿರ್ದೇಶಿಸಲ್ಪಟ್ಟ ಸ್ಥಳನಾಮಗಳು. ಶೈವಪಂಥದ ದೈವಗಳಾದ ವೀರಭದ್ರ, ಶಿವ, ಪರಮೇಶ್ವರ, ಲಿಂಗ, ನಂದಿ ಮುಂತಾದ ಹೆಸರುಗಳನ್ನೊಳಗೊಂಡಂತೆ ಶೈವ ಸ್ಥಳನಾಮಗಳಿವೆ. ವೀರಶೈವ ಪಂಥದ ಪ್ರಭಾವದಿಂದ ಗ್ರಾಮನಾಮಗಳಲ್ಲಿ ಅಯ್ಯ, ಜಂಗಮ, ಒಡೆಯ, ಮಠ, ಬಸವ, ಸಿದ್ಧರಾಮ, ಮುಂತಾದ ಪದಗಳಿವೆ''[೬]

ಲಿಂಗಾಯತರು ಲಿಂಗವನ್ನು ಮಾತ್ರ ಪೂಜಿಸುತ್ತಾರೆ. ಆದ್ದರಿಂದ ಅದಕ್ಕೆ ಸಂಬಂಧಿಸಿದಂತೆ ಸ್ಥಳನಾಮಗಳ ನಾಮ ನಿರ್ದೇಶನವಾಗಿದೆಯೆಂಬುದು ಶ್ರೀ ಬ್ರಹ್ಮಾನಂದ ಅಭಿಪ್ರಾಯಪಡುತ್ತಾರೆ.[೭] ಶಿವ, ನಂದಿ, ಲಿಂಗ, ಈಶ್ವರ, ಪಾರ್ವತಿ - ಗೌರಿ ಮುಂತಾದುವು ಹಾಗೂ ಇವುಗಳಿಗೆ ಸಂಬಂಧಪಟ್ಟ ಇತರೆ ಪರ್ಯಾಯ ಪದಗಳು ಶೈವ ಸಂಬಂಧಿತ ಸ್ಥಳನಾಮಗಳನ್ನು ಪ್ರತಿನಿಧಿಸುತ್ತವೆ.

| ಶೈವ ಪಂಥ ಪ್ರಭಾವಿತವಾದ ಸ್ಥಳನಾಮಗಳು | ವೀರ ಶೈವ ಪಂಥದ ಪ್ರಭಾವಿತ ಸ್ಥಳನಾಮಗಳು |
|---|---|
| ಲಿಂಗನಪುರ - ಕ | ಬಸವನಹಳ್ಳಿ - ಕ |
| ಶಿವನಹಳ್ಳಿ - ಕ | ಬಸವಾಪಟ್ಟಣ - ಕ |
| ಲಿಂಗನಹಳ್ಳಿ - ಕ | ವಡೇರ ಹಳ್ಳಿ - ಕ |
| ಲಿಂಗಾಪುರ - ದೊ | ಸಿದ್ಧನ ಹಳ್ಳಿ - ಚ |
| ಶಿವಪುರ - ದೊ | ಸಿದ್ಧಾಪುರ - ಚ |
| ಶಿವನಪುರ - ನೆ | ವಡೇರಹಳ್ಳಿ - ದೇ |
| ಶಿವಗಂಗೆ -ನೆ | ಬಸವನಪುರ - ದೊ |
| ಲಿಂಗೇನಹಳ್ಳಿ -ನೆ | ಬಸವಾಪಟ್ಟಣ - ನೆ |
| ಲಿಂಗೇನಹಳ್ಳಿ -ಮಾ | ಬಸವಾಪಟ್ಟಣ - ಮಾ |
| ಶಿವನ ಸಂದ್ರ - ಮಾ | ಬಸವೇನಹಳ್ಳಿ - ಮಾ |
| ಶಿವನಹಳ್ಳಿ - ರಾ | ಸಿದ್ಧಾಪುರ - ಮಾ |
| ಲಿಂಗಾಪುರ - ಹೊ | ಸಿದ್ಧ ದೇವರ ಬೆಟ್ಟ - ಮಾ |
| ಶಿವದೇವಹಳ್ಳಿ- ಹೊ | ವಡೇರಹಳ್ಳಿ - ರಾ |
| ಶಿವನಪುರ - ಹೊ | ಸಿದ್ಧಾಪುರ - ಹೊ |
| ಶಿವಪುರ - ಹೊ | ಸಿದ್ಧನಹಳ್ಳಿ - ಹೊ |
| | ಸಿದ್ಧನಪುರ - ಹೊ |

### ೫೧.೩ ಕುರುಬ ಸಮುದಾಯ ಸೂಚಿಸುವ ಸ್ಥಳನಾಮಗಳು

'ಕುರುಬ' ಪದವು ಜಾತಿಯನ್ನು ಸೂಚಿಸುವುದರ ಜೊತೆಗೆ ಕುರಿ ಸಾಕಾಣಿಕೆ ಮಾಡುವ ಹಾಗೂ ಅವುಗಳ ವಸ್ತು ಉತ್ಪನ್ನ ಮಾಡುವ ವೃತ್ತಿಯನ್ನು ಸೂಚಿಸುತ್ತದೆ. ಈ ಸಮುದಾಯ ಹಾಗೂ ವೃತ್ತಿಕಾರರು ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಹಟ್ಟಕಾರರು, ಕುರುಬರು ಕನ್ನಡ ನಾಡಿನ ಮೂಲನಿವಾಸಿಗಳೆಂದು ಶಂಬಾ ಜೋಶಿಯವರು ಅಭಿಪ್ರಾಯಪಟ್ಟಿದ್ದಾರೆ. ಕುರುಬರು ಗುಡ್ಡಗಾಡುಗಳಲ್ಲಿ ಬೆಟ್ಟಗಳ ಬುಡದಲ್ಲಿ ಹಟ್ಟಿ, ಹಾಡಿಗಳನ್ನು ನಿರ್ಮಿಸಿಕೊಂಡು ತಮ್ಮ ವಾಸ್ತವ್ಯವನ್ನು ಹೊಂದಿದ್ದರು. ಅವರಿಂದಲೇ ಈ ರೀತಿಯ ನಿರ್ದಿಷ್ಟಗಳನ್ನು ಹೊಂದಿರುವ ಸ್ಥಳನಾಮಗಳು ನಾಮನಿರ್ದೇಶಿತವಾಗಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 'ಕುರುಬ' ಸಮುದಾಯವನ್ನು ಸೂಚಿಸುವ ಸ್ಥಳನಾಮಗಳನ್ನು ಗುರುತಿಸಲಾಗಿದೆ. 'ಕುರುಬರಹಳ್ಳಿ' ಪ್ರತಿಕರಣ ಸ್ಥಳನಾಮವು (Duplication) ಮೂರು ತಾಲ್ಲೂಕುಗಳಲ್ಲಿ ಕಂಡುಬರುತ್ತದೆ.

ಕುರುಬರಹಳ್ಳಿ - ಕ

ಕುರುಬಗೆರೆ - ದೊ

ಕುರುಬರಹಳ್ಳಿ - ಮಾ

ಕುರುಬರಹಳ್ಳಿ - ರಾ

ಕುರುಬರಹಳ್ಳಿ - ಹೊ

ಕುರುಬರ ಕುಂಟೆ - ದೇ

ಕುರುಬರ ಪಾಳ್ಯ - ಮಾ

ಕುರುಬರಕಾರೇನ ಹಳ್ಳಿ - ಹೊ

ಕುರುಬರಗೊಲ್ಲಹಳ್ಳಿ - ಹೊ

### ೫.೧.೪ 'ಗೊಲ್ಲ' ಸಮುದಾಯ ಸೂಚಕ ಸ್ಥಳನಾಮಗಳು

'ಗೊಲ್ಲ' ಸಮುದಾಯವು ಪಶು ಸಾಕಣೆ, ಹೈನುಗಾರಿಕೆಯನ್ನು ಮುಖ್ಯವೃತ್ತಿಯನ್ನಾಗಿ ಹೊಂದಿರುವ ಜಾತಿಯಾಗಿದೆ. ಇದು ಈ ಜನಾಂಗದ ಪಾರಂಪರಿಕ ವೃತ್ತಿಯೆಂದು ಶಂಬಾಜೋಶಿಯವರು ಅಭಿಪ್ರಾಯ ಪಟ್ಟಿದ್ದಾರೆ. ಕುಟ, ಕುಡಿ, ಕುಡ, ಕುಳ; ಪಟ್ಟಿ - ಹಟ್ಟಿ; ಪಾಡಿ - ಹಾಡಿ - ಇವುಗಳು ಗೊಲ್ಲರ ವಸತಿಗಳೆಂದು ಹೇಳಿದ್ದಾರೆ. 'ಹಟ್ಟಿ ಆರಂಭಕಾಲದ ಬಿಡಾರವೆಂದೂ ತಿಳಿಸುತ್ತಾ, "ಗೌಡರೆಂದರೆ ಗೌಳರು, ಗೋವಳರೆಂಬಲ್ಲಿ ಸಂದೇಹವಿಲ್ಲ"[೮] ಎಂದು ವಾದಿಸುತ್ತಾರೆ.

ಗೊಲ್ಲಹಳ್ಳಿ - ಕ

ಗಂಡ್ರಗೊಲ್ಲಪುರ - ದೊ

ಗೊಲ್ಲರ ಪಾಳ್ಯ - ನೆ

ಗೊಲ್ಲರ ಪಾಳ್ಯ - ಮಾ

ಗೊಲ್ಲರ ಪಾಳ್ಯ - ರಾ

ಗೊಲ್ಲಹಳ್ಳಿ - ದೇ

ಗೊಲ್ಲಹಳ್ಳಿ - ದೊ

ಗೊಲ್ಲಹಳ್ಳಿ - ನೆ

ಗೊಲ್ಲಹಳ್ಳಿ - ಮಾ

ಗೋಪಹಳ್ಳಿ - ರಾ

### ೫.೧.೫ ವೈಶ್ಯ ಸಮುದಾಯ ಸೂಚಿಸುವ ಸ್ಥಳನಾಮಗಳು

ವರ್ಣ ವ್ಯವಸ್ಥೆಯಲ್ಲಿ ಸೇರಿದ್ದ ಸಮುದಾಯ ಇದಾಗಿದ್ದು ವ್ಯಾಪಾರ ವೃತ್ತಿಯನ್ನು ಹೊಂದಿದ್ದರು. ಸಮಾಜಕ್ಕೆ ಅವಶ್ಯವಿದ್ದ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುತ್ತಿದ್ದ ಈ ಜನಾಂಗವನ್ನು ಭಾರತದ ಎಲ್ಲಾ ಪ್ರದೇಶಗಳಲ್ಲಿ ಗುರುತಿಸಬಹುದು. ಈ ವಣಿಕರು ವಾಸವಿದ್ದ ಸ್ಥಳವನ್ನು ಆ ವ್ಯಾಪಾರಿಯ ಹೆಸರಿನಿಂದ ಅಥವಾ ಶೆಟ್ಟಿ, ಸೆಟ್ಟಿ (ಶ್ರೇಷ್ಠಿ) ಮುಂತಾದ ಪದಗಳಿಂದಲೇ ನಾಮನಿರ್ದೇಶನವಾಗಿದೆ. 'ಶೆಟ್ಟಿ' ಎಂಬ ನಿರ್ದಿಷ್ಟವನ್ನು ಒಳಗೊಂಡಿರುವ ಸ್ಥಳನಾಮಗಳನ್ನು ದಕ್ಷಿಣ ಕರ್ನಾಟಕದಲ್ಲಿ ಹೆಚ್ಚು ಗುರುತಿಸಬಹುದು. ಕೆಲವು ವೈಶ್ಯರು ಅಥವಾ ಶೆಟ್ಟರು ತಾವೇ ಊರನ್ನು ನಿರ್ಮಿಸಿರುವ ಸಾಧ್ಯತೆಯೂ ಇದ್ದು ಇಂತಹ ಸಂದರ್ಭದಲ್ಲಿ ಊರನ್ನು ನಿರ್ಮಿಸಿದ ವ್ಯಕ್ತಿಯ ನಾಮವೇ ಊರಿನ 'ನಿರ್ದಿಷ್ಟ'ವಾಗಿ ಬಳಕೆಯಾಗಿರುವ ಸಾಧ್ಯತೆಯೂ ಇದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 'ಶೆಟ್ಟಿ' ನಿರ್ದಿಷ್ಟವನ್ನು ಹೊಂದಿರುವ ಸ್ಥಳನಾಮಗಳನ್ನು ಪಟ್ಟಿ ಮಾಡಲಾಗಿದೆ.

ಭೈರಸೆಟ್ಟಿ ಹಳ್ಳಿ - ಕ | ಸೆಟ್ಟಿಹಳ್ಳಿ - ಚ

ಸೆಟ್ಟರ ಹಳ್ಳಿ - ದೇ | ಶೆಟ್ಟಿಹಳ್ಳಿ - ದೇ

ಬಸೆಟ್ಟಿಹಳ್ಳಿ - ದೊ | ತಮ್ಮ ಶೆಟ್ಟಿಹಳ್ಳಿ - ದೊ

ಬೊಮ್ಮಸೆಟ್ಟಿಹಳ್ಳಿ - ದೊ | ಆಲಸೆಟ್ಟಿಹಳ್ಳಿ - ಮಾ

ನಾಗಶೆಟ್ಟಿಹಳ್ಳಿ - ಮಾ | ಶೆಟ್ಟರಹಳ್ಳಿ - ಮಾ

ತಿರುಮಲ ಶೆಟ್ಟಿಹಳ್ಳಿ - ಹೊ | ದೇವಶೆಟ್ಟೀಹಳ್ಳಿ - ಹೊ

ಸೆಟ್ಟಿಹಳ್ಳಿ - ಹೊ

(ಸೆಟ್ಟಿಹಳ್ಳಿ ಎಂಬ ಹೆಸರಿನ ಐದು ಊರುಗಳಿವೆ)

### ೫.೧.೬ 'ತಿಗಳ್' ಜನಾಂಗ ವಾಚಿ ಸ್ಥಳನಾಮಗಳು

'ತಿಗಳ್' ಜನಾಂಗವು 'ತಮಿಳು' ಭಾಷೆಯನ್ನು ಮಾತನಾಡುವ ಹಾಗೂ ತಮಿಳುನಾಡಿನಿಂದ ವಲಸೆ ಬಂದು ನೆಲೆಸಿರುವ ಸಮುದಾಯವಾಗಿದೆ. ಧರ್ಮರಾಯಸ್ವಾಮಿ ಅಥವಾ ದ್ರೌಪದಿ ಅಮ್ಮನವರ ಕರಗ ಹೊರುವ ಧಾರ್ಮಿಕ ಆಚರಣೆ ಮಾಡುವ ಜನಾಂಗವಾಗಿದೆ. ದಕ್ಷಿಣ - ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಈ ಜಾತಿಯು ಕಂಡುಬರುತ್ತದೆ. ವ್ಯವಸಾಯ ಹಾಗೂ ಪಶುಪಾಲನೆಯು ಇವರ ಮುಖ್ಯ ಕಸುಬಾಗಿದೆ.

ತಿಗಳರಹಳ್ಳಿ - ಕ | ತಿಗಳರ ಹೊಸ ಹಳ್ಳಿ - ಕ

ತಿಗಳೇ ಬಗಾಯಿತು - ದೊ

### ೫.೧.೭ 'ನಾಯಕ್' ಜನಾಂಗ ಎಂಬ ಸ್ಥಳನಾಮಗಳು

'ನಾಯಕ್' ಜನಾಂಗವನ್ನು ಬೇಡರು, ಬ್ಯಾಡರು, ವಾಲ್ಮೀಕಿ ಕುಲದವರು ಎಂದು ಕರೆಯಲಾಗುತ್ತದೆ. ನಾಯಕ ಜನಾಂಗದಲ್ಲಿ ಪಾಳೆಯಗಾರರನ್ನು ಬೇಟೆಯ ವೃತ್ತಿಯನ್ನು ಮಾಡುವವರನ್ನು ಹಾಗೂ ಶ್ರಮಜೀವಿಗಳನ್ನು ಗುರುತಿಸಬಹುದಿತ್ತು. ಕೆಲವು ಭಾಗದಲ್ಲಿ ನಾಯಕರು ಮಣ್ಣಿನ ಕೆಲಸವನ್ನು ಮಾಡುವವರಾಗಿದ್ದಾರೆ. 'ನಾಯಕ್'ನೆಂದರೆ ಗುಂಪಿನ ಅಥವಾ ಊರಿನ ಮುಖ್ಯಸ್ಥನಾಗಿರುವ ಸಾಧ್ಯತೆಯೂ ಇದೆ. ಸ್ಥಳನಾಮಗಳಲ್ಲಿ ಬಳಕೆಯಾಗಿರುವ 'ನಾಯಕ್' ಎಂಬ ಪದವು ವ್ಯಕ್ತಿವಾಚಿಯಾಗಿಯೂ ಬಳಕೆಯಾಗಿರುವ ಸಾಧ್ಯತೆ ಇದೆ.

ತೆಂಗನಾಯಕನಹಳ್ಳಿ - ಕ | ಬ್ಯಾಡರಹಳ್ಳಿ - ನೆ

ನಾಯಕನಹಳ್ಳಿ - ಕ | ಮಾಚೋನಾಯಕನಹಳ್ಳಿ -ನೆ

ಬ್ಯಾಡರಹಳ್ಳಿ - ಚ | ಮಾದನಾಯಕನ ಹಟ್ಟಿ - ನೆ

ಭೈರನಾಯಕನಹಳ್ಳಿ - ಚ | ಚೋಳನಾಯಕನಹಳ್ಳಿ - ಮಾ

ಮೈಲನಾಯಕನಹಳ್ಳಿ - ದೇ

ದೇವನಾಯಕನಹಳ್ಳಿ - ದೇ

ನಾಗನಾಯಕನಹಳ್ಳಿ - ದೇ

ಮಾರನಾಯಕನಹಳ್ಳಿ - ದೇ

ಮುದ್ದನಾಯಕನಹಳ್ಳಿ - ದೇ

ಹೂವಿನನಾಯಕನ ಹಳ್ಳಿ - ದೇ

ಬ್ಯಾಡರ ಹಳ್ಳಿ - ದೇ

ಬ್ಯಾಡರಹಳ್ಳಿ - ದೊ

ಆಲನಾಯಕನಹಳ್ಳಿ - ನೆ

ಬೈರನಾಯಕನ ಹಳ್ಳಿ - ನೆ

ನಾಯಕನ ಪಾಳ್ಯ - ಮಾ

ಮಾಯನಾಯಕನ ಹಳ್ಳಿ - ಮಾ

ಸುಬ್ರಾಯಬ್ಯಾಡರಹಳ್ಳಿ - ಮಾ

ಬ್ಯಾಡರಹಳ್ಳಿ - ಮಾ

ತಮ್ಮ ನಾಯಕನಹಳ್ಳಿ - ರಾ

ನಾಗನಾಯಕನ ಕೋಟೆ - ಹೊ

ಕೆಳಗಿನ ನಾಯಕರಹಳ್ಳಿ - ದೊ

ಮೇಲಿನ ನಾಯಕರ ಹಳ್ಳಿ - ದೊ

ಕಲ್ಲನಾಯಕನಹಳ್ಳಿ - ನೆ

### ೫.೧೮ 'ಉಪ್ಪಾರ' ಜನಾಂಗ ನಿರ್ದೇಶಿತ ಸ್ಥಳನಾಮಗಳು

ಉಪ್ಪಾರ ಜನಾಂಗವು ಉಪ್ಪುಮಾರುವ ವೃತ್ತಿಯನ್ನು ಹೊಂದಿದೆ. ಈ ಜನಾಂಗವು ಊರುಗಳಿಗೆ ಉಪ್ಪನ್ನು ತಂದು ಅದನ್ನು ಸರಬರಾಜು ಮೂಲಕ ತಮಗೆ ಬೇಕಾದ ದವಸ ಧಾನ್ಯವನ್ನು ಪಡೆಯುತ್ತಿದ್ದರು. ಹಣಕ್ಕೆ ಪರ್ಯಾಯವಾಗಿ ವಸ್ತುಗಳನ್ನು ಕೊಡು-ಕೊಳ್ಳುವ ಪದ್ಧತಿಯನ್ನಿರಿಸಿಕೊಂಡಿದ್ದರು. ಆಧುನಿಕ ಜೀವನ ಶೈಲಿಯಿಂದ ಈ ವೃತ್ತಿಗೆ ಸಂಚಕಾರ ಬಂದದ್ದರಿಂದ ಪರ್ಯಾಯ ವೃತ್ತಿಯನ್ನು ಅವಲಂಬಿಸಬೇಕಾಯಿತು. ಅಂತಹ ಜನರು ಮಣ್ಣಿನ ಕೆಲಸವನ್ನು ಮಾಡುವ ಗೋಡೆ ಕಟ್ಟುವ ಶ್ರಮದ ಕಾರ್ಯವನ್ನು ಮಾಡುತ್ತಿದ್ದಾರೆ. 'ಉಪ್ಪಾರ' ಜನಾಂಗ ಸೂಚಿಸುವ ಸ್ಥಳನಾಮಗಳನ್ನು ಗುರುತಿಸಲಾಗಿದೆ.

ಉಪ್ಪಾರ ಹಳ್ಳಿ - ದೇ

ಉಪ್ಪಾರಹಳ್ಳಿ - ಹೊ

ಉಪ್ಪಾರತಿ - ಮಾ

'ಉಪ್ಪಾರತಿ' ಪದವು, 'ಉಪ್ಪಾರ ' ಜನಾಂಗದ ಸ್ತ್ರೀವಾಚಿ ಪದವಾಗಿದ್ದು ಅದೇ ಹೆಸರಿನ ಸ್ಥಳನಾಮವನ್ನು ಇಲ್ಲಿ ಗುರುತಿಸಬಹುದು.

### ೫.೧೯ 'ದೊಂಬ' ಜನಾಂಗವನ್ನು ಸೂಚಿಸುವ ಸ್ಥಳನಾಮಗಳು

ಡೊಂಬ, ದೊಂಬ ಎಂಬ ಪದಗಳಿಂದ ಗುರುತಿಸುವ ಈ ಜನಾಂಗವು, ಗಣೆಯ ಮೇಲೆ ನಡೆದಾಡುವ, ವಿವಿಧ ರೀತಿಯ ಕಸರತ್ತುಗಳನ್ನು ಮಾಡುವ ವೃತ್ತಿಯನ್ನವಲಂಬಿಸಿದೆ. ಇವರು ಒಂದು ಕಡೆ ನೆಲೆ ನಿಲ್ಲದೆ, ಊರೂರು ಅಲೆಯುತ್ತ ತಮ್ಮ ಕಲೆಯನ್ನು ಪ್ರದರ್ಶಿಸುವುದರ ಮೂಲಕ ಜೀವನ ನಡೆಸುತ್ತಿದ್ದರು. ಕೆಲವರು ಈ ವೃತ್ತಿಯನ್ನು ಬಿಟ್ಟು ಒಂದು ಕಡೆ ನೆಲೆಯೂರಿ ಕೃಷಿ ,ಕೂಲಿ ಮುಂತಾದ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನ 'ದೊಂಬರಹಳ್ಳಿ' ಗ್ರಾಮವು 'ದೊಂಬ' ಜನಾಂಗವನ್ನು ಸೂಚಿಸುತ್ತದೆ.

ದೊಂಬರಹಳ್ಳಿ - ನೆ

### ೫.೧೧೦ ಗೊರವ ಜನಾಂಗ ಸೂಚಿಸುವ ಸ್ಥಳನಾಮಗಳು

'ಗೊರವ' ಜನಾಂಗವು ಮೈಲಾರಲಿಂಗನ ಆರಾಧಕರಾಗಿದ್ದು, ಪ್ರಕೃತಿಯಲ್ಲಿನ ಬೆಟ್ಟಗುಡ್ಡ ದೇವರು ನೆಲೆಸಿರುವ ಬೆಟ್ಟದ ಬಗ್ಗೆ ವಿಶೇಷವಾದ ಭಕ್ತಿಯನ್ನು ಹೊಂದಿದ್ದಾರೆ. "ಈ ಸಂಸ್ಕೃತಿಯ ವಿಶೇಷವೆಂದರೆ, ಇದು ಯಾವುದೇ ಒಂದು ಜಾತಿಗಾಗಲೀ, ಸ್ಥಳಕ್ಕಾಗಲಿ ಸೀಮಿತವಾದುದಲ್ಲ. ಪ್ರತಿಯೊಂದು ಸಮುದಾಯವೂ ಇದರಲ್ಲಿ ಸೇರಿದೆ. ಆದರೂ ಸಂಖ್ಯಾ ದೃಷ್ಟಿಯಿಂದ ಕುರುಬರೇ ಹೆಚ್ಚಾಗಿರುವುದು ಕಂಡುಬಂದಿದೆ."[೬] ಕೆಲವು ಪ್ರದೇಶದಲ್ಲಿ ಗೊರವರು ಒಂದು ಊರಿನಿಂದ ಮತ್ತೊಂದು ಊರಿಗೆ ಸಂಚರಿಸುತ್ತಾ, ಡಮರುಗವನ್ನು ನುಡಿಸುತ್ತಾ, ಕುಣಿಯುತ್ತಾ ಅವರಿವರು ನೀಡುವ ದವಸಧಾನ್ಯ ಸಂಗ್ರಹಿಸುವ ವೃತ್ತಿಯನ್ನಿರಿಸಿಕೊಂಡಿದ್ದಾರೆ. ಈ ರೀತಿಯ ಸಂಚಾರ ಅವರ ಆಚರಣೆಯೆಂದೂ ತಿಳಿದಿದ್ದಾರೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು 'ಗೊರವ' ಜನಾಂಗ ಸೂಚಿಸುವ ಸ್ಥಳನಾಮಗಳು ಕೆಲಕಂಡಂತಿವೆ.

| | |
|---|---|
| ಗೊರವನಪುರ - ಕ | ಗೊರವನಹಳ್ಳಿ - ನೆ |
| ಗೊರವೇನಹಳ್ಳಿ - ಹೊ | |

ಮೇಲಿನ ಸ್ಥಳನಾಮಗಳಲ್ಲಿ ಜಾತಿಯ ಜೊತೆ ವಾರ್ಗಿಕವು ಬಳಕೆಯಾಗಿದ್ದು ಷಷ್ಠಿ ವಿಭಕ್ತಿ ಪ್ರತ್ಯಯ ಸೇರಿಕೊಂಡಿದೆ.

### ೫.೧೧೧ ವಡ್ಡ ಜನಾಂಗ ಸೂಚಿಸುವ ಸ್ಥಳನಾಮಗಳು

'ವಡ್ಡ' ಜನಾಂಗವು ಕಲ್ಲಿನ ಕೆಲಸವನ್ನು ಮಾಡುವ ಪಾರಂಪರಿಕವಾದ ವೃತ್ತಿಯನ್ನವಲಂಬಿಸಿದ್ದರು. ಕಲ್ಲುಕಟ್ಟಡದ ನಿರ್ಮಾಣ, ಕೆಲವು ಪ್ರದೇಶದಲ್ಲಿ ಮಣ್ಣಿನ ಕೆಲಸಗಳನ್ನು ಮಾಡುವ (ವ್ಯವಸಾಯೇತರ) ವೃತ್ತಿಯನ್ನಿರಿಸಿಕೊಂಡಿದ್ದಾರೆ. ಶಿಲ್ಪ ಕೆತ್ತನೆಯ ಕೆಲಸ ಮಾಡುವ 'ಆಚಾರರು' (ಆಚಾರ್ಯ), ಸೂಕ್ಷ್ಮವಾದ ಕಲೆ, ವಿಗ್ರಹಗಳ ಕೆತ್ತನೆ ಮುಂತಾದ ಕಾರ್ಯವನ್ನು ಮಾಡುತ್ತಾರೆ. ವಡ್ಡರಿಗೂ ಆಚಾರರಿಗೂ ನೇರ ಸಂಬಂಧಗಳಿಲ್ಲ. ಆಚಾರರನ್ನು 'ವಿಶ್ವಕರ್ಮಿ'ಗಳೆಂದೂ ಕರೆಯುವರು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 'ವಡ್ಡ' ಜನಾಂಗವನ್ನು ಸೂಚಿಸುವ ಸ್ಥಳನಾಮಗಳನ್ನು ಪಟ್ಟಿ ಮಾಡಲಾಗಿದೆ.

| | |
|---|---|
| ವಡ್ಡರಹಳ್ಳಿ - ದೊ | ವಡ್ಡ ಕುಂಟೆ - ನೆ |
| ವಡ್ಡರ ಪಾಳ್ಯ - ನೆ | ವಡ್ಡರಹಳ್ಳಿ - ನೆ |
| ವಡ್ಡರ ಪಾಳ್ಯ - ಮಾ | ವಡ್ಡರಹಳ್ಳಿ - ಮಾ |

'ವಡ್ಡ' ಜನಾಂಗವಾಚಿ ಸ್ಥಳನಾಮಗಳು ದೊಡ್ಡಬಳ್ಳಾಪುರ, ನೆಲಮಂಗಲ ಹಾಗೂ ಮಾಗಡಿ ತಾಲ್ಲೂಕುಗಳಲ್ಲಿ ಮಾತ್ರ ಕಂಡುಬಂದಿದೆ. 'ವಡ್ಡ' ನಿರ್ದಿಷ್ಟಕ್ಕೆ ಹಳ್ಳಿ ಮತ್ತು ಪಾಳ್ಯ ಎಂಬ ವಾರ್ಗಿಕಗಳು ಸಾಮಾನ್ಯವಾಗಿ ಸೇರಿಕೊಳ್ಳುವುದರಿಂದ, ಪ್ರತಿಕರಣ ಸ್ಥಳನಾಮಗಳಾಗಿವೆ.

### ೩.೧೧೨ 'ಗೌಡ' ಜನಾಂಗವನ್ನು ಸೂಚಿಸುವ ಸ್ಥಳನಾಮಗಳು

'ಗಾವುಂಡ 'ಪದದಿಂದ 'ಗೌಡ' ಪದದ ನಿಷ್ಪನ್ನ ವಾಗಿದೆ. 'ಗಾವುಂಡ' ಎಂಬುದು ಊರಿನ ಹಿರಿಯ ಮುಖಂಡ , ನಾಯಕ -ಎಂಬ ಅರ್ಥಗಳನ್ನು ನೀಡುತ್ತದೆ. ಗಾವುಂಡನು ಊರಿನ ಮುಖ್ಯಸ್ಥನಾಗಿ ಕಾರ್ಯ ನಿರ್ವಹಿಸುತ್ತಿದ್ದನು. ಸ್ಥಳನಾಮಗಳಿಗೆ ನಾಮ ನಿರ್ದೇಶನ ಮಾಡುವಾಗ, ವ್ಯಕ್ತಿನಾಮಗಳನ್ನು ವಿಶಿಷ್ಟವಾಗಿ ಬಳಸಲಾಗಿದ್ದು ಅಂತಹ ಸಂದರ್ಭಗಳಲ್ಲಿ 'ಗೌಡ' ಪದವೂ 'ವಿಶಿಷ್ಟ'ದಲ್ಲಿ ಸೇರಿಕೊಂಡಿವೆ. 'ಗೌಡ' ಎಂಬುದು ಒಕ್ಕಲಿಗ ಜನಾಂಗವನ್ನು ಸೂಚಿಸುವ ಪದವಾಗಿದ್ದು ವ್ಯವಸಾಯ ಹಾಗೂ ಪಶುಪಾಲನೆ ಇವರ ಮುಖ್ಯ ಕಸುಬಾಗಿದ್ದಿತು. ಗಾವುಂಡ ವಾಸಿಸುತ್ತಿದ್ದ ಊರಿಗೆ ಅವನ ಹೆಸರೆ ನಿರ್ದಿಷ್ಟವಾಗಿ ಸೇರಿದ್ದು, ಸುತ್ತಮುತ್ತಲಿನ ಊರುಗಳು ಅವನ ನಿಯಂತ್ರಣದಲ್ಲಿರುತ್ತಿದ್ದವು.

| | |
|---|---|
| ಅಜ್ಜೇಗೌಡವವಲಸೆ - ಕ | ಪುರುಷ ಗೌಡನಹಳ್ಳಿ - ಕ |
| ಬಾಲಗೌಡನಹಳ್ಳಿ - ಕ | ತಿಮ್ಮೇಗೌಡನ ಹೊಸಹಳ್ಳಿ - ದೇ |
| ಸೌತೆಗೌಡನಹಳ್ಳಿ -ದೇ | ಚುಂಚೇಗೌಡನ ಹೊಸ ಹಳ್ಳಿ - ದೊ |
| ಗಿಡ್ಡೇಗೌಡನ ಚನ್ನೋಹಳ್ಳಿ - ನೆ | ಹುಲಿಗೇಗೌಡನಹಳ್ಳಿ - ನೆ |
| ನಾಡಗೌಡಗೊಲ್ಲಹಳ್ಳಿ - ಹೊ | |

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಗುರುತಿಸಿರುವ ಜಾತಿವಾಚಿ ಸ್ಥಳನಾಮಗಳಲ್ಲಿ ವ್ಯಕ್ತಿನಾಮಗಳು ಸೇರಿವೆ. ಇಂತಹ ಸಂದರ್ಭದಲ್ಲಿ ಜಾತಿಯು ವ್ಯಕ್ತಿನಾಮ ನಿರ್ದಿಷ್ಟದ ಉತ್ತರ ಪದವಾಗಿ ಬಳಕೆಯಾಗುತ್ತದೆ. ಈ ರೀತಿಯ ವ್ಯಕ್ತಿನಾಮಗಳಲ್ಲಿ ಜಾತಿಯು ವಾರ್ಗಿಕವಾಗಿ ಬಳಕೆಯಾಗಿರುತ್ತದೆ. ಜಾತಿ ವಾಚಿ ಸ್ಥಳನಾಮಗಳಲ್ಲಿ ಕಂಡುಬರುವ ಮತ್ತೊಂದು ವಿಶೇಷವೆಂದರೆ, ವೃತ್ತಿಯನ್ನು ಸೂಚಿಸುವುದು. ಜಾತಿ - ವೃತ್ತಿ ಪರಸ್ಪರ ಸಂಬಂಧವನ್ನು ಹೊಂದಿರುವುದೇ ಇದಕ್ಕೆ ಕಾರಣವಾಗಿದೆ.

### ಮಾದರಿ ಜಾತಿಸೂಚಿ ಸ್ಥಳನಾಮಗಳ ವಿಶ್ಲೇಷಣೆ

ಮಾನವರು ಸೃಷ್ಟಿಸಿಕೊಂಡಿರುವ ವರ್ಣ, ಜಾತಿ, ವರ್ಗ, ಭಾಷೆ ಸಂಸ್ಕೃತಿ ಮುಂತಾದುವು, ಒಬ್ಬರಿಂದ ಮತ್ತೊಬ್ಬರನ್ನು ಪ್ರತ್ಯೇಕಿಸುವ ವಿಶೇಷ ಗುಣವನ್ನು ಹೊಂದಿದೆ. ಪಾಶ್ಚಿಮಾತ್ಯರಲ್ಲಿ 'ವರ್ಣ'ವು ಬಣ್ಣ ಎಂಬರ್ಥದಲ್ಲಿ ಬಳಕೆಯಲ್ಲಿದೆ. ಭಾರತೀಯ ಸಮಾಜದಲ್ಲಿ 'ವರ್ಣ'ವು ಪ್ರಾಚೀನ ಸಮಾಜದ ಜಾತಿವ್ಯವಸ್ಥೆ ವರ್ಗ ಹಾಗೂ ವಿವಿಧ ವೃತ್ತಿಗಳನ್ನು ಸೂಚಿಸುತ್ತದೆ. ವರ್ಣವ್ಯವಸ್ಥೆಯು ಜಾತಿವ್ಯವಸ್ಥೆಯಾಗಿ ಸ್ಥಿತ್ಯಂತರವಾಗಿ ಇಂದಿಗೂ ಅಸ್ತಿತ್ವದಲ್ಲಿದೆ. ಜಾತಿ ಮತ್ತು ಕಸುಬು ಇವೆರಡೂ ಅಂತರ್ಗತವಾಗಿರುವ ಪ್ರತ್ಯೇಕ ಅಂಶಗಳಾಗಿದ್ದು ಆಧುನಿಕ ಸಮಾಜದಲ್ಲಿ ಯಾದೃಚ್ಛಿಕವಾಗಿದೆ. ಎಲ್ಲಾ ವೃತ್ತಿಗಳನ್ನೂ ಜಾತಿ ಆಧಾರವಾಗಿಟ್ಟುಕೊಂಡು ಗುರುತಿಸಲು ಸಾಧ್ಯವಿಲ್ಲ. ಪ್ರಾಚೀನ ಸಮಾಜದ ವರ್ಣ ವ್ಯವಸ್ಥೆಯು ನಿರ್ದಿಷ್ಟವಾಗಿ ಇದನ್ನು ವಿಂಗಡಿಸಿಕೊಂಡಿದ್ದಿತು.

ಜಾತಿಸೂಚಿ ಸ್ಥಳನಾಮಗಳು ವಿವಿಧ ಧರ್ಮಗಳನ್ನು ಸೂಚಿಸಬಹುದಾಗಿದ್ದು, ಇಂತಹ ಸಂದರ್ಭದಲ್ಲಿ ವೃತ್ತಿವಾಚಿ ಅಂಶಗಳನ್ನೂ ಗುರುತಿಸಲು ಸಾಧ್ಯವಿರುವುದಿಲ್ಲ. ಕೆಲವೊಮ್ಮೆ ನಿರ್ದಿಷ್ಟ ಜಾತಿ ಸೂಚಕ ಜನಾಂಗವೇ ಬಹುಸಂಖ್ಯಾತರಾಗಿದ್ದರೂ, ಅದನ್ನು ಸ್ಥಳನಾಮಗಳು ಸೂಚಿಸದೇ ಇರಬಹುದು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೆಲವು ಜಾತಿಸೂಚಕ ಸ್ಥಳನಾಮಗಳನ್ನು ವಿಶ್ಲೇಷಣೆ ಮಾಡಲಾಗಿದೆ

ಉದಾ :

ಕುರುಬರ ಕುಂಟೆ (ದೇ) : ಕುರಿ ಸಾಕಾಣಿಕೆ ಮಾಡುವ, ಉಣ್ಣೆಯ ಕಂಬಳಿ ನೇಯ್ಗೆ ಮಾಡುವ ಜನಾಂಗ. ಕುರುಬ + ಅ + ಹಳ್ಳಿ = ಕುರುಬರ ಹಳ್ಳಿ ಆಗಿದೆ.
ಕುರುಬ – ವಿಶಿಷ್ಟವಾಗಿದ್ದು ಹಳ್ಳಿ – ವಾರ್ಗಿಕ
ಕನ್ನಡ ಭಾಷೆಯನ್ನೂ ಮಾತನಾಡುವ ಜನಾಂಗವಾಗಿದೆ.

ತಿಗಳರ ಹಳ್ಳಿ (ಕ) : ಕರಗ ಹೊರುವ, ತಮಿಳು ಮಾತನಾಡುವ, ತಮಿಳುನಾಡಿನಿಂದ ಬಂದು ನಲೆಸಿರುವ ವಲಸೆ ಜನಾಂಗ. ವ್ಯವಸಾಯ ಮತ್ತು ಪಶುಪಾಲನೆ ಮುಖ್ಯ ಕಸುಬಾಗಿದೆ. ತಿಗಳ + ಅ + ಹಳ್ಳಿ = ತಿಗಳರ ಹಳ್ಳಿ ಆಗಿದೆ.
ತಿಗಳ – ವಿಶಿಷ್ಟ ಜಾತಿವಾಚಿ, ಹಳ್ಳಿ – ವಾರ್ಗಿಕ

ಮೇದಮಾರನಹಳ್ಳಿ (ಕ) : ಮೇದ, ಮೇದರು – ಜಾತಿಸೂಚಿ, ಮಾರ – ವ್ಯಕ್ತಿವಾಚಿ, ಹಳ್ಳಿ – ವಾರ್ಗಿಕ ಆಗಿದೆ.
ಮೇದ + ಮಾರ + ಅ + ಹಳ್ಳಿ ಮೇದ ಮಾರನಹಳ್ಳಿ ಆಗಿದೆ. ಮೇದ–ಕೊರಚರು ಎಂದು ಕರೆಯುವ ಇವರು ಬಿದಿರಿನ ಕೆಲಸ ಮಾಡುವವರು ಕನ್ನಡ ಮತ್ತು ತೆಲುಗು ಮಾತನಾಡುವವರು. 'ಕೊರಮ' ಎಂದೂ ಕರೆಯಲಾಗುತ್ತಿದೆ.

ಬೊಮ್ಮವಾರ (ದೇ) : ಬೊಮ್ಮ – ಅಗ್ರಹಾರ ಸೂಚಕ ಬ್ರಾಹ್ಮಣರ ನೆಲೆ. ಚೋಳರ ಕಾಲದಲ್ಲಿ 'ಮಂಗಲ'ಗಳೆಂದು ಕರೆಯಲಾಗುತ್ತಿದ್ದಿತು.
ಬೊಮ್ಮ + ಆವರ = ಬೊಮ್ಮಾವಾರ ಬೊಮ್ಮ + ಆವರ = ಬೊಮ್ಮವಾರ ಆಗಿದೆ.
ಮೇಲಿನ ಎರಡು ರೂಪಗಳಲ್ಲಿ ವ್ಯತ್ಯಾಸವಿದೆ.
ಬೊಮ್ಮ + ಆವರ = ಬೊಮ್ಮಾವರ ರೂಪದ ಉತ್ತರ ಪದದ ಆದಿಯಲ್ಲಿ 'ಆವರ' ಬಂದರೆ 'ಬೊಮ್ಮಾವರ' ರೂಪವೂ, ಪೂರ್ವಪದದ – ಕೊನೆಯ ಸ್ವರ ದೀರ್ಘವಾಗುತ್ತದೆ. ಬೊಮ್ಮ ವಾರ – ಉತ್ತರ ಪದದ ಆದಿಯಲ್ಲಿ 'ವಾರ' ಆಕೃತಿಮಾ ಬಂದಲ್ಲಿ, ಪೂರ್ವಪದದ ಕೊನೆಯ ಅಕ್ಷರ 'ಅ' ಹ್ರಸ್ವವಾಗಿಯೇ ಉಳಿದು ಬೊಮ್ಮವಾರ ಆಗುತ್ತದೆ. ಆವರ, ವರ, ವಾರ ಘಟಕಗಳು 'ಪುರ' ಸೂಚಕ ಆಕೃತಿಮಾಗಳಾಗಿವೆ.

ಗೊಲ್ಲಹಳ್ಳಿ (ಕ) : ಗೊಲ್ಲರು ವಾಸವಿರುವ ಸ್ಥಳ. ಪಶುಸಾಕಾಣಿಕೆ ಮುಖ್ಯ ಕಸುಬು. ಹಾಲು ಮಾರಾಟ ಮಾಡುವವರು, ಯಾದವ ಜಾತಿಗೆ ಸೇರಿದವರು. ಗೊಲ್ಲ + ಹಳ್ಳಿ - ಗೊಲ್ಲಹಳ್ಳಿ, ಗೊಲ್ಲ ಜಾತಿವಾಚಿ ಘಟಕ ಹಳ್ಳಿ - ವಾರ್ಗಿಕ.

ಊರಗೊಲ್ಲಹಳ್ಳಿ (ಕ) : ಬುಡಕಟ್ಟು ಜನಾಂಗದ ವಾಸದ ನೆಲೆ. ಪಶುಪಾಲನೆ, ಹಂದಿ ಸಾಕಾಣಿಕೆ ಕೂಲಿಕೆಲಸ ಮುಂತಾದ ವೃತ್ತಿ ಅವಲಂಬಿತರು. ಊರು ಗೊಲ್ಲಹಳ್ಳಿ 'ಊರು'-ಆಕೃತಿಮಾ ವಾರ್ಗಿಕನಾದರೂ, ಪೂರ್ವಪದದಲ್ಲಿ 'ವಿಶಿಷ್ಟವಾಗಿ ಬಳಕೆಯಾಗಿದೆ. ಗೊಲ್ಲ - ಜಾತಿ ಸೂಚಕ, ವಿಶಿಷ್ಟ ಘಟಕ

ಹಳ್ಳಿ - ಸಾಮಾನ್ಯವಾರ್ಗಿಕವಾಗಿದೆ. ಗೊಲ್ಲರಲ್ಲಿನ - ಉಪಜಾತಿ, ಕಾಡುಗೊಲ್ಲ ಉಪಜಾತಿ ಇರುವುದರಿಂದ, 'ಊರು ಗೊಲ್ಲ' ಎಂದು ಬಳಕೆಯಾಗಿರುವ ಸಾಧ್ಯತೆ ಇದೆ.

ದೇವರಗೊಲ್ಲಹಳ್ಳಿ (ಕ) : ಗೊಲ್ಲ ಜಾತಿಯವರಲ್ಲಿನ ಒಂದು ಉಪಜಾತಿ. ವ್ಯವಸಾಯ ವೃತ್ತಿಯನ್ನು ಮಾಡುವ ಇವರು. ಊರಗೊಲ್ಲ ಹಳ್ಳಿಯವರಿಗಿಂತ ಉತ್ತಮರು ಎಂಬ ಭಾವನೆ. ದೇವರ + ಗೊಲ್ಲ + ಹಳ್ಳಿ ದೇವರ ಗೊಲ್ಲಹಳ್ಳಿ ದೇವರು - ದೈವವಾಚಿ ಗೊಲ್ಲ- ಜಾತಿವಾಚಿ ಹಳ್ಳಿ - ವಾರ್ಗಿಕವಾಗಿದೆ.

ಸೋಲಿಗ್ಗೆರೆ (ಕ) : ಸೋಲಿಗರು ವಾಸವಾಗಿರುವ ಊರು, ಸೋಲಿಗ + ಕೆರೆ = ಸೋಲಿಗಕೆರೆ ಸೋಲಿಗರಕೆರೆ ಸೋಲಿಗ + ಕೆರೆ, ಸೋಲಿಗ + ಕೆರೆ 'ಕ' 'ಗ' ಕಾರವಾಗಿ ಪೂರ್ವಪದದ ಕೊನೆಸ್ವರ 'ಅ' ಲೋಪವಾಗಿ ವ್ಯಂಜನದ ಜೊತೆಸೇರಿ ದ್ವಿತ್ವವಾಗಿದೆ. ಸೋಲಿಗ್ + ಕೆರೆ ಸೋಲಿಗ್ಗೆರೆ ಆಗಿದೆ.

ಬ್ಯಾಡರ ಹಳ್ಳಿ (ದೊ) : ಬೇಡರು, ನಾಯಕರು, ವಾಲ್ಮೀಕಿ ಮತಸ್ಥರು ಕೆಲವು ಪಾಳೆಯಗಾರರ ಜಾತಿಯನ್ನು ಸೂಚಿಸುತ್ತವೆ. ಬೇಟೆಯ ವೃತ್ತಿ, ಶ್ರಮಜೀವಿಗಳಾಗಿದ್ದು ಮಣ್ಣಿನ ಕೆಲಸ ಮಾಡುವವರು. ಬೇಡರು ವಾಸವಿರುವ ಸ್ಥಳ. ಬೇಡರ + ಹಳ್ಳಿ = ಬೇಡರಹಳ್ಳಿ ಬೇಡರು - ವಿಶಿಷ್ಟ ಹಳ್ಳಿ - ವಾರ್ಗಿಕ ಬೇಡ - ಬ್ಯಾಡ ಆಗಿದೆ. ಬ್ಯಾಡ + ಅ + ಹಳ್ಳಿ = ಬ್ಯಾಡರಹಳ್ಳಿ -

| | | |
|---|---|---|
| ನಾಯಕನಹಳ್ಳಿ (ಮಾ) | : | ನಾಯಕ - ಜಾತಿ ಸೂಚಕ ಘಟಕ. ನಾಯಕ - ಊರಿನ ಅಥವಾ ಗುಂಪಿನ ಮುಖ್ಯಸ್ಥ ನಾಯಕ + ಅ + ಹಳ್ಳಿ = ನಾಯಕನಹಳ್ಳಿ. ನಾಯಕ - ವಿಶಿಷ್ಟ, ಹಳ್ಳಿ - ವಾಚಕ ನಾಯಕ 'ಅ' ಸಂಬಂಧ ಸೂಚಕ ಷಷ್ಠಿ ವಿಭಕ್ತಿ ಬಳಕೆಯಾಗಿದೆ - ವ್ಯಕ್ತಿವಾಚಿಯಾಗಿಯೂ ಬಳಕೆಯಾಗಿರಬಹುದು. |
| ಆಚಾರ್ಲಹಳ್ಳಿ (ದೊ) | : | ಆಚಾರ + ಅ + ಹಳ್ಳಿ = ಆಚಾರರ ಹಳ್ಳಿ, ಆಚಾರ್ಲಹಳ್ಳಿ ಆಗಿದ್ದು, ತೆಲುಗು ಭಾಷೆಯ ಪ್ರಭಾವವಾಗಿರುವ ಸಾಧ್ಯತೆ ಇದೆ. ಆಚಾರರು - ಲೋಹದ, ಕೆತ್ತನೆಯ, ಮರಗೆಲಸ ಮಾಡುವವರು. ಕೆಲವು ಭಾಗದಲ್ಲಿ ಅರ್ಚಕರ ವೃತ್ತಿಯನ್ನು ಮಾಡುವವರು.ಕನ್ನಡ ಮತ್ತು ತೆಲುಗು ಭಾಷೆಯನ್ನೂ ಮಾತನಾಡುತ್ತಾರೆ. |
| ವಡ್ಡರ ಪಾಳ್ಯ (ನೆ) | : | ಒಡ್ಡರು - ಒಡ್ರದೇಶದ ಮೂಲದವರು, ಈಗಿನ ಒರಿಸ್ಸಾ ರಾಜ್ಯದ ಶ್ರಮಜೀವಿಗಳು.[೧೧] ಮಣ್ಣು - ಕಲ್ಲು ಕೆಲಸ ಮಾಡುವವರು. ವಡ್ಡ - ಜಾತಿ ಸೂಚಕ, ವಿಶಿಷ್ಟ ಘಟಕ ಪಾಳ್ಯ - ವಾರ್ಗಿಕ ಪಾಳ್ಯ > ಪಾಳೆಯ (ಬೀಡು ಸೇನೆಯ ನೆಲೆ) |
| ಸೆಟ್ಟಿಹಳ್ಳಿ (ಹೊ) | : | ಸೆಟ್ಟಿ, ಶೆಟ್ಟಿ , ಶ್ರೇಷ್ಠಿ, ವೈಶ್ಯ ವರ್ಣಗಳಿಂದ ಸೃಷ್ಟಿಯಾದ ಜಾತಿ ವ್ಯಾಪಾರ ಮುಖ್ಯ ವೃತ್ತಿ. ತೆಲುಗು ಭಾಷಿಕರು ಶೆಟ್ಟರು ವಾಸವಿದ್ದ ಊರು - ಶೆಟ್ಟರ ಹಳ್ಳಿ, ಶೆಟ್ಟಿಹಳ್ಳಿ, ಸೆಟ್ಟಿಹಳ್ಳಿ ಆಗಿದೆ. |
| ಉಪ್ಪಾರ ಹಳ್ಳಿ (ಹೊ) | : | ಉಪ್ಪಾರ + ಹಳ್ಳಿ = ಉಪ್ಪಾರ ಹಳ್ಳಿ. ಉಪ್ಪು ತಯಾರಿಸುವ, ಮಾರುವ ವೃತ್ತಿಯವರು. ಉಪ್ಪಾರ - ಜಾತಿಸೂಚಕ ವಿಶಿಷ್ಟ ಹಳ್ಳಿ - ವಾರ್ಗಿಕ ಇವರು ಆಂಧ್ರ ಮೂಲದವರಾಗಿದ್ದು ತೆಲುಗು ಮಾತನಾಡುವವರು. ಕೆಲವು ಭಾಗದಲ್ಲಿ ಬಾವಿತೋಡುವ ಹಾಗೂ ಮಣ್ಣಿನ ಕೆಲಸ ಮಾಡುತ್ತಾರೆ. |

ಹೀಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಜಾತಿವಾಚಿ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ. ಪ್ರತಿಶತ ಸ್ಥಳನಾಮಗಳಲ್ಲಿ ಹೆಚ್ಚಾಗಿ ಜಾತಿಸೂಚಕ ಅಂಶಗಳು ವಿಶಿಷ್ಟವಾಗಿ ಬಳಕೆಯಾಗಿರುವುದ ಮಹತ್ವದ ಅಂಶವಾಗಿದೆ. ಊರುಗಳ ಆರಂಭದಲ್ಲಿ ಅಥವಾ ಸ್ಥಳನಾಮಕರಣವಾದ ಸನ್ನಿವೇಶದಲ್ಲಿ ಇದ್ದಂತೆ, ನಿರ್ದಿಷ್ಟ ಜಾತಿಯನ್ನೂ ಈಗ ಊರುಗಳಲ್ಲಿ ಗುರುತಿಸುವುದು ಕಷ್ಟಕರವಾಗಿದೆ.

## ೫.೨ ವೃತ್ತಿವಾಚಿ ಸ್ಥಳನಾಮಗಳು

ಮಾನವ ಸಮೂಹ ಒಂದು ನಿರ್ದಿಷ್ಟ ಪ್ರದೇಶದಲ್ಲಿ ನೆಲೆ ನಿಂತಿದ್ದರಿಂದ ಸ್ಥಳನಾಮಗಳು ರೂಪುಗೊಂಡವು. ಈ ಸಮೂಹಗಳು ಒಂದು ನಿರ್ದಿಷ್ಟವಾದ ಕಸುಬನ್ನು ಹೊಂದಿದ್ದುದು ಇಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಇದೇ ಊರೇ ಈ ವೃತ್ತಿಯನ್ನು ಮಾಡುವ ಜನಸಮುದಾಯವನ್ನು ಹೊಂದಿತ್ತು ಎಂದು ಹೇಳಲು ಸಾಧ್ಯವಿಲ್ಲ. ಊರಿನಲ್ಲಿ ಬಹುಪಾಲು ಜನರು ಈ ವೃತ್ತಿ ಅವಲಂಬಿಸಿದ್ದರು ಅಥವಾ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದವರಾಗಿದ್ದರು. ಸಮಾಜ ಈ ವೃತ್ತಿಯ ಜನರನ್ನು ಅವಲಂಬಿಸಿತ್ತು. ಕೆಲವೊಮ್ಮೆ ಜಾತಿಸೂಚಿ ಅಂಶವಿಲ್ಲದಿದ್ದರೂ ವೃತ್ತಿಸೂಚಿ ಸ್ಥಳನಾಮವಾಗಿರಬಹುದು.

ಉದಾ: ದಂಡುಪಾಳ್ಯ, ಕೂಗೋನಹಳ್ಳಿ

ಊರುಗಳು ರೂಪುಗೊಳ್ಳುವಾಗ ಜನರು ಮಾಡುತ್ತಿದ್ದ ವೃತ್ತಿಸೂಚಕ ಘಟಕಗಳು 'ವಿಶಿಷ್ಟವಾಗಿ ಬಳಕೆಯಾಗಿದ್ದಲ್ಲಿ ಅವುಗಳನ್ನು ವೃತ್ತಿಸೂಚಕ ಸ್ಥಳನಾಮಗಳೆಂದು ಗುರುತಿಸಬಹುದು. ಪೂರ್ವಪದದಲ್ಲಿ ಈ ಪದಗಳು ಬಳಕೆಯಾಗಿರುತ್ತವೆ.

ಉದಾ: **ಶ್ರೋತ್ರೀಯ ತೆಲ್ಲೋಹಳ್ಳಿ** (ದೇ) ವೇದಜ್ಞಾನ ಪಡೆದಿರುವ ಬ್ರಾಹ್ಮಣ ವಾಸದ ನೆಲೆ, ಶ್ರೋತ್ರೀಯ ಗ್ರಾಮಗಳಿಗೆ ಹಿಂದೆ ತೆರಿಗೆ ವಿನಾಯಿತಿ ನೀಡಲಾಗಿದ್ದಿತು. ಶ್ರೋತ್ರೀಯ ತೆಲ್ಲ - ವಿಶಿಷ್ಟವಾಗಿದ್ದು ತೆಲ್ಲ- ಬಿಳಿ ಬಣ್ಣ ಸೂಚಕ ತೆಲುಗು ಪದವಾಗಿದೆ. ಹಳ್ಳಿ-ವಾರ್ಗಿಕ.

### ವೃತ್ತಿವಾಚಿ ಸ್ಥಳನಾಮಗಳ ಪಟ್ಟಿ

| | |
|---|---|
| ಭಂಟನಾಳು - ದೇ | ವರದನಹಳ್ಳಿ - ದೊ |
| ಜೋಯಿಸ ಅಗ್ರಹಾರ - ದೊ | ಕೂಗೋನಹಳ್ಳಿ - ದೊ |
| ವಣಗರಹಳ್ಳಿ - ದೊ | ಅಗಸರಹಳ್ಳಿ - ನೆ |
| ಗೊರವನಹಳ್ಳಿ - ನೆ | ಅಣ್ಣಯ್ಯ ಶಾಸ್ತ್ರೀ ಪಾಳ್ಯ-ನೆ |
| ರಂಗಾಚಾರಿ ಪಾಳ್ಯ - ಮಾ | ಕಂಚುಗಾರನ ಹಳ್ಳಿ - ಮಾ |
| ಕಾಯಕನಪುರ - ರಾ | ಶಾನುಭೋಗನ ಹಳ್ಳಿ - ರಾ |
| ಪೂಜಾರಾಮನ ಹಳ್ಳಿ - ಹೊ | ಸಾರಕನೂರು - ಹೊ |
| ದೊಂಬರ ಹಳ್ಳಿ - ಹೊ | ವಾಜರಹಳ್ಳಿ - ಹೊ |

### ವೃತ್ತಿವಾಚಿ ಸ್ಥಳನಾಮ ವಿಶ್ಲೇಷಣೆ

ಪಂಡಿತಪುರ (ದೇ) : ಬ್ರಾಹ್ಮಣ ವಾಸದ ನೆಲೆ. ಒಬ್ಬನೇ ಬ್ರಾಹ್ಮಣ ವಾಸವಾಗಿದ್ದರೂ, ಆತನ ವೃತ್ತಿಯ, ಜ್ಞಾನದ ಬಗ್ಗೆಗಿನ ಗೌರವದಿಂದ 'ಪಂಡಿತ' ಪದವು ವೃತ್ತಿವಾಚಿಯಾಗಿ ಹಾಗೂ ವಿಶಿಷ್ಟವಾಗಿ ಸ್ಥಳನಾಮದಲ್ಲಿ ಬಳಕೆ.

'ಪುರ' ವಾರ್ಗಿಕವಾಗಿದೆ. ಪಂಡಿತ + ಪುರ = ಪಂಡಿತಪುರ.

ಅರ್ಚಕರ ಹಳ್ಳಿ (ರಾ) : ಮೇಲ್ಜಾತಿ ಸೂಚಕ, ದೇವಸ್ಥಾನದಲ್ಲಿ ಪೂಜೆಮಾಡುವ ವೃತ್ತಿವಾಚಿ ಸ್ಥಳನಾಮ. ಅರ್ಚಕ = ಪೂಜಾರಿ ಎಂಬರ್ಥವಿದ್ದು, 'ಹಳ್ಳಿ' - ವಾರ್ಗಿಕವಾಗಿ ಬಳಕೆಯಾಗಿದೆ.

ಅರ್ಚಕ + ಅ + ಹಳ್ಳಿ = ಅರ್ಚಕರಹಳ್ಳಿ ಷಷ್ಠಿ ವಿಭಕ್ತಿ ಪ್ರತ್ಯಯ ಸೇರಿಕೊಂಡಿದೆ.

ಶಾನುಭೋಗನ ಹಳ್ಳಿ (ರಾ) : ಎಲ್ಲಾ ಪ್ರದೇಶಗಳಲ್ಲಿಯು ಬಳಕೆಯಲ್ಲಿರುವ ಭೂದಾಖಲೆ ನೋಡಿ ಕೊಳ್ಳುವ, ತೆರಿಗೆ ಸಂಗ್ರಹಿಸುವ ಕರಣಿಕ ವೃತ್ತಿ ಮಾಡುತ್ತಿದ್ದವರು.[೨೨] ಅನೇಕ ಊರುಗಳಿಗೆ ಒಬ್ಬನೇ 'ಶಾನುಭೋಗ' ಇದ್ದು ಅವನು ವಾಸವಿದ್ದ ನೆಲೆಯೇ ಈ ಊರು. ಶ್ಯಾನುಭೋಗ, ಶಾನುಭೋಗ ಆಗಿದ್ದು, ಆದಿಯಲ್ಲಿನ 'ಯ' ವ್ಯಂಜನ ದ್ವಿತ್ವ ಲೋಪವಾಗಿ 'ಶಾ' ಆಗಿದೆ. ಶಾನುಭೋಗ + ಅ + ಹಳ್ಳಿ = ಶಾನುಭೋಗನಹಳ್ಳಿ

ಅಗಸರ ಹಳ್ಳಿ (ನೆ) : ಬಟ್ಟೆಯನ್ನು ಶುಚಿಮಾಡಿಕೊಡುವವ. 'ಅಗಸ' ಜಾತಿವಾಚಿ ಘಟಕ ಆಗಿದ್ದರೂ ವೃತ್ತಿವಾಚಿಯೂ ಬಳಕೆ ಆಗುತ್ತದೆ.

ಅಗಸ + ಅ + ಹಳ್ಳಿ = ಅಗಸರಹಳ್ಳಿ

ಅಗಸ - ವಿಶಿಷ್ಟವಾಗಿ, ಹಳ್ಳಿ - ವಾರ್ಗಿಕವಾಗಿ ಬಳಕೆಯಾಗಿದೆ.

ವಡ್ಡರ ಹಳ್ಳಿ (ನೆ) : ಕಲ್ಲುಕುಟಿಗ, ಕಲ್ಲು ಕೆಲಸಮಾಡುವ, ಕಲ್ಲಿನ ಕಟ್ಟಡ ಕಟ್ಟುವ ಮಣ್ಣಿನ ಕೆಲಸ ಮಾಡುವ ಜಾತಿಸೂಚಿ ಘಟಕ 'ವಡ್ಡ'-ವಿಶಿಷ್ಟ, 'ಹಳ್ಳಿ' - ವಾರ್ಗಿಕ ವಡ್ಡ + ಅ + ಹಳ್ಳಿ = ವಡ್ಡರ ಹಳ್ಳಿ

ಕಂಚುಗಾರನ ಹಳ್ಳಿ : 'ಕಂಚುಗಾರ' - ಕುಲನಾಮವಾಗಿದೆ. ತಾಮ್ರ, ಹಿತ್ತಾಳೆ ಮುಂತಾದ ಲೋಹ ಕೆಲಸ ಮಾಡುವ ವೃತ್ತಿಯ ಜನಾಂಗ

ಕಂಚು-ಲೋಹ ಸೂಚಕ ಆಕೃತಿಮಾ

ಕಂಚುಗಾರ - ಲೋಹ ಕೆಲಸ ಮಾಡುವವ, ವಿಶಿಷ್ಟ ಘಟಕ, ಹಳ್ಳಿ - ವಾರ್ಗಿಕವಾಗಿ ಬಳಕೆ.

ಕಂಚುಗಾರ + (ಅ) + ಹಳ್ಳಿ = ಕಂಚುಗಾರನಹಳ್ಳಿ

ವಾಜರಹಳ್ಳಿ (ಮಾ) : ೧) ಚಿನ್ನ ಬೆಳ್ಳಿ ಮುಂತಾದ ಲೋಹ ಕೆಲಸ ಮಾಡುವ ವೃತ್ತಿ ಸೂಚಿ. ಸ್ಥಳನಾಮ 'ಅಕ್ಕ ಸಾಲಿಗ' ಎಂಬ ಪದಕ್ಕೆ ಸಮಾನಪದ

೨) ವಾಜ - ಓಜ,ಓಝ, ಓವಜ ಎಂಬ ಕನ್ನಡ ರೂಪಗಳಿವೆ. ಓಜ - ಉಪಾಧ್ಯಾಯ, ಗುರು ಎಂಬರ್ಥಗಳಿವೆ. ಗುರು

ಅಥವಾ ಉಪಾಧ್ಯಾಯ ವಾಸಿಸುತ್ತಿದ್ದ ಊರು ಎಂಬರ್ಥ ಬರುತ್ತದೆ.

ಶಿಲ್ಪ - ಕಲ್ಲಿನ ಕೆತ್ತನೆ ಮಾಡುವವ ಕಲೆಯ ಕೆಲಸ ಮಾಡುವವ ವಾಜ > ಓಜ (ಕಲಾಕಾರ) ಎಂಬರ್ಥದಲ್ಲಿ ಬಳಕೆ, ಓಜ < ವಾಜ ಆಗಿದೆ.

ಓಜ + ಅ +ಹಳ್ಳಿ = ಓಜರಹಳ್ಳಿ

ವಾಜ + ಅ +ಹಳ್ಳಿ = ವಾಜರ ಹಳ್ಳಿ

ದಂಡು ಪಾಳ್ಯ (ಹೊ) : ಈ ಸ್ಥಳನಾಮವು ಜಾತಿಸೂಚಿಯಾಗಿಲ್ಲದಿರುವುದು ವಿಶೇಷ.
ದಂಡು-ಸೈನ್ಯ, ಪಾಳ್ಯ-ಪಾಳೆಯ, ಬೀಡು, ಶಿಬಿರ
ಸೈನ್ಯ ಬೀಡು ಬಿಟ್ಟ ಪ್ರದೇಶ - ಅನ್ವರ್ಥ ನಾಮವಾಗಿದೆ.
ದಂಡು+ಪಾಳೆಯ > ದಂಡು ಪಾಳೆಯ > ದಂಡುಪಾಳ್ಯ ಆಗಿದೆ.

ದಾಸರಹಳ್ಳಿ : ಪೂಜೆಯ ಕಾರ್ಯಮಾಡುವ, ಭಿಕ್ಷಾವೃತ್ತಿ ಆಚರಣೆಯಾಗುಳ್ಳ ವೈಷ್ಣವ ಪಂಥದ ಜನರನ್ನು ಸೂಚಿಸುವ ಸ್ಥಳನಾಮ. ಇದು ವೃತ್ತಿಸೂಚಿ ಹಾಗೂ ಜಾತಿ ಸೂಚಿ ಸ್ಥಳನಾಮವಾಗಿದೆ.
'ದಾಸರು' ಎನ್ನುವ ಪ್ರತ್ಯೇಕ ಜಾತಿ ಹಾಗೂ ಉಪಜಾತಿಗಳ ಜನರು ವಾಸಿಸುವ ಪ್ರದೇಶ, ವೃತ್ತಿಸೂಚಿ ಹಾಗೂ ಜಾತಿಸೂಚಿ ಸ್ಥಳನಾಮ.
ದಾಸ +ಅ +ಹಳ್ಳಿ =ದಾಸರಹಳ್ಳಿ
ದಾಸ = ದೇವರ ಕೈಂಕರ್ಯ ಮಾಡುವ ಸೇವಕ ಎಂದರ್ಥ

ಬಳೆವೀರನ ಹಳ್ಳಿ (ರಾ) : ವೀರ - ವ್ಯಕ್ತಿವಾಚಿ
ಬಳೆ - ವಸ್ತುವಾಚಕ, 'ಹಳ್ಳಿ' - ವಾರ್ಗಿಕ
ಬಳೆಯನ್ನು ತೊಡಿಸುವ ಕಾರ್ಯ ಮಾಡುವ 'ವೀರ' (ವ್ಯಕ್ತಿನಾಮ) ನೆಲೆಸಿದ್ದ ಸ್ಥಳವಾಗಿದೆ.
ಬಳೆ +ವೀರ + ಅ + ಹಳ್ಳಿ = ಬಳೆ ವೀರನ ಹಳ್ಳಿ ಆಗಿದೆ.
'ಅ' ಸಂಬಂಧಕಾರಕ ಷಷ್ಠಿ ವಿಭಕ್ತಿ ಪ್ರತ್ಯಯ ಬಳಕೆಯಾಗಿದೆ.

ಕೂಗೋನ ಹಳ್ಳಿ (ದೊ) : ಊರುಗಳಲ್ಲಿ ವಿಷಯಗಳನ್ನು ಸಾರುವ ಕಾರ್ಯವನ್ನು ನಿರ್ವಹಿಸುತ್ತಿದ್ದವನು ನೆಲೆಸಿದ್ದ ಸ್ಥಳ. ಊರಿನಲ್ಲಿನ ಪಂಚಾಯಿತಿ ಸೇರುವ ವಿಷಯ ಅಥವಾ ಯಾವುದೇ ಪ್ರಕಟಣೆ ಆಗಬೇಕಿದ್ದಲ್ಲಿ ಮನೆ ಮನೆಗೆ, ಬೀದಿಗಳಲ್ಲಿ ಕೂಗಿ ಹೇಳುತ್ತಿದ್ದವನು ಇದ್ದ ಊರು.

| | | |
|---|---|---|
| | | ಕೂಗುವವನ > ಕೂಗುವನ > ಕೂಗೋನ ಆಗಿದೆ |
| | | ಕೂಗೋನ + ಹಳ್ಳಿ =ಕೂಗೋನಹಳ್ಳಿ |
| | | ವೃತ್ತಿವಾಚಿ ಆಗಿದ್ದು, ಜಾತಿವಾಚಿ ಅಂಶ ಕಂಡ ಬರುವುದಿಲ್ಲ. |
| | | (ಕೂಗಳತೆ - ನಿರ್ದಿಷ್ಟ ದೂರವನ್ನು ಸೂಚಿಸುತ್ತದೆ) |
| ಹೆಗ್ಗಡಿಹಳ್ಳಿ (ದೂ) | : | ಹೆಗ್ಗಡಹಳ್ಳಿ > ಹೆಗ್ಗಡಿಹಳ್ಳಿ > ಹೆಗ್ಗಡಳ್ಳಿ ಆಗಿದೆ. ಪೆರ್ಗಡೆ > ಪೆಗ್ಗಡೆ > ವೆಗ್ಗಡೆ > ಹೆಗ್ಗಡೆ > ಹೆಗ್ಡೆ - ಇವು ಪರ್ಯಾಯ ಪದಗಳಾಗಿವೆ. ರಾಜ್ಯದ ಗಡಿಗಳಲ್ಲಿ ಅಧಿಕಾರವನ್ನು ನಡೆಸುತ್ತಿದ್ದ ರಾಜನ ಪ್ರತಿನಿಧಿಗಳು ನೆಲೆಸಿದ್ದ ಸ್ಥಳದಿಂದ ಈ ಹೆಸರು ಬಂದಿದೆ. |
| ಜನ್ನಹಳ್ಳಿ (ದೇ) | : | ಜನ್ನ - ಯಾಗ, ಯಜ್ಞ ಧಾರ್ಮಿಕ ಕಾರ್ಯಗಳನ್ನು ನೆರವೇರಿಸುವವರು ನೆಲೆಸಿರುವ ಗ್ರಾಮ. ಪುರೋಹಿತರು, ಅರ್ಚಕ. ವೃತ್ತಿಯವರು ಇರುವ ಸ್ಥಳ. ಬ್ರಾಹ್ಮಣರ ಕೇರಿ, ಯಜ್ಞ ಯಾಗಾದಿಗಳನ್ನು ಮಾಡುವ ಜನರ ವಾಸ್ತವ್ಯ. ವೃತ್ತಿವಾಚಿ ಸ್ಥಳನಾಮಗಳಾಗಿವೆ. |

### ೫.೩ ವ್ಯಕ್ತಿವಾಚಿ ಸ್ಥಳನಾಮಗಳು

ನಾಗರೀಕತೆಯ ಬೆಳವಣಿಗೆಯು, ಹೆಸರು ನೀಡುವ ಪ್ರವೃತ್ತಿಗೆ ವೈವಿಧ್ಯತೆಯನ್ನು ನೀಡಿತು. ಸೀಮಿತ ಆಯ್ಕೆ ಹೊಂದಿದ್ದ ಮಾನವನಿಗೆ ಆಯ್ಕೆಯು ಹೆಚ್ಚಾಯಿತು. ತಾನು ಪ್ರಾಮುಖ್ಯತೆ ನೀಡುವ ವ್ಯಕ್ತಿಯ ಹೆಸರನ್ನು ನಿರ್ದಿಷ್ಟವಾಗಿ ಬಳಸಿಕೊಂಡ ಸ್ಥಳನಾಮಗಳನ್ನು ವ್ಯಕ್ತಿವಾಚಿ ಸ್ಥಳನಾಮಗಳೆಂದು ಕರೆಯಬಹುದು.

ವ್ಯಕ್ತಿನಾಮವಾಚಿಗಳು ಕಾಲವನ್ನು ಸೂಚಿಸುವ ಮಹತ್ವದ ಲಕ್ಷಣವನ್ನು ಹೊಂದಿರುವ ಸಾಧ್ಯತೆ ಇದೆ. ರಾಜರುಗಳ, ಸಮಾಜ ಸುಧಾರಕರ, ರಾಜಕೀಯ ಮುಖಂಡರ, ಧಾರ್ಮಿಕ ಗುರುಗಳ - ನಿರ್ದಿಷ್ಟ ಭಾಗವು ಸ್ಥಳನಾಮ ನಿರ್ದಿಷ್ಟದಲ್ಲಿ ಸೇರಿಕೊಂಡಿದ್ದಲ್ಲಿ, ಊರಿಗೆ ಹೆಸರು ಬಂದಿರುವ ಕಾಲವನ್ನು ಗುರುತಿಸಬಹುದು. ಊರು ನಿರ್ಮಾಣವಾಗಲು ಕಾರಣವಾದ, ಮೊದಲು ನೆಲೆನಿಂತ ಮೂಲ ವ್ಯಕ್ತಿಯ ಹೆಸರಿನಿಂದ ಸ್ಥಳನಾಮಗಳು ಗುರುತಿಸಲ್ಪಟ್ಟಿವೆ. ವ್ಯಕ್ತಿನಾಮಗಳಲ್ಲಿ, ಜಾತಿ ಮುಂತಾದ ಸಾಮಾಜಿಕ-ಸಾಂಸ್ಕೃತಿಕ ಅಂಶಗಳಿದ್ದಲ್ಲಿ, ಸ್ಥಳನಾಮಗಳೂ ಅದೇ ಗುಂಪಿಗೆ ಸೇರುತ್ತವೆ.[೧೪] ಜನಸಂಖ್ಯೆಯ ಹೆಚ್ಚಳದಿಂದಾಗಿ ಹೊಸ ನೆಲೆಗಳಲ್ಲಿ ನೆಲೆಸಲು ಪ್ರಾರಂಭಿಸಿದ ಮಾನವನ ಹೆಸರಿನಲ್ಲಿ ಸ್ಥಳನಾಮಗಳು ರೂಪುಗೊಂಡಿವೆ. ವ್ಯಕ್ತಿ ನಾಮಾಧಾರಿತ ಸ್ಥಳನಾಮಗಳಲ್ಲಿ ಬಳಕೆಯಾಗಿರುವ ಹೆಚ್ಚು ನಿರ್ದಿಷ್ಟಗಳಲ್ಲಿ ಪುರುಷರ ನಾಮವಾಚಿ ಹೆಚ್ಚಾಗಿದ್ದು ಸ್ತ್ರೀವಾಚಿ ಸ್ಥಳನಾಮಗಳು ಕೆಲವು ಪ್ರದೇಶಗಳಲ್ಲಿ ಇಲ್ಲ. ಕೆಲವು ಭಾಗದಲ್ಲಿ ಅತಿ ಕಡಿಮೆ ಪ್ರಮಾಣದಲ್ಲಿವೆ. ಇದಕ್ಕೆ ಪುರುಷಪ್ರಧಾನ ಸಮಾಜ ಮುಖ್ಯ ಕಾರಣವಾಗಿದ್ದು, ಊರಿನ ಗಣ್ಯ ವ್ಯಕ್ತಿ - . ಪುರುಷನೇ ಆಗಿದ್ದನೆಂದು ನಿರ್ಧರಿಸಬಹುದು.

ಕರ್ನಾಟಕದ ದಕ್ಷಿಣ ಭಾಗದಲ್ಲಿ ವ್ಯಕ್ತಿನಾಮ ವಾಚಿ ಸ್ಥಳನಾಮಗಳನ್ನು ಗುರುತಿಸಬಹುದಾಗಿದ್ದು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲ್ಲೂಕು ೨೮ ಸ್ಥಳನಾಮಗಳಲ್ಲಿ ಸುಮಾರು ೧೫೦ ರಷ್ಟು ಹೆಸರುಗಳು ವ್ಯಕ್ತಿನಾಮವಾಚಿಯಾಗಿದ್ದು ಅತಿ ಹೆಚ್ಚು ಪ್ರಮಾಣ ಹೊಂದಿದೆ.

ಊರು ದೊಡ್ಡದಾಗಿದ್ದಲ್ಲಿ, ವ್ಯಕ್ತಿನಾಮವಾಚಿಯನ್ನು ಒಳಗೊಂಡಿರುವ ಪ್ರತ್ಯೇಕ ಬಡಾವಣೆ, ರಸ್ತೆ ಅಥವಾ ನಿರ್ದಿಷ್ಟವಾದ ಊರಿನೊಳಗಿನ ಪ್ರದೇಶ ಗುರುತಿಸಬಹುದು. "ಇತ್ತೀಚೆಗೆ ಜನರ ಮನೋಧರ್ಮ ಬದಲಾಗಿ ವ್ಯಕ್ತಿಪೂಜೆಯು ಅವರ ಜೀವನದಲ್ಲಿ ಬೆರೆತಂತೆ ಕಂಡರೂ, ದೊಡ್ಡ ಊರಿಗೆ ಒಬ್ಬ ವ್ಯಕ್ತಿಯ ಹೆಸರು ಕೊಡದೆ, ಕೇರಿಗೆ ಒಂದು ಮನೆಯಡಿಗೆ ಗುರುತಿಸಲಿಕ್ಕಾಗಿ ಹೆಸರನ್ನಿಟ್ಟಿರುವುದು ಸಹ ಜನರ ಜೀವನದೃಷ್ಟಿಯನ್ನು ಬಿಂಬಿಸಲ್ಲದು." [೧೩]

ಪ್ರಾದೇಶಿಕ ವೈವಿಧ್ಯತೆಗನುಗುಣವಾಗಿ ವ್ಯಕ್ತಿನಾಮಗಳ ನಿರ್ದಿಷ್ಟ ಬದಲಾಗಿರುವುದರಿಂದ, ಸ್ಥಳನಾಮಗಳ ನಿರ್ದಿಷ್ಟಗಳು ಸಹಜವಾಗಿ ಬದಲಾಗುತ್ತದೆ. ಆಯಾ ಪ್ರದೇಶದ ಸಾಮಾಜಿಕ ಸಾಂಸ್ಕೃತಿಕ ಅಂಶಗಳಿಂದ ವ್ಯಕ್ತಿ ನಾಮವಾಚಿ ಸ್ಥಳನಾಮಗಳು ನಿಷ್ಪತ್ತಿಯಾಗುತ್ತಿರುತ್ತವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವ್ಯಕ್ತಿನಾಮವಾಚಿ ಸ್ಥಳನಾಮಗಳನ್ನು ಗುರುತಿಸಬಹುದಾಗಿದ್ದು, ದೇವನಹಳ್ಳಿ ತಾಲ್ಲೂಕು ಅತಿಹೆಚ್ಚು ಅಂದರೆ ಸುಮಾರು ೧೫೦ ಊರುಗಳು ವ್ಯಕ್ತಿನಾಮ ನಿರ್ದಿಷ್ಟಗಳನ್ನು ಹೊಂದಿದೆ.

**ವ್ಯಕ್ತಿವಾಚಿ ಸ್ಥಳನಾಮಗಳ ಪಟ್ಟಿ**

| | |
|---|---|
| ಅಜ್ಜೇಗೌಡನ ವಲಸೆ - ಕ | ತಿಪ್ಪಸೆಟ್ಟಿಹಳ್ಳಿ-ನೆ |
| ಗುಡ್ಡವೀರನ ಹೊಸಹಳ್ಳಿ - ಕ | ತಿಮ್ಮನಾಯಕನಹಳ್ಳಿ - ನೆ |
| ನಾಗರಸನಕೋಟೆ - ಕ | ಬೈರೇಗೌಡನ ಹಳ್ಳಿ - ನೆ |
| ಪುರುಷಗೌಡನಹಳ್ಳಿ - ಕ | ಹನುಮನ ಪಾಳ್ಯ - ನೆ |
| ಬಸವನಹಳ್ಳಿ- ಕ | ಮಾದನಾಯಕನ ಹಟ್ಟಿ- ನೆ |
| ಬೀರನಹಳ್ಳಿ - ಕ | ಕೆಂಚಯ್ಯನಪುರ - ಮಾ |
| ಮಲ್ಲಪ್ಪನಹಳ್ಳಿ- ಕ | ಚೋಳನಾಯಕನಹಳ್ಳಿ - ಮಾ |
| ಹನುಮನಹಳ್ಳಿ- ಕ | ತಿಮ್ಮಸಂದ್ರ- ಮಾ |
| ಗೋವಿಂದನಹಳ್ಳಿ-ಚ | ಬಸವೇನಹಳ್ಳಿ- ಮಾ |
| ಬೈರಸೆಟ್ಟಿಹಳ್ಳಿ - ಚ | ಮಾಯನಾಯಕನ ಹಳ್ಳಿ - ಮಾ |
| ಬೈರನಾಯಕನ ಹಳ್ಳಿ - ಚ | ಸೂರಪ್ಪನಹಳ್ಳಿ - ಮಾ |
| ಮೈಲನಾಯಕನಹಳ್ಳಿ - ಚ | ಸೋಮದೇವನಹಳ್ಳಿ- ಮಾ |
| ಸಿದ್ಧನಹಳ್ಳಿ - ಚ | ಕೆಂಚಾನ ಕುಪ್ಪೆ - ರಾ |

ಹೊನ್ನಾಯಕನಹಳ್ಳಿ - ಚ

ಕೆಂಪತಿಮ್ಮನ ಹಳ್ಳಿ - ದೇ

ಕೆಂಪಲಿಂಗನಹಳ್ಳಿ - ದೇ

ಗಂಗಮುತ್ತನಹಳ್ಳಿ - ದೇ

ಚಿಕ್ಕರಾಮನಹಳ್ಳಿ - ದೇ

ಚೌಡಪ್ಪನ ಹಳ್ಳಿ - ದೇ

ತಿಮ್ಮನ ಹಳ್ಳಿ - ದೇ

ತಿಮ್ಮೇಗೌಡನ ಹೊಸಹಳ್ಳಿ - ದೇ

ಕರಿಬೀರನಹೊಸಹಳ್ಳಿ - ಹೊ

ಗೊಡ್ಡರಾಮನಹಳ್ಳಿ - ಹೊ

ಚಿಕ್ಕ ತಿಮ್ಮಗೊಲ್ಲಹಳ್ಳಿ - ಹೊ

ತಿಮ್ಮಪ್ಪನಹಳ್ಳಿ - ಹೊ

ಮಂಚಪ್ಪನಹಳ್ಳಿ - ಹೊ

ಮಾರನಗೆರೆ - ಹೊ

ಸಾರಪ್ಪನಹಳ್ಳಿ - ಹೊ

ವೀರನಹಳ್ಳಿ- ಹೊ

ಅಹೋಬಲಪಾಳ್ಯ - ನೆ

ಆಲನಾಯಕನಹಳ್ಳಿ - ನೆ

ಕೆಂಪನಹಳ್ಳಿ - ರಾ

ಮಂಚಗೌಡನಹಳ್ಳಿ - ರಾ

ರಾಮನಹಳ್ಳಿ - ರಾ

ಬಸವನಪುರ - ರಾ

ಚನ್ನಮ್ಮನ ಹಳ್ಳಿ - ರಾ

ಬಳೆವೀರನ ಹಳ್ಳಿ -ರಾ

ಶಿವನಹಳ್ಳಿ - ರಾ

ಬೈರಪ್ಪನ ಹಳ್ಳಿ - ದೇ

ಸೌತೇಗೌಡನ ಹಳ್ಳಿ - ದೇ

ಕಾಡುತಿಪ್ಪನ ಹಳ್ಳಿ - ದೊ

ಚನ್ನವೀರನಹಳ್ಳಿ - ದೊ

ಚಿಕ್ಕರಾಯಪ್ಪನಹಳ್ಳಿ - ದೊ

ದೊಡ್ಡ ರಾಯಪ್ಪನಹಳ್ಳಿ - ದೊ

ಪುಟ್ಟಯ್ಯನ ಅಗ್ರಹಾರ - ದೊ

ಮಲ್ಲನಾಯಕನಹಳ್ಳಿ - ದೊ

ಸೊಮಸೆಟ್ಟಿಹಳ್ಳಿ - ದೊ

ಓಬನಾಯಕನಹಳ್ಳಿ - ನೆ

**ವ್ಯಕ್ತಿ ವಾಚಿ ಸ್ಥಳನಾಮ ವಿಶ್ಲೇಷಣೆ**

ಚನ್ನಮ್ಮನಹಳ್ಳಿ (ರಾ) : ಚಂನಮಾನಹಳ್ಳಿ > ಚನ್ನಮ್ಮನಹಳ್ಳಿ ಆಗಿದೆ.

ಚಂದಿ, ಮಾದಿ ಎಂಬ ಇಬ್ಬರು ವೀರೆಯರ ಹೆಸರಿನಲ್ಲಿದ್ದ ಗ್ರಾಮ. ನಂತರದಲ್ಲಿ ಚಂದಿಮಾದಿಹಳ್ಳಿ > ಚಂನಮಾನಹಳ್ಳಿ > ಚನ್ನಮ್ಮನಹಳ್ಳಿ ಆಗಿದೆ. ಚಂದಿ + ಮಾದಿ + ಹಳ್ಳಿ ಆಗಿ ಇವರಲ್ಲಿ 'ದ' ವ್ಯಂಜನಾಕ್ಷರ ಲೋಪ ಆಗಿದೆ. ಸಂಬಂಧಕಾರಕ 'ಷಷ್ಠಿ' ವಿಭಕ್ತಿ ಸೇರಿದೆ. ಸ್ತ್ರೀವಾಚಿ ಸೂಚಕ ಸ್ಥಳನಾಮವಾಗಿದೆ.

ಚಂ + ಅ + ಮಾ + ಅ ಹಳ್ಳಿ = ಚಂನ ಮಾನಹಳ್ಳಿ > ಚನ್ನಮಾನಹಳ್ಳಿ > ಚನ್ನಮ್ಮನಹಳ್ಳಿ ಆಗಿದೆ.

ತಿಬ್ಬೇಗೌಡನ ದೊಡ್ಡಿ (ರಾ) : ತಿಬ್ಬಕ್ಕನ ದೊಡ್ಡಿ > ತಿಬ್ಬೇಗೌಡನ ದೊಡ್ಡಿ ಆಗಿರಬಹುದು. ಪುರುಷ ವ್ಯಕ್ತಿನಾಮ ಸೂಚಿ ಸ್ಥಳನಾಮವಾಗಿ ಕಂಡುಬಂದರೂ, ಹಿಂದೆ ಸ್ತ್ರೀವಾಚಿಯಾಗಿತ್ತೆಂಬ ನಂಬಿಕೆಯಿದೆ. 'ತಿಬ್ಬಕ್ಕ' - ಎಂಬ ವೀರೆಯು ಇದ್ದಳೆಂದೂ, ಅವಳ ಹೆಸರಿನ ಗ್ರಾಮವಿತ್ತೆಂದು ಐತಿಹ್ಯವಿದೆ. ವಿಜಯನಗರ ಆಡಳಿತದಲ್ಲಿ 'ತಿಬ್ಬೇಗೌಡನ ದೊಡ್ಡಿ' ಪುರುಷ ವ್ಯಕ್ತಿನಾಮಸೂಚಿ ಸ್ಥಳನಾಮವಾಗಿದೆ.

ತಿಬ್ಬೇಗೌಡ + ಅ + ದೊಡ್ಡಿ

ತಿಬ್ಬೇಗೌಡ - ವ್ಯಕ್ತಿವಾಚಿ ನಿರ್ದಿಷ್ಟ. ದೊಡ್ಡಿ - ವಾರ್ಗಿಕ

ವರನಾಯಕನ ಹಳ್ಳಿ (ನೆ) : ವರನಾಯಕ -ವಿಶಿಷ್ಟ , ವ್ಯಕ್ತಿನಾಮ. ವರನಾಯಕ + ಅ + ಹಳ್ಳಿ ಯುದ್ಧದಲ್ಲಿ ಹೋರಾಡುವ ವೀರರ ಚಿತ್ರಗಳಿರುವ ವೀರಗಲ್ಲುಗಳದ್ದು 'ವರನಾಯಕ'- ಎನ್ನುವ ವೀರ ಇದ್ದ ಗ್ರಾಮವಾಗಿರಬಹುದು. ಅವನ ಹೆಸರಿನಲ್ಲಿ ಈ ಊರು ಹೆಸರು ಪಡೆದಿರಬಹುದು.

ಕೆಂಪಸಾಗರ (ಮಾ) : ಕೆಂಪೇಗೌಡ ಇಲ್ಲಿ ಕೆರೆಯನ್ನು ನಿರ್ಮಿಸಿದನೆಂದೂ, ಈ ಕಾರಣದಿಂದಾಗಿಯೇ 'ಕೆಂಪಸಾಗರ' ಎಂಬ ಹೆಸರು ಬಂದಿರುವ ಸಾಧ್ಯತೆ ಇದೆ.

ಕೆಂಪ - ವ್ಯಕ್ತಿವಾಚಿ, ವಿಶಿಷ್ಟ ಸಾಗರ - ವಾರ್ಗಿಕ, ಜಲವಾಚಿ.

ಮಲ್ಲನ ಪಾಳ್ಯ (ದೊ) : ಮಲ್ಲ + ಅ + ಪಾಳ್ಯ - ಮಲ್ಲನಪಾಳ್ಯ ಈ ಪ್ರದೇಶವು ವೀರಮಲ್ಲನ ಆಳ್ವಿಕೆಯಲ್ಲಿತ್ತು. ವೀರ ಮಲ್ಲ - ನಿರ್ದಿಷ್ಟ ವ್ಯಕ್ತಿವಾಚಿ

ಪಾಳ್ಯ < ಪಾಳೆಯ = ಸೇನೆಯನೆಲೆ ಎಂಬರ್ಥವಿದೆ.

ಪುಟ್ಟಯ್ಯನ ಅಗ್ರಹಾರ (ದೊ) : ಪುಟ್ಟಯ್ಯ + ಅ + ಅಗ್ರಹಾರ, ಪುಟ್ಟಯ್ಯ ಎಂಬ ವ್ಯಕ್ತಿ ನಾಮದಿಂದ ಗುರುತಿಸಲ್ಪಡುವ ಅಗ್ರಹಾರ. ಇತರೆ ಅಗ್ರಹಾರದಿಂದ ಬೇರ್ಪಡಿಸಲು 'ಪುಟ್ಟಯ್ಯ' ನಾಮವು ವಿಶಿಷ್ಟವಾಗಿ ಬಳಕೆ. ಅಗ್ರಹಾರ - ಬ್ರಾಹ್ಮಣರ ನೆಲೆಯ ಸೂಚಕ (ಪೂರ್ವನಾಮ ಆಗಿರುವ ಸಾಧ್ಯತೆ ಇದೆ).

ದೇವನಹಳ್ಳಿ (ದೇ) : ದೇವ + ಅ + ಹಳ್ಳಿ = ದೇವನಹಳ್ಳಿ

ದ್ಯಾವ > ದೇವ, ದ್ಯಾವೇಗೌಡ ಎಂಬ ಪಾಳೆಯಗಾರನಿಂದ ಈ ಹೆಸರುಬಂದಿದೆ. ದ್ಯಾವನಹಳ್ಳಿ > ದೇವನಹಳ್ಳಿ (ಪೂರ್ವನಾಮ ತಿಳಿದಿಲ್ಲ) ಆವತಿಯ ಪ್ರಭು ಮಲ್ಲಭೈರೇಗೌಡನ ಕಾಲದಲ್ಲಿ ಕಟ್ಟಿದ ಊರು ಇದಾಗಿದೆ.

## ೫.೪ ದೈವವಾಚಿ ಸ್ಥಳನಾಮಗಳು

ಸ್ಥಳನಾಮಗಳಲ್ಲಿ ದೇವರ ಹಾಗೂ ಧರ್ಮ ಮುಂತಾದ ಸಂಸ್ಕೃತಿಯನ್ನು ಸೂಚಿಸುವ ಅಂಶಗಳಾಗಿದ್ದು ಮಾನವ ಜೀವನದಲ್ಲಿ ಮಹತ್ವದ ಸ್ಥಾನ ಪಡೆದಿದೆ. ತನ್ನ ಪರಿಸರದಲ್ಲಿನ ಪ್ರಾಕೃತಿಕವಾದ ಗಿಡ-ಮರ, ನದಿ, ಬೆಟ್ಟ, ಪ್ರಾಣಿ ಹಾಗೂ ಪರಿಪೂರ್ಣ ವ್ಯಕ್ತಿಗಳಿಗೆ ದೈವಿಕ ಸ್ಥಾನವನ್ನು ನೀಡಿ, ಅವುಗಳನ್ನು ಆರಾಧಿಸಲು ತೊಡಗಿದನು. ಇವಗಳಿಗೆ ಸಂಬಂಧಿಸಿದಂತಹ ಆಚರಣೆಗಳನ್ನು ಮತ-ಧರ್ಮಗಳನ್ನು ಸೃಷ್ಟಿಸಿಕೊಂಡರು. ಇವುಗಳಿಗೆ ಮಹತ್ವ ನೀಡುವ ಉದ್ದೇಶದಿಂದ, ವ್ಯಕ್ತಿಗಳಿಗೆ ಹಾಗೂ ಸ್ಥಳಗಳಿಗೆ ಹೆಸರು ನೀಡುವ ಸಂದರ್ಭದಲ್ಲಿ ದೈವವಾಚಿ 'ವಿಶಿಷ್ಟ'ಗಳನ್ನು ಬಳಸಿಕೊಂಡರು. ಕುಲದೈವ, ಇಷ್ಟದೈವ, ಋಷಿಗಳ ಹಾಗೂ ಊರಿನ ಅಧಿದೇವತೆಯ ಹೆಸರುಗಳನ್ನು ಸ್ಥಳನಾಮಗಳಲ್ಲಿ ಗುರುತಿಸಬಹುದು. ಈ ಹೆಸರುಗಳಿಗೆ ಐತಿಹ್ಯಗಳೂ ಸೃಷ್ಟಿಯಾಗಿರುತ್ತವೆ. "ಅನೇಕ ಸ್ಥಳನಾಮಗಳು ದೇವರ ಹಾಗೂ ಋಷಿಮುನಿಯ ಹೆಸರಿನಿಂದ ನಿಷ್ಪನ್ನವಾಗಿದೆ, ಹಾಗೂ ಸಂಸ್ಕೃತದ ರೂಪಗಳಾಗಿವೆ"[೧೬]

"ಸ್ಥಳನಾಮವಾಚಿಗಳಲ್ಲಿ ಬಳಕೆಯಾಗಿರುವ ವಿಶಿಷ್ಟ ಹಾಗೂ ಸಾಮಾನ್ಯ ಘಟಕಗಳೆರಡರಿಂದಲೂ ಸಾಂಸ್ಕೃತಿಕ ಮಹತ್ವದ ವಿವರಗಳು ತಿಳಿದು ಬರುತ್ತವೆ"[೧೭] "ದಕ್ಷಿಣ ಕರ್ನಾಟಕದಲ್ಲಿ ವ್ಯಕ್ತಂಶವುಳ್ಳ ದೇವರನಾಮಗಳು, ಐತಿಹಾಸಿಕ ರಾಜರ ಹೆಸರುಗಳು ಗ್ರಾಮನಾಮಗಳಲ್ಲಿ ತಿಳಿದುಬರುತ್ತವೆ"[೧೮] ದೈವವಾಚಿ ಸ್ಥಳನಾಮಗಳಲ್ಲಿ ದೈವನಾಮ ಸೂಚಕ ವ್ಯಕ್ತಿನಾಮಗಳು ಅತ್ಯಂತ ಮುಖ್ಯವಾಗಿದ್ದು ಈ ಉದ್ದೇಶದಿಂದಲೇ ವ್ಯಕ್ತಿ ನಾಮಗಳಿಗೆ ದೈವನಾಮ ವಿಶಿಷ್ಟ ಸೇರಿಸಲಾಗುವುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಈ ರೀತಿಯ ದೈವವಾಚಿ ಸ್ಥಳನಾಮಗಳನ್ನು ಗುರುತಿಸಬಹುದಾಗಿದ್ದು ರಾಮ, ಶಿವ, ಲಕ್ಷ್ಮಿ ಹೆಸರಿನ ಸ್ಥಳನಾಮಗಳು ಹೆಚ್ಚು ಕಂಡುಬರುತ್ತದೆ.

### ದೈವವಾಚಿ ಸ್ಥಳನಾಮಗಳ ಪಟ್ಟಿ

| | |
|---|---|
| ನಾರಾಯಣಪುರ-ಕ | ಹನುಮಂತಪುರ - ನೆ |
| ಬಸವಪಟ್ಣ -ಕ | ಲಕ್ಷ್ಮೀಪುರ - ನೆ |
| ಮಂಜುನಾಥ -ಕ | ಶ್ರೀಪತಿಪುರ -ನೆ |
| ಮೂಡಲಸ್ವಾಮಿಕುಪ್ಪೆ -ಕ | ವೆಂಕಟಪುರ -ನೆ |
| ಸೋಮನಾಥಪುರ - ಕ | ಕೃಷ್ಣಾಪುರ- ಮಾ |
| ಹರಿಹರ - ಕ | ಗರ್ಗೇಶ್ವರ ಪುರ - ಮಾ |
| ಕೃಷ್ಣಾಪುರ - ಚ | ಗಣಪತಿಹಳ್ಳಿ - ಮಾ |
| ನಾಗಪುರ -ಚ | ತ್ರಿಪುರಾಂತಕ ಚಿನ್ನಾಪುರ - ಮಾ |
| ರಾಮನಾಥಪುರ - ಚ | ರಘುನಾಥಪುರ - ಮಾ |
| ರಾಮಪುರ - ಚ | ವಿಠಲಪುರ - ಮಾ |
| ವಿರುಪಾಕ್ಷಪುರ - ಚ | ವಿರೂಪಾಕ್ಷಪುರ - ಮಾ |

| | |
|---|---|
| ನಾರಾಯಣಪುರ - ದೇ | ಹನುಮಾಪುರ - ಮಾ |
| ರಂಗನಾಥಪುರ - ದೇ | ಚೌಡೇಶ್ವರಪುರ - ರಾ |
| ರಾಮನಾಥಪುರ - ದೇ | ಲಕ್ಷ್ಮೀಪುರ - ರಾ |
| ಲಕ್ಷ್ಮೀಪುರ - ದೇ | ರಾಮನಗರ - ರಾ |
| ವಿಶ್ವನಾಥಪುರ - ದೇ | ಲಕ್ಷ್ಮೀಸಾಗರ - ರಾ |
| ವೆಂಕಟಾಪುರ - ದೇ | ಗೋವಿಂದಪುರ - ಹೊ |
| ಗೋವಿಂದಪುರ- ದೊ | ಭೀಮಪುರ - ಹೊ |
| ನಾಗಸಂದ್ರ - ದೊ | ರಾಮಗೋವಿಂದಪುರ - ಹೊ |
| ಮಾದೇಶ್ವರ - ದೊ | ರಾಮಪುರ - ಹೊ |
| ರಾಮೇಶ್ವರ - ದೊ | ಶಿವದೇವನಹಳ್ಳಿ - ಹೊ |
| ಲಕ್ಷ್ಮೀದೇವಿಪುರ - ದೊ | ಶಿವಪುರ - ಹೊ |
| ಶ್ರೀನಿವಾಸಪುರ - ದೊ | ಶ್ರೀನಿವಾಸಪುರ - ಹೊ |
| ವಿಶ್ವೇಶ್ವರಪುರ - ನೆ | ಸೋಮಪುರ - ಹೊ |
| ಶ್ರೀಕಂಠಪುರ - ನೆ | ಲಗುಮೇನ ಹಳ್ಳಿ - ಹೊ |
| ವಿಶ್ವೇಶ್ವರಪುರ - ನೆ | ಶ್ರೀಕಂಠಪುರ - ನೆ |
| ಶ್ರೀನಿವಾಸಪುರ - ನೆ | |

ರಾಮನಗರ (ರಾ) : 'ರಾಮಗಿರಿ' ಬೆಟ್ಟದಲ್ಲಿ ಶ್ರೀರಾಮ, ಲಕ್ಷ್ಮಣ, ಸೀತೆ, ಹಾಗೂ ಹನುಮಂತ ನೆಲೆಸಿದ್ದರೆಂಬ ನಂಬಿಕೆಯಿದ್ದು ದೇವಾಲಯವಿದೆ. ಈ ಕಾರಣದಿಂದಲೇ ಶ್ರೀರಾಮನ ಹೆಸರನ್ನು ಈ ಸ್ಥಳದಲ್ಲಿ 'ವಿಶಿಷ್ಟವಾಗಿ ಬಳಸಿ 'ರಾಮನಗರ' ವೆಂದು ಕರೆಯಲಾಗಿದೆ.

ಶಿವಗಂಗೆ (ನೆ) : ೧. ಅಗಸ್ತ್ಯ ಮಹರ್ಷಿಯು ಗಿರಿಜಾ ಕಲ್ಯಾಣೋತ್ಸವ ಮಾಡಲು, ಗಂಗೆ ಉದ್ಭವಿಸಲೆಂದು ಪ್ರಾರ್ಥಿಸಿದಾಗ 'ಶಿವ ಹಾಗೂ ಗಂಗೆ ಇಬ್ಬರೂ ಪ್ರತ್ಯಕ್ಷ ರಾದ್ದರಿಂದ 'ಶಿವಗಂಗೆ' ಎಂಬ ಹೆಸರು ಬಂದಿತೆಂಬ ಸ್ಥಳ ಮಹಾತ್ಮೆಯಿದೆ.

: ೨. ಕಣಾದ ಮಹರ್ಷಿಯ ತಪಸ್ಸಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾದಾಗ, ಶಿವನ ಜಟೆಯಿಂದ ಧುಮುಕುತ್ತಿದ್ದ ಗಂಗೆಯನ್ನು ನೋಡಿ,

'ಶಿವಾ' 'ಗಂಗಾ' ಎಂದು ನುಡಿದದ್ದೇ 'ಶಿವಗಂಗೆ' ಆಯಿತೆಂಬ ಐತಿಹ್ಯವೂ ಇದೆ.

೩. ಚಾಮುಂಡಿ ದೇವತೆಯು ರಕ್ತಬೀಜಾಸುರನನ್ನು ಸಂಹರಿಸಿದ ನಂತರ, ಖಡ್ಗವನ್ನು ಸ್ವಚ್ಛಗೊಳಿಸಲು ಬಂಡೆಯನ್ನು ಸೀಳಿದಾಗ 'ಗಂಗೆ' ಉದ್ಭವಿಸಿತು. ಅದೇ 'ಪಾತಾಳಗಂಗೆ' ಎಂಬ ಐತಿಹ್ಯವಿದ್ದು ಇದನ್ನು ಗುರುತಿಸಬಹುದು. ಆದ್ದರಿಂದಲೇ 'ಶಿವಗಂಗೆ' ಎಂಬ ಹೆಸರು ಬಂದಿದೆಯೆಂಬ ಮತ್ತೊಂದು ಐತಿಹ್ಯವಿದೆ.

ಲಿಂಗಾಪುರ (ದೊ) : ಶಿವನ ದೇವಾಲಯವಿದ್ದು ಲಿಂಗವನ್ನು ದೇವಾಲಯದಲ್ಲಿ ಪ್ರತಿಷ್ಠಾಪಿಸಿರುವುದರಿಂದ ಲಿಂಗಾಪುರ ಎಂದಾಗಿದೆ.
ಲಿಂಗ + ಪುರ = ಲಿಂಗಾಪುರ, ಪೂರ್ವಪದದ ಕೊನೆಯ ಅ ಹ್ರಸ್ವಸ್ವರ 'ಆ' – ದೀರ್ಘಸ್ವರವಾಗಿದೆ.

ದರ್ಗಾಪುರ (ದೊ) : ಮುಸಲ್ಮಾನರ ದರ್ಗಾ ಇಲ್ಲಿ ಇದ್ದು, 'ದರ್ಗಾ' ವಿಶಿಷ್ಟವಾಗಿ ಬಳಕೆಯಾಗಿ 'ದರ್ಗಾಪುರ' ಆಗಿದೆ.

ಕಲ್ಲುದೇವನಹಳ್ಳಿ (ದೊ) : ಕಲ್ಲಿನ ದೇವರಿರುವ ಊರು, ಕಲ್ಲಿನಿಂದ ನಿರ್ಮಾಣಗೊಂಡ ದೇವಾಲಯವಿರುವುದರಿಂದ 'ಕಲ್ಲುದೇವನಹಳ್ಳಿ' ಎಂಬ ಹೆಸರು ಬಳಕೆಗೆ ಬಂದಿದೆ. ಕಲ್ಲು + ದೇವ + ಅ + ಹಳ್ಳಿ = ಕಲ್ಲುದೇವನಹಳ್ಳಿ, ಶಿಲಾವಾಚಿ, ದೈವವಾಚಿ ವಿಶಿಷ್ಟ –ಷಷ್ಠಿ ವಿಭಕ್ತಿ ಪ್ರತ್ಯಯಬಳಕೆ. 'ಅ' ಸಂಬಂಧ ಸೂಚಕ ಪ್ರತ್ಯಯ ವ್ಯಕ್ತಿನಾಮವನ್ನು ಸೂಚಿಸುವ ಸಾಧ್ಯತೆ ಇದ್ದರೂ, ಇಲ್ಲಿ 'ಕಲ್ಲುದೇವನ' ದೈವವಾಚಿಯಾಗಿ ಬಳಕೆಯಾಗಿದೆ.

ಸಿಂಗರಾಜಪುರ (ಚ) : ೧. 'ಶೃಂಗ' ಎಂಬ ತಪಸ್ವಿ ಇದ್ದ ನೆನಪಿಗೆ 'ಶೃಂಗರಾಜಪುರ' ಎಂಬ ಹೆಸರು ಬಂದಿದೆ. ಶೃಂಗ > ಶಿಂಗ > ಸಿಂಗ + ರಾಜಪುರ ಆಗಿದೆ.

೨. ಹೊಸಹಳ್ಳಿ ಎಂಬ ಊರು, ಗವಿರಂಗಸ್ವಾಮಿ ದೇವಾಲಯ ವಿರುವಲ್ಲಿಗೆ ಸ್ಥಳಾಂತರಗೊಂಡು 'ಗವಿಪುರ' ಎಂದು ಹೆಸರು ಪಡೆಯಿತು. ಈ ಗವಿಪುರವನ್ನೆ ಪಂಡಿತರು 'ಶೃಂಗರಾಜಪುರ' ಎಂದು ಕರೆದರೆಂದೂ, ಗವಿರಂಗಸ್ವಾಮಿಯೇ ಶೃಂಗಮಹರ್ಷಿ ಎಂಬ ಐತಿಹ್ಯವಿದೆ.

ಬ್ರಾಹ್ಮಣಪುರ (ಚ) : ಮಧ್ವಮತ ಕೇಂದ್ರವಾಗಿದ್ದ ಊರು. ಬ್ರಹ್ಮಣ್ಯತೀರ್ಥ ಮಹರ್ಷಿಗಳು ಮತ ಪ್ರಚಾರಕರಾಗಿದ್ದರು. ಅವರ ಹೆಸರಿನಲ್ಲಿ ಸೃಷ್ಟಿಯಾದ ಊರು ಬ್ರಹ್ಮಣ್ಯ ತೀರ್ಥವಾಯಿತು. ಬ್ರಹ್ಮಣ್ಯ ತೀರ್ಥ > ಬ್ರಹ್ಮಣ್ಯಪುರ > ಬ್ರಹ್ಮಣಪುರ > ಬ್ರಾಹ್ಮಣಪುರ ಆಗಿರುವ ಸಾಧ್ಯತೆ ಇದೆ[೫೯]

ದೇವರಕಗ್ಗಲಹಳ್ಳಿ (ಕ) : ಕಲ್ಲಿನ ಗುಡ್ಡದ ಮೇಲೆ ಊರು ಇದೆ. ಸಮತಟ್ಟಾದ ಬಂಡೆಯ ಮೇಲೆ ಊರು ನಿರ್ಮಾಣವಾಗಿದ್ದು 'ಕಪ್ಪು ಕಲ್ಲು ಊರು' 'ಕಗ್ಗಲ್ಲು' ಆಗಿದೆ. ಕಗ್ಗಲು > ಕಗ್ಗಲ ಆಗಿದ್ದು ಮಾರಿ ದೇವಾಲಯವಿ ರುವುದರಿಂದ, ದೇವರ ಕಗ್ಗಲ್ಲಹಳ್ಳಿ > ದೇವರ ಕಗ್ಗಲಹಳ್ಳಿ ಆಗಿದೆ.

ಮಟ್ಟುಂಟೆ (ದೊ) : ಮಠಕುಂಟೆ - ಮಠದ ಬಳಿ ಕುಂಟೆ ಇರುವುದರಿಂದ ಮಠ ಕುಂಟೆ ಆಗಿದೆ. ಸೌಲಭ್ಯಾಕಾಂಕ್ಷೆಯಿಂದ ಮಟ್ಟುಂಟೆ ಎಂದು ಕರೆಯುತ್ತಾರೆ. ಮಠ + ಕುಂಟೆ = ಮಠಕುಂಟೆ > ಮಠ್ಕುಂಟೆ > ಮಟ್ಟುಂಟೆ ಆಗಿದೆ. ಮಹಾಪ್ರಾಣಾಕ್ಷರ ಅಲ್ಪ ಪ್ರಾಣವಾಗಿದೆ.

ರಾಮಪುರ (ಕ) : ರಾಮ - ವಿಶಿಷ್ಟ, ಪುರ - ವಾರ್ಗಿಕ
ಶ್ರೀರಾಮನು ಈ ಪ್ರದೇಶದಲ್ಲಿ ಸಂಚರಿಸಿದನೆಂಬ ಐತಿಹ್ಯವಿದ್ದು ಶ್ರೀರಾಮನ ಹೆಸರೇ, ಊರಿನ ಹೆಸರಿನಲ್ಲಿ 'ವಿಶಿಷ್ಟ'ವಾಗಿ ಸೇರಿಕೊಂಡಿದೆ.
ರಾಮ + ಪುರ = ರಾಮಪುರ

ಭೈರಾಪುರ (ದೊ) : ಭೈರವ > ಭೈರ > ಭೈರ ಆಗಿರುವ ಸಾಧ್ಯತೆ ಇದೆ. 'ಭೈರ' 'ವಿಶಿಷ್ಟ ಘಟಕವಾಗಿದ್ದು ಷಷ್ಠಿ ವಿಭಕ್ತಿ ಸಂಬಂಧಕಾರಕ ಪ್ರತ್ಯಯ ಬಳಕೆ ಯಾಗಿಲ್ಲದಿರುವುದರಿಂದ ದೈವವಾಚಿಯಾಗಿದೆ.

ಶಿವಪುರ (ನೆ) : ಶಿವ-ವಿಶಿಷ್ಟ ಪುರ-ವಾರ್ಗಿಕವಾಗಿದ್ದು ಈಶ್ವರನ ದೇವಾಲಯ ವಿರುವುದರಿಂದ. 'ಶಿವ' ಎಂಬ ನಾಮಪದ ಊರಿನ ಹೆಸರಿನಲ್ಲಿ ವಿಶಿಷ್ಟವಾಗಿ ಬಳಕೆಯಾಗಿದೆ. ಶಿವ + ಪುರ = ಶಿವಪುರ

### ೫.೫ ಸಂಕೀರ್ಣ - ಸಾಮಾಜಿಕ 'ಸೂಳೆ' 'ವಿಶಿಷ್ಟ'ವಾಗಿ ಬಳಕೆಯಾಗಿರುವ ಸ್ಥಳನಾಮಗಳು

ಸಾಮಾಜಿಕ ಅಂತರಗಳನ್ನು ಪ್ರತಿನಿಧಿಸುವ ಸ್ಥಳನಾಮಗಳಲ್ಲಿ 'ಪೇಟೆ' ಎನ್ನುವ ಅರ್ಥ ನೀಡುವ 'ಸೂಳೆ' ಎಂಬ ಪದವನ್ನು ನಿರ್ದಿಷ್ಟವಾಗಿ ಬಳಸಿರುವುದನ್ನು ಗುರುತಿಸಬಹುದು. ಈ ಊರುಗಳಿಗೆ 'ಸೂಳೆ'ಸೂಳೆ', ಮುಂತಾದ

ನಿರ್ದಿಷ್ಟ ಬಳಕೆಯಾಗಲು ವೇಶ್ಯಾವೃತ್ತಿ ಮಾಡುತ್ತಿದ್ದವರೇ ಕಾರಣವೆಂಬುದನ್ನು ಕೆಲವು ಐತಿಹ್ಯಗಳಲ್ಲಿ ಗುರುತಿಸಬಹುದು. ಜೀವನೋಪಾಯಕ್ಕೆ ಹಣ ಗಳಿಸುವ ಈ ವೃತ್ತಿಯವರು ಕೆರೆಯನ್ನೋ, ಕುಂಟೆಯನ್ನೋ ಕಟ್ಟುವುದರ ಮೂಲಕ ಸಾಮಾಜಿಕ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಸಾಧ್ಯತೆ ಇದ್ದಿತು. ಆಡಳಿತ ನಡೆಸುತ್ತಿದ್ದ ರಾಜರುಗಳು ತಮ್ಮ ವೈಭವವನ್ನು ಮೆರೆಯುವ ದೃಷ್ಟಿಯಿಂದ ನೃತ್ಯಗಾತಿಯರನ್ನು ಸಂಗೀತ ಹಾಡಲು ಮತ್ತು ನಾಟ್ಯ ಮಾಡಲು ನೇಮಿಸಿಕೊಂಡಿರುತ್ತಿದ್ದರು. ಇವರು ರಾಜನಿಗೆ ಅಥವಾ ಆಡಳಿತ ನಡೆಸುವ ವ್ಯಕ್ತಿಯ ಜೊತೆ ಮಾತ್ರ ಸಂಬಂಧ ಹೊಂದಿರುತ್ತಿದ್ದರು. ಇಂತಹ ಹೆಣ್ಣುಗಳು ವಾಸ ಮಾಡುತ್ತಿದ್ದ ಊರುಗಳನ್ನು ಅವರ ವೃತ್ತಿಯ ಮೂಲಕ ಬೇರೆಯವರು ಗುರುತಿಸಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಕೆಲವೊಮ್ಮೆ ಇಂತಹ ವೇಶ್ಯೆಯರ ಹೆಸರಿನಿಂದಲೇ ಸ್ಥಳನಾಮವೂ ನಿರ್ದೇಶನವಾಗಿವೆ. ಆಧುನಿಕ ಸಮಾಜದಲ್ಲಿ ವ್ಯಭಿಚಾರ ಅಥವಾ ಹಾದರವು ಅನೈತಿಕವಾದುದೆಂದೂ, ಈ ಪದವನ್ನು ಉಪಯೋಗಿಸುವುದು ಅಶ್ಲೀಲವೆಂಬ ಭಾವನೆಯನ್ನು ಹೊಂದಿದೆ. ಪ್ರಾಚೀನ ಸಮಾಜದಲ್ಲಿ ಈ ವ್ಯವಸ್ಥೆ ಹೆಚ್ಚಾಗಿ ಕಂಡುಬಂದಿದ್ದ, ದಕ್ಷಿಣ ಭಾಗದಲ್ಲಿ ಅಧಿಕೃತವಾಗಿ ಈ ಪದ್ಧತಿಯಿಲ್ಲದಿದ್ದರೂ, ಅನಧಿಕೃತವಾಗಿ ಈ ವೃತ್ತಿಯನ್ನೆ ಅವಲಂಬಿಸಿರುವುದನ್ನು ಗುರುತಿಸಬಹುದು. ಈ ವೃತ್ತಿ ಮಾಡುತ್ತಿದ್ದ ಕೆಲವರು ತಮ್ಮ ಕಾಲಾನಂತರ, ತಮ್ಮ ಹೆಸರು ಉಳಿಯಲಿ ಎಂಬ ಕಾರಣಕ್ಕಾಗಿ ಕೆರೆ, ಕುಂಟೆ, ಬಾವಿಗಳನ್ನು ನಿರ್ಮಿಸುತ್ತಿದ್ದರು. ಈ ವೃತ್ತಿಯನ್ನು ಮಾಡುತ್ತಿದ್ದ ಹಲವರಿಗೆ ತಮ್ಮದೇ ಆದಂತಹ ವೈಯಕ್ತಿಕ ಕುಟುಂಬಗಳು ಇಲ್ಲದಿದ್ದುದರಿಂದ, ತಮ್ಮ ಗಳಿಕೆಯನ್ನು ಲೋಕಕಾರ್ಯಕ್ಕೆ ಬಳಸುತ್ತಿದ್ದರು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 'ಸೂಳೆ' ಪದವನ್ನು ಹೊಂದಿರುವ ಮತ್ತು ಈ ಪದವು ನಿರ್ದಿಷ್ಟವಾಗಿಯೇ ಬಳಕೆ ಆಗಿರುವುದನ್ನು ಗುರುತಿಸಬಹುದು.

| | |
|---|---|
| ಸೂಳೆಕುಂಟೆ - ದೇ | ಸೂಳಿಕುಂಟೆ - ದೊ |
| ಸೂಳೆಕುಂಟೆ - ನೆ | ಸೂಳೆಊರು - ಹೊ |
| ಚಿಕ್ಕಸೂಳಿಕೆರೆ - ರಾ | |

ಮೇಲಿನ ಪಟ್ಟಿಯಲ್ಲಿ ಮೂರು ಸ್ಥಳನಾಮಗಳಲ್ಲಿ 'ಸೂಳೆ' ಪದವು, ರಾಮನಗರ ಹಾಗೂ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ 'ಸೂಳಿ' ಎಂಬ ಪದವು ನಿರ್ದಿಷ್ಟವಾಗಿ ಬಳಕೆಯಾಗಿದೆ. ಬಳಕೆಯ ಸ್ವರೂಪದ ಮೇಲೆ 'ಳೆ', 'ಳಿ' ಅಕ್ಷರಗಳು ಈ ನಿರ್ದಿಷ್ಟದಲ್ಲಿ ಸೇರಿರುವುದನ್ನೂ ಗುರುತಿಸಬಹುದು.

## ೫.೬ ಇಸ್ಲಾಂ ಧರ್ಮ ಸೂಚಿಸುವ ಸ್ಥಳನಾಮಗಳು

ಬೆಂಗಳೂರು ಜಿಲ್ಲೆಯಲ್ಲಿ ಇಸ್ಲಾಂ ಧರ್ಮಸೂಚಕ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ. ಗ್ರಾಮಾಂತರ ಜಿಲ್ಲೆಗೆ ಹೋಲಿಸಿದಲ್ಲಿ ನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಹೆಚ್ಚು ಸ್ಥಳಗಳು ಇಸ್ಲಾಂ ಧರ್ಮ ಸೂಚಿಸುವ ಹಾಗೂ ಅದೇ ಧರ್ಮದ ಜನರು ಹೆಚ್ಚಾಗಿ ವಾಸಿಸುವ ಪ್ರದೇಶಗಳಾಗಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳಲ್ಲಿ 'ಇಸ್ಲಾಂ' ಧರ್ಮಸೂಚಕ ಸ್ಥಳನಾಮಗಳು ನಾಲ್ಕು

ತಾಲ್ಲೂಕುಗಳಲ್ಲಿ ಕಂಡುಬರುತ್ತವೆ. ದೊಡ್ಡಬಳ್ಳಾಪುರದ 'ಅಲೀಪುರ' ಹಾಗೂ ನೆಲಮಂಗಲ ತಾಲ್ಲೂಕಿನ 'ಇಸ್ಲಾಂಪುರ'ಗಳು ಮುಸಲ್ಮಾನರೇ ಹೆಚ್ಚು ವಾಸಿಸುವ ಊರುಗಳಾಗಿವೆ. ಉಳಿದ ಸ್ಥಳನಾಮಗಳಲ್ಲಿ ಮುಸ್ಲಿಮೇತರ ಜನಾಂಗಗಳೂ ಜೊತೆಯಲ್ಲಿ ವಾಸಿಸುವುದನ್ನೂ ಗುರುತಿಸಬಹುದು. ಅಧ್ಯಯನ ವ್ಯಾಪ್ತಿಪ್ರದೇಶದಲ್ಲಿ ಈ ಕೆಳಕಂಡ ಇಸ್ಲಾಂ ಧರ್ಮ ಸೂಚಕ ಸ್ಥಳನಾಮಗಳನ್ನೂ ಪಟ್ಟಿ ಮಾಡಲಾಗಿದೆ.

| | | | | | |
|---|---|---|---|---|---|
| ಬುಡನ್‌ಪಾಡಿಯ | - | ದೇ | ಅಲೀಪುರ | - | ದೊ |
| ದರ್ಗಾಪುರ | - | ದೊ | ಇಸ್ಲಾಂಪುರ | - | ನೆ |
| ಸೈದಮಿಯ ಪಾಳ್ಯ | - | ನೆ | ಖಾಜಿಸೊಣ್ಣೇನಹಳ್ಳಿ | - | ಹೊ |
| ಖಾಜಿಹೊಸಹಳ್ಳಿ | - | ಹೊ | | | |

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಇಲ್ಲಿನ ನಿರ್ದಿಷ್ಟಗಳು ಮಾತ್ರ ಇಸ್ಲಾಂ ಧರ್ಮವನ್ನು ಸೂಚಿಸುವ ಪದಗಳಾಗಿದ್ದು ವಾರ್ಗಿಕಗಳು ಕನ್ನಡದ ಪದಗಳೇ ಆಗಿವೆ.

### ೫.೭ ವ್ಯಕ್ತಿ ಸಂಬಂಧಸೂಚಕ ಸ್ಥಳನಾಮಗಳು

ಸ್ಥಳನಾಮಗಳಲ್ಲಿ ಬಳಕೆಯಾಗಿರುವ ವಿಶಿಷ್ಟಗಳು ಮನುಷ್ಯರ ನಡುವಿನ ರಕ್ತ ಸಂಬಂಧಗಳನ್ನು ಅಥವಾ ನೆಂಟಸ್ತಿಕೆಯನ್ನು ಸೂಚಿಸುತ್ತವೆ. ಈ ರೀತಿಯ ಸಂಬಂಧಸೂಚಕ ಪದಗಳು, ವ್ಯಕ್ತಿಯನ್ನು ಕುರಿತ ಸಂಬೋಧನೆಯನ್ನು ವ್ಯಕ್ತಪಡಿಸುತ್ತವೆ. ಇಂತಹ ಸಂಬಂಧಸೂಚಿ ಪದಗಳಲ್ಲಿ ಅಮ್ಮ ಅಪ್ಪ ಅಕ್ಕ, ತಮ್ಮ ಅಜ್ಜ ಘಟಕಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಮೇಲಿನ ವಿಶಿಷ್ಟಗಳ ಜೊತೆಗೆ ವ್ಯಕ್ತಿನಾಮವಾಚಿ ವಿಶಿಷ್ಟಗಳೂ ಸೇರಿರುವುದರ ಮಾದರಿಗಳು ಕೆಳಗಿನಂತಿವೆ.

ಅಜ್ಜ + ಬಸವ + ಅ + ಹಳ್ಳಿ = ಅಜ್ಜಬಸವನಹಳ್ಳಿ – ಕ

ಅಜ್ಜ + ಗೌಡ + ಅ + ವಲಸೆ = ಅಜ್ಜಗೌಡನ ವಲಸೆ – ಕ

ಅಕ್ಕ + ಊರು = ಅಕ್ಕೂರು – ಚ, ರಾ

ಅಜ್ಜ + ಅ + ಹಳ್ಳಿ = ಅಜ್ಜನಹಳ್ಳಿ – ಚ

ಅಬ್ಬೆ + ಊರು = ಅಬ್ಬೂರು – ಚ

ಅಪ್ಪಾ + ಅ + ಹಳ್ಳಿ = ಅಪ್ಪಾರಹಳ್ಳಿ – ದೇ

ಅಬ್ಬೆ + ಚಿಕ್ಕ + ಅ + ಹಳ್ಳಿ = ಅಬ್ಬಚಿಕ್ಕನಹಳ್ಳಿ – ದೇ

ಅಕ್ಕ + ತಮ್ಮ + ಅ + ಹಳ್ಳಿ = ಅಕ್ಕತಮ್ಮನಹಳ್ಳಿ – ದೊ

ಅವ್ವ + ಅ + ಹಳ್ಳಿ = ಅವ್ವೇರಹಳ್ಳಿ – ಮಾ

ತಾತ + ವಾಳ್ಳು (> ವಾಲು) = ತಾತವಾಳ್ಳು > ತಾತವಾಲು

ಅಣ್ಣ + ಹಳ್ಳಿ = ಅಣ್ಣಹಳ್ಳಿ – ರಾ

ಚಿಕ್ಕ + ಅಮ್ಮ + ಅ + ಗುಡ್ಡೆ = ಚಿಕ್ಕಮನಗುಡ್ಡೆ - ರಾ (ಪೂರ್ವನಾಮ - ಚಿಕ್ಕಮಾನ್ನಗುಡ್ಡೆ)

ದೊಡ್ಡ + ಅಮ್ಮ + ಅ + ಗುಡ್ಡೆ = ದೊಡ್ಡಮನಗುಡ್ಡೆ - ರಾ (ಪೂರ್ವನಾಮ - ದೊಡ್ಡಮಾನ್ನಗುಡ್ಡೆ)

ತಮ್ಮ + ನಾಯಕ + ಅ + ಹಳ್ಳಿ = ತಮ್ಮನಾಯಕನಹಳ್ಳಿ - ರಾ

ಅಪ್ಪ + ಸಂದ್ರ = ಅಪ್ಪಸಂದ್ರ - ಹೊ

ಅಪ್ಪಾಜಿ + ಪುರ = ಅಪ್ಪಾಜಿಪುರ - ಹೊ

ಭಾವ + ಪುರ = ಭಾವಪುರ - ಹೊ (ಚಿತ್ತವೃತ್ತಿ ಎಂಬರ್ಥ ಹೊರತುಪಡಿಸಿ)

ಭೀಮ + ಅಕ್ಕ + ಅ + ಹಳ್ಳಿ = ಭೀಮಕ್ಕನಹಳ್ಳಿ - ಹೊ

ಮೇಲಿನ ಸಂಬಂಧಸೂಚಕ ಅಂಶಗಳ ಜೊತೆಗೆ ಜನಾಂಗವಾಚಿ, ವ್ಯಕ್ತಿವಾಚಿ ಹಾಗೂ ವಿಶೇಷಣಗಳು ಸೇರಿರುವುದರ ಮಾದರಿಗಳನ್ನು ಗುರುತಿಸಬಹುದು.

---

**ಅಡಿ ಟಿಪ್ಪಣಿಗಳು**

೧. ಕೆಮ್ತೂರು ರಘುಪತಿಭಟ್ಟ, ತುಳುನಾಡಿನ ಸ್ಥಳನಾಮಗಳು, ಪುಟ ೩

೨. ಜವರೇಗೌಡ ದೇ., ಸ್ಥಳನಾಮ ವ್ಯಾಸಂಗ, ಪುಟ ೨೩

೩. ಡಾ। ವಿಶ್ವನಾಥ, ಸಕಲೇಶಪುರದ ಸ್ಥಳನಾಮಗಳು, ಪುಟ ೪೯

೪. ಡಾ। ಆರ್ಯ ಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೧೫

೫. ಡಾ। ಚಿದಾನಂದಮೂರ್ತಿ ಎಂ., ಕರ್ನಾಟಕ ಸ್ಥಳನಾಮಗಳು (ವಾಗರ್ಥ) ಪುಟ ೨೦

೬. ಡಾ। ಜಾಜಿ ದೇವೇಂದ್ರಪ್ಪ, ಆಂಧ್ರ-ಕರ್ನಾಟಕ ಪ್ರದೇಶದ ಸ್ಥಳನಾಮಗಳು, ಪುಟ ೨೧೩

೭. ಬ್ರಹ್ಮಾನಂದಂ ಎಚ್.ಎಸ್., ವಿಲೇಜ್ ನೇಮ್ಸ್ ವಿತ್ ಪ್ಲೇಸ್ ನೇಮ್ಸ್ ಆಫ್ ಕ್ಯಾಸ್ಟ್ ಅಂಡ್ ಟ್ರೈಬ್, ಸಂಪುಟ-೧೦ ಭಾರತೀಯ ಸ್ಥಳನಾಮ ಸೊಸೈಟಿ ಪ್ರಕಟಣೆ) ಪುಟ ೮೪

೮. ಮಲ್ಲೇಪುರಂ ಜಿ. ವೆಂಕಟೇಶ, ಶಂಬಾ ಕೃತಿ ಸಮೀಕ್ಷೆ, ಪುಟ ೮೧

೯. ಜಾಜಿ ದೇವೇಂದ್ರಪ್ಪ ಆಂಧ್ರ-ಕರ್ನಾಟಕ ಗಡಿಭಾಗದ ಸ್ಥಳನಾಮಗಳು, ಪುಟ ೨೧೭

೧೦. ಡಾ। ಗೋಪಾಲಕೃಷ್ಣ ಎ., ಸ್ಥಳನಾಮ ಅಧ್ಯಯನಗಳು, ಪುಟ ೫೭

೧೧. ಡಾ। ಗೋಪಾಲಕೃಷ್ಣ ಎ., ಸ್ಥಳನಾಮ ಅಧ್ಯಯನಗಳು, ಪುಟ ೫೮

೧೨. ಕಿಟ್ಟೆಲ್ ಪದಕೋಶ, ಪುಟ

೧೩. ಕಿಟ್ಟೆಲ್ ಪದಕೋಶ, ಪುಟ ೧೫೨೭

೧೪. ಡಾ। ಆರ್ಯ ಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೮೯

೧೫. ಕೆಮ್ತೂರು ರಘುಪತಿಭಟ್ಟ, ತುಳುನಾಡಿನ ಸ್ಥಳನಾಮಗಳು, ಪುಟ ೨೬

೧೬. ಡಾ। ಆರ್ಯ ಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೧೬

೧೭. ಡಾ। ಶಂಬಾ ಜೋಶಿ, ಎಡೆಗಳು ಹೇಳುವ ಕಂನಾಡ ಕತೆ (ಸಮಗ್ರ ಸಂಪುಟ-೨) ಪುಟ ೫೬೪

೧೮. ಡಾ। ಕೆ. ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ ನಿರೂಪ, ಪುಟ ೧೦

೧೯. ಬೊಮ್ಮೇಗೌಡ, ಚನ್ನಪಟ್ಟಣ ತಾಲ್ಲೂಕಿನ ಸ್ಥಳನಾಮಗಳು (ಅಪ್ರಕಟಿತ ಎಂ.ಫಿಲ್ ನಿಬಂಧ), ಬೆಂಗಳೂರು ವಿಶ್ವವಿದ್ಯಾಲಯ ಪುಟ ೬೪

## ೬

# ಪ್ರಾಕೃತಿಕ ಲಕ್ಷಣ ಸೂಚಿಸುವ ಸ್ಥಳನಾಮಗಳು

**ಪ್ರವೇಶ**

ಮಾನವನು ಪ್ರಕೃತಿಯ ಒಂದು ಭಾಗವಾಗಿ ಬೆಳೆದುಬಂದಿದ್ದಾನೆ. ಈ ಕಾರಣದಿಂದ ಪ್ರಕೃತಿಯಲ್ಲಿನ ಅನೇಕ ಅಂಶಗಳಿಗೆ ಮಹತ್ವ ನೀಡಿ, ಸ್ಥಳನಾಮಗಳಲ್ಲಿ ನಿರ್ದಿಷ್ಟ ಆಕೃತಿಮಾವಾಗಿ ಪ್ರಾಕೃತಿಕ ಅಂಶಗಳನ್ನು ಬಳಸಿಕೊಂಡಿರುವುದು ಅತ್ಯಂತ ಪ್ರಾಚೀನ ವಿಧಾನವಾಗಿದೆ. ಎತ್ತರದ ಭೂ ಪ್ರದೇಶ, ಬೆಟ್ಟ-ಗುಡ್ಡ ಕಾಡು, ನದಿ, ಪ್ರಾದೇಶಿಕ ಭೂ ವಿಶಿಷ್ಟತೆ (ಮರಳು, ಕೆಂಪು ಮಣ್ಣು) ಮುಂತಾದ ಅಂಶಗಳು ನಿರ್ದಿಷ್ಟವಾಗಿ ಅಥವಾ ವಾರ್ಗಿಕವಾಗಿ ಕಾರ್ಯ ನಿರ್ವಹಿಸಿವೆ. ಈ ವಿಶಿಷ್ಟತೆಗಳನ್ನು ಬಳಸಿಕೊಳ್ಳಲು ಕಾರಣವೆಂದರೆ, ಮಾನವನಂತೆ ಪ್ರಕೃತಿಯು ಅಲ್ಪಾಯುಷಿಯಲ್ಲ. ಭೌಗೋಳಿಕ ಲಕ್ಷಣದಿಂದ ಒಂದು ನಿರ್ದಿಷ್ಟ ಸ್ಥಳವನ್ನು ಗುರುತಿಸುವಲ್ಲಿ ಸ್ಪಷ್ಟತೆ ಇರುತ್ತದೆ. ಮಾನವನು ಬುದ್ಧಿವಂತಿಕೆಯಿಂದ ಈ ನಿರ್ದಿಷ್ಟಗಳನ್ನು ಬಳಸಿಕೊಂಡಿದ್ದಾನೆ[೧]

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳಲ್ಲಿ ಈ ರೀತಿಯ ಭೌಗೋಳಿಕ ಪ್ರಾಕೃತಿಕ ಅಂಶಗಳು ನಿರ್ದಿಷ್ಟವಾಗಿ ಬಳಕೆಯಾಗಿರುವ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ. ಇಂತಹ ಹೆಸರುಗಳು ಮಾನವ ಶಾಸ್ತ್ರೀಯವಾಗಿ ಪ್ರಾಚೀನವಾಗಿದ್ದು, ನಿರ್ದಿಷ್ಟ ಕಾಲಘಟ್ಟವನ್ನು ಸೂಚಿಸುತ್ತದೆ ಹಾಗೂ ಪ್ರಕೃತಿಯ ಆರಾಧನೆ ಕಂಡು ಬರುತ್ತವೆ[೨]

ಬೆಂಗಳೂರು ಗ್ರಾಮಾಂತರ ಜಿಲ್ಲೆಯು, ಸಮತಟ್ಟಾದ ಭೂಪ್ರದೇಶ, ಬೆಟ್ಟ - ಗುಡ್ಡಗಳು ಹಾಗೂ ಕಾಡಿನಿಂದ ಆವೃತ್ತವಾದ ಒಂದು ಭಾಗವನ್ನು ಒಳಗೊಂಡಿದೆ. ಭೂ ವಿಶಿಷ್ಟತೆ ಸೂಚಿಸುವ ಮಣ್ಣಿನ ಬಣ್ಣ ಹಾಗೂ ಅದರ ಸ್ವರೂಪ ಕಲ್ಲಿನ ಬಣ್ಣ, ಸಣ್ಣ ತೊರೆಗಳು ಹರಿಯುವ ಪ್ರದೇಶಗಳನ್ನು ಒಳಗೊಂಡಿದೆ.

ವ್ಯವಸಾಯಕ್ಕೆ ಬಳಕೆಯಾಗುವ ಭೂ ಪ್ರದೇಶದಲ್ಲಿ ಕೆರೆ-ಕುಂಟೆಗಳು ನೀರಿನ ಮುಖ್ಯ ಮೂಲಗಳಾಗಿವೆ. ವಿವಿಧ ರಾಜರು, ಪಾಳೆಯಗಾರರು ಹಾಗೂ ಬ್ರಿಟಿಷ್ ಆಡಳಿತಕ್ಕೆ ಒಳಗಾಗಿದ್ದರಿಂದ, ಅವರ ಕಾಲದ ಪ್ರಾಕೃತಿಕ ಅಂಶಗಳು ಸ್ಥಳನಾಮಗಳ ನಿರ್ದಿಷ್ಟಗಳಲ್ಲಿ ಸೇರಿವೆ.

### ೬.೧ ಮಣ್ಣಿನ ಗುಣ ಸೂಚಿಸುವ ನಾಮಗಳು

ಪ್ರಾದೇಶಿಕವಾಗಿ ವಿಶಿಷ್ಟತೆಯನ್ನು ಗುರುತಿಸುವಲ್ಲಿ ಮಣ್ಣಿನ ಸ್ವರೂಪ ಅಥವಾ ವರ್ಣವು ಪ್ರಮುಖ ಪಾತ್ರ ವಹಿಸಿದೆ. ಊರಿನ ಭೂ ಪ್ರದೇಶದಲ್ಲಿರುವ ಮಣ್ಣು ಅಥವಾ ಅದರ ಜೊತೆ ಇತರ ಅಂಶಗಳು, ಸ್ಥಳನಾಮಗಳ ನಿರ್ದಿಷ್ಟ ಆಕೃತಿಮಾವಾಗಿ ಕಾರ್ಯ ನಿರ್ವಹಿಸುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವೈವಿಧ್ಯತೆ ಹೊಂದಿರುವ ಮಣ್ಣಿನ ಸ್ವರೂಪ ಸೂಚಿಸುವ ಸ್ಥಳನಾಮಗಳನ್ನು ಗುರುತಿಸಬಹುದು.

| | |
|---|---|
| ದೊಡ್ಡ ಮರಳವಾಡಿ – ಕ | ಮರಳಗೆರೆ – ಕ |
| ಮರಳಬೇಕುಪ್ಪೆ – ಕ | ಸುಣ್ಣ ಘಟ್ಟ – ಚ |
| ಚಿಕ್ಕಮಣ್ಣುಗುಡ್ಡೆ – ಚ | ಸುಣ್ಣಘಟ್ಟ – ಚ |
| ಗೊಬ್ಬರ ಗುಂಟೆ – ದೇ | ಮರಳುಕುಂಟೆ – ದೇ |
| ಸುಣ್ಣ ಘಟ್ಟ – ದೇ | ಗೆದ್ಲ ಪಾಳ್ಯ – ದೊ |
| ಮರಳೇನಹಳ್ಳಿ – ದೊ | ಚೋಕಿಪುರ – ದೊ |
| ಗೆದ್ದಲಹಳ್ಳಿ – ನೆ | ಮಟ್ಟಹಳ್ಳಿ – ನೆ |
| ಬೂದಿಹಾಳು – ನೆ | ಮರಳಕುಂಟೆ – ನೆ |
| ಗಟ್ಟೀಪುರ – ಮಾ | ಮಟ್ಟ – ಮಾ |
| ಗೆದ್ದಲ ಹಳ್ಳಿ – ಹೊ | ಹುಸ್ಕೂರು – ಹೊ |

### ೬.೨ ಕ್ಷೇತ್ರವಾಚಕ ಸ್ಥಳನಾಮಗಳು

ಸ್ಥಳನಾಮಗಳಲ್ಲಿ, ನಿರ್ದಿಷ್ಟ ಘಟಕವಾಗಿ ವಿಶೇಷ ಅಂಶಗಳು ಪೂರ್ವಪದವಾಗಿ ಬಂದು, ಉತ್ತರ ಘಟಕದಲ್ಲಿ ನಿರ್ಮಾಣವಾಚಿಯಾದ ಗದ್ದೆ, ತೋಟ, ತೋಪು, ಹೊಲ ಮುಂತಾದ ಕ್ಷೇತ್ರವಾಚಿ ಅಂಶಗಳು ಬಂದಿವೆ. ವ್ಯವಸಾಯಕ್ಕೆ ಯೋಗ್ಯವಾದ ಭೂಪ್ರದೇಶ ಅಕ್ಕ ಪಕ್ಕದಲ್ಲಿ ಮಾನವನ ನೆಲೆ ಇರುವುದು ಸಾಮಾನ್ಯವಾಗಿದ್ದು, ವ್ಯವಸಾಯ ಮಾಡುವ ಭೂ ಪ್ರದೇಶದಲ್ಲಿಯೇ, ತನ್ನ ಅನುಕೂಲಕ್ಕಾಗಿ ನೆಲೆಯನ್ನು ಮಾಡಿಕೊಂಡಾಗ ಈ ರೀತಿಯ ಕ್ಷೇತ್ರ ವಾಚಿ ವಸತಿ ಸ್ಥಳನಾಮಗಳು ಸೃಷ್ಟಿಯಾಗಿವೆ. ಕ್ಷೇತ್ರವಾಚಕ ಅಂಶಗಳು ಕೆಲವೊಮ್ಮೆ ಪೂರ್ವಪದವಾಗಿ ಅಥವಾ ವಿಶಿಷ್ಟ - ವಾರ್ಗಿಕಗಳ ನಡುವೆಯೂ ಸೇರಿರುತ್ತವೆ

ಕ್ಷೇತ್ರವಾಚಕ ಸ್ಥಳನಾಮಗಳಲ್ಲಿ ಪೂರ್ವ ಆಕೃತಿಮಾಗಳು ವಿಶೇಷಣ, ವಸ್ತು ,ವ್ಯಕ್ತಿ, ಪ್ರಾಣಿ - ಪಕ್ಷಿ ಅಂಶಗಳನ್ನು ಹೊಂದಿದ್ದು ಪೂರ್ವದ ವಿಶಿಷ್ಟಗಳ ಜೊತೆ ಅಥವಾ ಉತ್ತರ ಘಟಕಗಳಲ್ಲಿ ಕ್ಷೇತ್ರವಾಚಕ ಅಂಶಗಳನ್ನು ಗುರುತಿಸಬಹುದು.

| | |
|---|---|
| ಮೇಲಿನ ತೋಟ – ದೇ | ಕೆಳಗಿನ ತೋಟ – ದೇ |
| ತೆಂಗಿನಗದ್ದೆ – ರಾ | ತೋಟಹಳ್ಳಿ – ಕ |
| ಎಲೆತೋಟದ ಹಳ್ಳಿ – ಕ | ಕಾಡುಕೊತ್ತನ ಹಳ್ಳಿ ತೋಟ – ಚ |

ಮೂಡಿಗೆರೆ ತೋಟ – ಚ

ಹೊಸ ತೋಟ – ದೇ

ಕೂಳೂರು ತೋಟ – ದೊ

ತೋಟಗೆರೆ – ದೊ

ತೋಟನಹಳ್ಳಿ – ನೆ

ಕಾಡುಗೋಡಿ ತೋಟ – ಹೊ

ತಟ್ಟನೂರು ತೋಟ – ಹೊ

## ೬.೩ ಲೋಹ-ಸಂಪತ್ತನ್ನು ಸೂಚಿಸುವ ಸ್ಥಳನಾಮಗಳು

ಮಾನವನ ನೆಲೆಯನ್ನು ಗುರುತಿಸುವಿಕೆಯಲ್ಲಿ ಲೋಹಗಳು 'ನಿರ್ದಿಷ್ಟ ಆಕೃತಿಮಾವಾಗಿ ಬಳಕೆಯಾಗಿದೆ. ಶಿಲಾಯುಗದ ಉತ್ತರದಲ್ಲಿ ಲೋಹಯುಗ ಪ್ರಾರಂಭವಾದ ನಂತರ, ಇವುಗಳ ಬಳಕೆ ಹೆಚ್ಚಾಯಿತು. ಪ್ರಾರಂಭದಲ್ಲಿ ಬೇಟೆಗಾಗಿ ಬಳಕೆಯಾದ ಲೋಹಗಳು, ನಂತರದಲ್ಲಿ ವಿವಿಧ ಪರಿಕರ ಸಾಮಗ್ರಿಗಳಾಗಿ, ಆಭರಣಗಳಾಗಿ ಹಾಗೂ ಹಣದ ಮಾನದಂಡವಾಗಿ ಮಹತ್ವವನ್ನು ಪಡೆದವು. ಈ ಕಾರಣದಿಂದಾಗಿ ಲೋಹಗಳನ್ನು ಸ್ಥಳನಾಮದ ಪೂರ್ವಘಟಕವಾಗಿ ಲೋಹವನ್ನು ಸೂಚಿಸುವ ನಿರ್ದಿಷ್ಟ ಅಂಶಗಳು ಬಳಕೆಯಾಗಿವೆ. ಕೆಲವೊಮ್ಮೆ ಈ ಸ್ಥಳನಾಮಗಳು ಜಾತಿ ಹಾಗೂ ವೃತ್ತಿಸೂಚಕ ಸ್ಥಳನಾಮಗಳಾಗಿ ಕಾರ್ಯನಿರ್ವಹಿಸುತ್ತವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳಲ್ಲಿ ಲೋಹ ಹಾಗೂ ಸಂಪತ್ತನ್ನು ಸೂಚಿಸುವ ಸ್ಥಳನಾಮಗಳನ್ನು ಗುರುತಿಸಬಹುದು.

ಕಾಂಚನಹಳ್ಳಿ – ಕ

ಕನಕಪುರ – ಕ

ಹೊನ್ನೇನಹಳ್ಳಿ – ಕ

ಚಿನ್ನಾಪುರ – ಮಾ

ಹೊನ್ನಪುರ – ಮಾ

ಹೇಮಾಪುರ – ಮಾ

ಕಂಬೀಪುರ – ಹೊ

ಚಿನ್ನಂದಹಳ್ಳಿ – ಹೊ

ಹೊನ್ನಿಗನಹಳ್ಳಿ – ಚ

ಕನಕೇನಹಳ್ಳಿ – ದೊ

ಹೊನ್ನಾವರ – ದೊ

ಹೊನ್ನಘಟ್ಟ – ದೊ

ಹೊನ್ನಸಂದ್ರ – ನೆ

## ೬.೪ ಜಲವಾಚಿ ಸ್ಥಳನಾಮಗಳು

ಸ್ಥಳನಾಮಗಳಲ್ಲಿ ಬಳಕೆಯಾಗಿರುವ ವಿಶಿಷ್ಟ ಹಾಗೂ ವರ್ಗಿಕಗಳು ಪ್ರಾಕೃತಿಕ ಲಕ್ಷಣವನ್ನು ಸೂಚಿಸುತ್ತವೆ. ಪ್ರಕೃತಿಯನ್ನು ಅವಲಂಬಿಸಿದ್ದ ಮಾನವನು ತಾನು ನೆಲೆನಿಂತ ಸ್ಥಳವನ್ನು ಗುರುತಿಸಿಕೊಳ್ಳಲು, ಮತ್ತೊಂದು ಸ್ಥಳದಿಂದ ಪ್ರತ್ಯೇಕಿಸಿಕೊಳ್ಳಲು ಪ್ರಾಕೃತಿಕ ಅಂಶಗಳನ್ನು ಬಳಸಿಕೊಂಡಿದ್ದು, ಅವುಗಳಲ್ಲಿ ಜಲಸೂಚಕ ಅಂಶವೂ ಸೇರಿದೆ.

ಪ್ರಕೃತಿಯಲ್ಲಿರುವ ಗಾಳಿಯು ಜೀವಿಗೆ ಅತ್ಯಂತ ಅವಶ್ಯಕವಾದ ಮೂಲಭೂತ ಅಂಶವಾಗಿದ್ದು 'ನೀರು' ನಂತರದ ಹಾಗೂ ಮಹತ್ವದ ಸ್ಥಾನ ಪಡೆದಿರುವ ಪ್ರಾಕೃತಿಕ ಸಂಪತ್ತಾಗಿದೆ. 'ವರುಣ' ನೀರನ್ನು ಪ್ರತಿನಿಧಿಸುವ ಅಧಿ ದೈವವಾಗಿದ್ದಾನೆ. ನೀರು ಜೀವನಕ್ಕೆ ಅತ್ಯಾವಶ್ಯಕ ಹಾಗೂ ಅನಿವಾರ್ಯವಾದುದರಿಂದ ಹರಿಯುವ ನೀರನ್ನು ಸಂಗ್ರಹಿಸುವ ಮೂಲಕ ವರ್ಷವಿಡಿ ಬಳಸಲು ಪ್ರಾರಂಭಿಸಿದ. ಈ ರೀತಿ ಕೃತಕವಾಗಿ ತಡೆದು ನಿಲ್ಲಿಸುವ ಸ್ಥಳವನ್ನು ಕೆರೆ, ಕುಂಟೆ, ಕಟ್ಟೆ ಮುಂತಾದ ಹೆಸರುಗಳಿಂದ ಗುರುತಿಸಿದರು. ಸ್ಥಳನಾಮಗಳಲ್ಲಿನ ವಿಶಿಷ್ಟಗಳ ಜೊತೆಗೆ ಜಲವಾಚಿ

ವಾರ್ಗಿಕಗಳನ್ನು ಬಳಸಿರುವುದನ್ನು ಎಲ್ಲಾ ಪ್ರದೇಶಗಳಲ್ಲಿಯೂ ಗುರುತಿಸಬಹುದು. ಮಾನವನ ನೆಲೆಯು ನೀರಿನ ಒರತೆ ಇರುವಲ್ಲಿಯೇ ಕಂಡುಬರುತ್ತದೆ. ಆ ಒರತೆ ಸೂಚಿಸುವ ಪದ ಸ್ಥಳನಾಮಗಳಲ್ಲಿ ಬಳಕೆಯಾಗಿದೆ ನೀರಿನ ಪ್ರಮಾಣ ಅಥವಾ ನೆಲೆ ದೊಡ್ಡದಿದ್ದಲ್ಲಿ ಒಂದು ಊರನ್ನು ಮತ್ತೊಂದರಿಂದ ಬೇರ್ಪಡಿಸುತ್ತಿರುತ್ತದೆ. ನದಿಯು ಹರಿಯುವ ಪಾತ್ರದ ಅಕ್ಕಪಕ್ಕದ ಸ್ಥಳಗಳು, ಹರಿಯುವ ಮಾರ್ಗ, ಅದಕ್ಕೆ ನೀಡಿರುವ ಮಹತ್ವ (ಪಾವಿತ್ರ್ಯತೆ)ದ ಮೇಲೆ ಹೆಸರನ್ನು ಹೊಂದಿರುವ ಸಾಧ್ಯತೆಯೂ ಇರುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಜಲವಾಚಿ ಅಂಶಗಳನ್ನು ಒಳಗೊಂಡಿರುವ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ.

**ಜಲವಾಚಿ ಸ್ಥಳನಾಮಗಳ ಪಟ್ಟಿ**

**ಕನಕಪುರ ತಾಲ್ಲೂಕು**

| | | |
|---|---|---|
| ಅರಕೆರೆ | ಆಲಹಳ್ಳಿ | ಕಣಿವೇ ಕಟ್ಟೆ |
| ಚೀಲನಕೆರೆ ಕಾವಲು | ತಟ್ಟೇಕೆರೆ | ಜಕ್ಕಸಂದ್ರ |
| ವೀರಸಂದ್ರ | ಕೆರೆ ಕಾವಲು | ರಾಯಸಂದ್ರ |
| ಸುನಂದಕಟ್ಟೆ | | |

**ಚನ್ನಪಟ್ಟಣ ತಾಲ್ಲೂಕು**

| | | |
|---|---|---|
| ಆಣೆಗೆರೆ | ಅರಳಾಸಂದ್ರ | ಕನ್ನಸಂದ್ರ |
| ಕನ್ನಮಂಗಲ | ಮತ್ತೀಕೆರೆ | ವಿರುಪಸಂದ್ರ |
| ಬೆಳಕೆರೆ | | |

**ದೇವನಹಳ್ಳಿ ತಾಲ್ಲೂಕು**

| | | |
|---|---|---|
| ಅರಸಿನಕುಂಟೆ | ಇಳತೊರೆ | ಕುರುಬರಕುಂಟೆ |
| ಕೊಮ್ಮಸಂದ್ರ | ಗೊಬ್ಬರಗುಂಡೆ | ಗೋಪಸಂದ್ರ |
| ತೈಲಗೆರೆ | ನೆಲ್ಲಕುಂಟೆ | ಬೀರಸಂದ್ರ |
| ಮೀನಕುಂಟೆ | ರಾಯಸಂದ್ರ | |

**ದೊಡ್ಡ ಬಳ್ಳಾಪುರ ತಾಲ್ಲೂಕು**

| | | |
|---|---|---|
| ಕಮ್ಮಸಂದ್ರ | ಕಾಡಕುಂಟೆ | ಕಾಂತನಕುಂಟೆ |
| ಗುಂಡಂಗೆರೆ | ಜಾಲೆಗೆರೆ | ದೊಡ್ಡವಡಿಗೆರೆ |
| ಮಾರಸಂದ್ರ | ಸೂಳಿಕುಂಟೆ | |

**ನೆಲಮಂಗಲ ತಾಲ್ಲೂಕು**

| | | |
|---|---|---|
| ಅರಿಶಿನ ಕುಂಟೆ | ಅರಳಸಂದ್ರ | ಕಮ್ಮಸಂದ್ರ |
| ಗೊತ್ತಿಗೆರೆ | ತಟ್ಟೆಕೆರೆ | ತೋಟಗೆರೆ |
| ನಾಗಸಂದ್ರ | ಜಿಣೆಗೆರೆ | ಭೂಸಂದ್ರ |
| ಮರುಳಕುಂಟೆ | ಮಾವಿನಕುಂಟೆ | ವಡಕುಂಟೆ |

| | | |
|---|---|---|
| ಸೋಮಸಾಗರ | ಸೂಳೆಕುಂಟೆ | ಸೋಮಸಾಗರ |
| ಶಿವಗಂಗೆ | ವೀರಸಾಗರ | ಹುನ್ನಿಗೆರೆ |

**ಮಾಗಡಿ ತಾಲ್ಲೂಕು**

| | | |
|---|---|---|
| ಅತ್ತಿಂಗೆರೆ | ಆಲದಕಟ್ಟೆ | ಕಲ್ಕೆರೆ |
| ಕುಟ್ಟನಗೆರೆ | ಕಲ್ಯಾಣಿಕಾವಲು | ಕಾಮಸಾಗರ |
| ಕೆಂಕೆರೆ | ಗುಮ್ಮಸಂದ್ರ | ತಾವರೆ ಕೆರೆ |
| ತಾಳಕೆರೆ | ತಿಮ್ಮಸಂದ್ರ | ದೊಡ್ಡ ಮೂಡಿಗೆರೆ |
| ನೇರಳೆಕೆರೆ | ಉಗನಿಗೆರೆ | ಬಿಟ್ಟಸಂದ್ರ |
| ಮಲ್ಲಿಸಂದ್ರ | ವೀರಸಾಗರ | |

**ರಾಮನಗರ ತಾಲ್ಲೂಕು**

| | | |
|---|---|---|
| ಅಲಾಳಸಂದ್ರ | ಆವಾರಗೆರೆ | ಕುಠಾರಬಾವಿ |
| ಚಿಕ್ಕಸೂಳಿಕೆರೆ | ದೊಡ್ಡ ಸೂಳಿಕೆರೆ | ಬನ್ನಿಗೆರೆ |
| ವಿಭೂತಿಕೆರೆ | ಲಕ್ಕಸಂದ್ರ | ಸಬ್ಬಕೆರೆ |
| ಹರಿಸಂದ್ರ | ಹೆಬ್ಬಾರಕೋಡಿ | |

**ಹೊಸಕೋಟೆ ತಾಲ್ಲೂಕು**

| | | |
|---|---|---|
| ಅಪ್ಪಸಂದ್ರ | ಇಟ್ಟಸಂದ್ರ | ಕಮ್ಮಸಂದ್ರ |
| ಗೊರವೀಗೆರೆ | ಚನ್ನಸಂದ್ರ | ಚಿಕ್ಕ ಅರಳ ಗೆರೆ |
| ಚೀಮಸಂದ್ರ | ಚೊಕ್ಕಸಂದ್ರ | ದಬಲ ಸಾಗರ |
| ಬೆಳ್ಳಿಕೆರೆ | ಮುತ್ತಸಂದ್ರ | ಯಮಗುಂಟೆ |
| ರಾಳ್ಳಗುಂಟೆ | ಹನಿಯೂರು | ದಾಬಸಂದ್ರ |

ಮೇಲಿನ ಪಟ್ಟಿಯಲ್ಲಿರುವ ಸ್ಥಳನಾಮಗಳಲ್ಲಿ ಜಲಸೂಚಿ ಅಂಶಗಳು ಸಾಮಾನ್ಯ ವಾರ್ಗಿಕಗಳಲ್ಲಿಯೇ ಹೆಚ್ಚಾಗಿ ಕಂಡು ಬರುತ್ತದೆ. ಇದು ವಿಶಿಷ್ಟ ಘಟಕಗಳಲ್ಲಿ ಕಂಡು ಬರುತ್ತದೆಯಾದರೂ ಇವುಗಳ ಕಡಿಮೆ ಪ್ರಮಾಣದಲ್ಲಿವೆ.

ಉದಾ : ಕೋಡಿಹಳ್ಳಿ – ನೆ

ಹನಿಯೂರು – ಚ

ನೀರೇರಿ – ದೇ

ಸೂಳೆಕೆರೆ[೨] – ದೊ : ೧. ವೇಶ್ಯೆಯೊಬ್ಬಳು ತಾನು ಅನುಸರಿಸಿದ ವೃತ್ತಿಯ ಬಗ್ಗೆ ಬೇಸರಗೊಂಡು, ಪ್ರಾಯಶ್ಚಿತ್ತವಾಗಿ ಕೆರೆಯನ್ನು ನಿರ್ಮಾಣ ಮಾಡಿರಬಹುದು.

೨. ಕೆರೆಯ ನಿರ್ಮಾಣವಾದಾಗ ನರಬಲಿ ಕೊಡುವ ಸಂಪ್ರದಾಯವಿದ್ದ ಕಾಲದಲ್ಲಿ, ವೇಶ್ಯೆಯೊಬ್ಬಳು ಬಲಿದಾನ ಮಾಡಿಕೊಂಡದ್ದರಿಂದ ಈ

ಹೆಸರು ಬಂದಿರಬಹುದು (ಜಾನಪದ ನಿರುಕ್ತಿಗಳು ಕೆಲವೊಮ್ಮೆ ಸತ್ಯದಿಂದ ದೂರವಾಗಿರುವ ಸಾಧ್ಯತೆ ಇರುತ್ತದೆ).

ಜಾಲಿಗೆರೆ (ದೊ) : ಬೆಟ್ಟ ಪ್ರದೇಶದ ತಪ್ಪಲಿನಲ್ಲಿ ಕೆರೆ ಇದ್ದು, ಜಾಲಿಮರಗಳನ್ನು ಹೊಂದಿರುವುದರಿಂದ ಈ ಹೆಸರು ಬಂದಿರುವ ಸಾಧ್ಯತೆ ಇದೆ.
ಜಾಲಿ + ಕೆರೆ = ಜಾಲಿಕೆರೆ > ಜಾಲಿಗೆರೆ ಆಗಿದೆ.
ಕ್ > ಗ್ ಆಗಿ ಸ್ಥಿತ್ಯಂತರ ವಾಗಿದೆ.

ಸೋಲಿಗ್ಗೆರೆ (ಕ) : ೧. ಸೋಲಿಗರು ಹೆಚ್ಚು ವಾಸವಿರುವ ಸ್ಥಳ ವಾಗಿದ್ದು ಇದಕ್ಕೆ ಹೊಂದಿಕೊಂಡಂತೆ ಊರಿನಲ್ಲಿ ಕೆರೆ ಇದೆ.
ಸೋಲಿಗ + ಕೆರೆ = ಸೋಲಿಗ ಕೆರೆ > ಸೋಲಿಗ್ಗೆರೆ ಆಗಿದೆ.
ಪೂರ್ವಾಂತ್ಯದ 'ಗ್' ವ್ಯಂಜನಕ್ಕೆ ಉತ್ತರಾದಿಯ ವ್ಯಂಜನ
ಕ್ > ಗ್ ಆಗಿ 'ಎ' ಸ್ವರದೊಂದಿಗೆ ಸೇರಿ 'ಗ್ಗೆರೆ' ಆಗಿದೆ (ದ್ವಿತ್ವ)

೨. 'ಕೇರಿ' ಎಂಬ ಪದವು ನಿರ್ದಿಷ್ಟ ಜನಾಂಗ ವಾಸಿಸುವ ಪ್ರದೇಶ ಎಂಬರ್ಥ ನೀಡುತ್ತದೆ. ಕೇರಿ > ಕೆರೆ ಆಗಿರುವ ಸಾಧ್ಯತೆ ಹೆಚ್ಚಾಗಿದೆ.

ಜಕ್ಕಸಂದ್ರ (ಕ) : ಜಕ್ಕ (ಯಕ್ಷ) ಇಲ್ಲಿ ವ್ಯಕ್ತಿನಾಮವಾಚಿಯಾಗಿದೆ. ಊರಿನ ಪ್ರಮುಖ ವ್ಯಕ್ತಿಯಾಗಿರುವ ಸಾಧ್ಯತೆ. ಊರಿನ ಸುತ್ತಲೂ ಮೂರು ಕೆರೆಗಳಿದ್ದು ಈ ಕೆರೆಗಳನ್ನು – ಚಿಕ್ಕಕೆರೆ, ದೊಡ್ಡ ಕೆರೆ, ಸುಭೇದಾರ್ ಕೆರೆ (ನಿರ್ಮಾಣವಾಚಿ) ಸಮುದ್ರ > ಸಂದ್ರ ಆಗಿದ್ದು ಸುಭೇದಾರ್ - ಜಕ್ಕ ಆಗಿರುವ ಸಾಧ್ಯತೆ ಇದೆ.
ಜಕ್ಕ + ಸಮುದ್ರ = ಜಕ್ಕಸಮುದ್ರ > ಜಕ್ಕಸಂದ್ರ ಆಗಿದೆ.

ತೈಲಗೆರೆ (ದೇ) : ೧. ತೈಲ (ಎಣ್ಣೆ) ತೆಗೆಯುವ ಸ್ಥಳ ಗಾಣಿಗರು ಇದ್ದ ಹಾಗೂ, ಕೆರೆ ಇರುವ ಊರು. ತೈಲ + ಕೆರೆ = ತೈಲಕೆರೆ < ತೈಲಗೆರೆ

೨. ತೈರ್ > ತೈಲ ಆಗಿರಬಹುದು. ತೈರ್ = ಗಟ್ಟಿ ಮೊಸರು (ದೊರೆಯುತ್ತಿದ್ದ ಸ್ಥಳವಾಗಿರಬಹುದು) ಕೆರೆ ಇರುವ ಸ್ಥಳ ವಾರ್ಗಿಕವಾಗಿ ಬಳಕೆಯಾಗಿದೆ. ಹತ್ತಿರದಲ್ಲಿಯೇ ಮಜ್ಜಿಗೆ ಮಾರುತ್ತಿದ್ದ ಊರು 'ಮಜ್ಜಿಗೆ ಹೊಸಹಳ್ಳಿ' ಇದೆ.

ಹನಿಯೂರು *(ಚ) : ಬೆಟ್ಟ ಸಾಲು ಪ್ರದೇಶದಲ್ಲಿರುವ ಊರು ಮೋಡಗಳಿಗೆ ತಡೆ ಉಂಟಾಗಿ ಮಳೆ ಹನಿ ಬೀಳುತ್ತಿದ್ದ ಪ್ರದೇಶವಾದ್ದರಿಂದ. ಹನಿ ಹನಿ + ಊರು = ಹನಿಯೂರು ಆಗಿದೆ.

ಅರಳಾಸಂದ್ರ (ಚ) : ೧. ಊರಿನ ಪಕ್ಕದಲ್ಲಿ ಹಳ್ಳ (ತೊರೆ) ಹರಿಯುತ್ತದೆ. ಇದು ಜಲವಾಚಿ. ಭೌಗೋಳಿಕ ಲಕ್ಷಣ ಸೂಚಿಸುವ ಘಟಕವಾಗಿದ್ದು,

ಸಮುದ್ರ - ಜಲವಾಚಿ ವಾರ್ಗಿಕವಾಗಿದೆ. ಹಳ್ಳಾ + ಸಮುದ್ರ = ಹಳ್ಳಾ ಸಮುದ್ರ > ಹಳ್ಳಾಸಂದ್ರ > ಅಳ್ಳಾಸಂದ್ರ > ಅರಳಾಸಂದ್ರ ಆಗಿರುವ ಸಾಧ್ಯತೆ ಇದೆ. 'ಳ್ಳಾ' ದ್ವಿತ್ವವು ರ + ಳಾ ಆಗಿ, ಗುಣಿತಾಕ್ಷರವಾಗಿ ಸ್ಥಿತ್ಯಂತರವಾಗಿದೆ.

೨. ಅಣ್ಣ ತಮ್ಮಂದಿರು - ಮುಸಲ್ಮಾನ ಗುರುಗಳಿದ್ದರು. ಚಿಕ್ಕಗುರು ನೆಲ ಅಗೆದಾಗ ನೀರು ಚಿಮ್ಮಿತು. ಆಗ ಆ ಗುರುವು, 'ಅಲ್ಲಾ - ಸಮುದ್ರ' ಎಂಬ ಉದ್ಗಾರ ಮಾಡಿದ್ದರಿಂದ
ಅಲ್ಲಾ ಸಮುದ್ರ > ಅರಳಾಸಮುದ್ರ > ಅರಳಾ ಸಂದ್ರ
ಆಗಿದೆಯೆಂಬ ಜನಪದ ನಿರುಕ್ತಿಯಿದೆ.

ಕೋಡಳ್ಳಿ (ದೊ) : ಕೆರೆಯು ತುಂಬಿ ನೀರು ಹೊರಹೋಗುವ ಸ್ಥಳ 'ಕೋಡಿ'. 'ಕೋಡಿ'ಗೆ ಹತ್ತಿರವಿರುವ ಹಳ್ಳಿ 'ಕೋಡಿಹಳ್ಳಿ' ಕೋಡಿ - ನಿರ್ದಿಷ್ಟ ವಾಗಿ ಬಳಕೆ ಆಗಿದೆ.

ಕೋಡಿ + ಹಳ್ಳಿ = ಕೋಡಿಹಳ್ಳಿ > ಕೋಡಳ್ಳಿ ಆಗಿದೆ.

ಬೆಳವಂಗಲ (ದೊ)" : ಬೆಳ್ + ಮಂಗಲ = ಬೆಳವಂಗಲ

ಬೆಳ್ - ಜಲಾಧಿಕ್ಯವನ್ನು ಸೂಚಿಸುವ ನಿರ್ದಿಷ್ಟ ಘಟಕ. ದ್ರಾವಿಡ ಭಾಷೆಗಳಲ್ಲಿ ನೆರೆ, ಪ್ರವಾಹ, ಜಲಾಧಿಕ್ಯ ಎಂಬರ್ಥವನ್ನು ನೀಡುವ ಪದ.

'ಬೆಳ್' ಎಂಬ ಪದವು ಪೂರ್ವಘಟಕವಾಗಿ ಬರುತ್ತದೆ. ಜಲಾಧಿಕ್ಯವಾಚಕ ವಾಗಿರುವುದೇ ಇಲ್ಲಿ ವಿಶೇಷ ಘಟಕವಾಗಿ ಪ್ರಾಮುಖ್ಯತೆ ಪಡೆದಿದೆ. ನೀರು ಹೆಚ್ಚು ಇರುವ ಅಂಗಳ - ಬೆಳ್ + ಅಂಗಳ = ಬೆಳವಂಗಲ 'ವ್' ಕಾರ ಆಗಮವಾಗಿದೆ. ಮಂಗಲ - ಕೃಷಿಯೋಗ್ಯ ಭೂಮಿ ಫಲವತ್ತಾದ ಭೂಮಿ.

ಮಂಗಲ > ವಂಗಲ ಆಗಿರಬಹುದು.

ತ್ಯಾಮ ಗೊಂಡ್ಲು (ದೊ) : ತೇಮಗೊಂಡ್ಲು > ತೇಮ ಕೊಂಡಲು > ತ್ಯಾಮಕೊಂಡಲು ತ್ಯಾಮಗೊಂಡ್ಲು ಆಗಿದೆ.

ತೇವ - ಹಸಿ, ಒದ್ದೆ, ಕೊಂಡಲು - ಕೊಂಡ, ದಿಬ್ಬ, ದಿಣ್ಣೆ, ಗುಡ್ಡ ಎಂಬರ್ಥಗಳಿವೆ.

ತೇವವಿರುವ ಎತ್ತರದ ಭೂಪ್ರದೇಶ ಎಂಬರ್ಥ ಬರುತ್ತವೆ.

ಜಲವಾಚಿ - ಪ್ರಾಕೃತಿಕ ಲಕ್ಷಣ ಸೂಚಿಸುತ್ತದೆ.

ಕೊಂಡಲು - ತೆಲುಗು ಭಾಷೆಯ ಪದವಾಗಿದ್ದು, 'ಕ್'ಕಾರ ಬದಲಾಗಿ 'ಗ್'ಕಾರಾದೇಶದಿಂದ 'ಗೊಂಡಲು' ಆಗಿದೆ. ಶಾಸನದಲ್ಲಿ 'ತೇಮಗೊಂಡ್ಲ' ರೂಪವನ್ನು ಗುರುತಿಸಬಹುದು.

## ೬.೫ ಸಸ್ಯವಾಚಿ ಸ್ಥಳನಾಮಗಳು

ಮಾನವನ ವಾಸದ ನೆಲೆಗಳು ಪ್ರಾಕೃತಿಕ ಸೃಷ್ಟಿ ಅಥವಾ ಮಾನವ ನಿರ್ಮಿತವಾಗಿರುತ್ತವೆ. ಮಾನವನ ಮೂಲವನ್ನು ಕಾಡಿನ ಮೂಲಕವೇ ಗುರುತಿಸಲಾಗುತ್ತದೆ. ಕಾಡುಗಳು ಆಹಾರ ನೀಡುವ, ರಕ್ಷಣೆ ನೀಡುವ ತಾಣವಾಗಿದ್ದಿತು. ಮಾನವನ ಬುದ್ಧಿವಂತಿಕೆ ಬೆಳೆದಂತೆ ಆಹಾರ ಪದಾರ್ಥಗಳ ಉತ್ಪತ್ತಿ, ಸಿದ್ಧಪಡಿಸಿದ (ಬೇಯಿಸಿದ) ಆಹಾರ ಬಳಸುಪಿಕೆ, ಬೆಂಕಿಯ ಬಳಕೆ, ಸಸ್ಯದ ಮೂಲಕ ಔಷಧಗಳ ಬಳಕೆ, ರಕ್ಷಣೆಗಾಗಿ ಮರಗಳ ಬಳಕೆ ಮೊದಲಾದ ಕಾರಣಗಳಿಂದ ಗಿಡಮರಗಳಿಗೆ ಮಹತ್ವ ದೊರೆಯಿತು. ತನಗೆ ಬೇಕಾದ ಗಿಡಮರಗಳನ್ನು ಬೆಳೆಯುವ ಕಲೆಯನ್ನು ರೂಢಿಸಿಕೊಂಡ ಮಾನವನು ತನ್ನ ವಾಸದ ನೆಲೆಯನ್ನು ಗಿಡಮರಗಳ ಹೆಸರನ್ನು ಬಳಸುವುದರ ಮೂಲಕ ಗುರುತಿಸಿಕೊಂಡನು. ಗಿಡ ಮರಗಳ ಹೆಸರಿಗೆ ಸಂಬಂಧಿಸಿದಂತೆ ಕುಟುಂಬ (ಕುಲ) ನಾಮಗಳು ಇದ್ದು, ಕುಟುಂಬ ನಾಮಗಳೇ ಸ್ಥಳನಾಮಗಳಲ್ಲಿ 'ವಿಶಿಷ್ಟ'ಗಳಾಗಿ ಬಳಕೆಯಾಗಿರುವ ಸಾಧ್ಯತೆಯೂ ಇದೆ. ಈ ರೀತಿ ಸ್ಥಳನಾಮಗಳಲ್ಲಿ 'ವಿಶಿಷ್ಟ' ಘಟಕಗಳಾಗಿ ಬಳಕೆ ಯಾಗಿರುವ ವೃಕ್ಷ ಅಥವಾ ಕುಲನಾಮಗಳು ಈಗ ಇಲ್ಲದಿದ್ದರೂ ಅದೇ ಹೆಸರು ಸ್ಥಳನಾಮಗಳಾಗಿ ಮುಂದುವರೆದಿವೆ. ವೃಕ್ಷಗಳಿಗೆ ದೈವತ್ವದ ಸ್ವರೂಪ ನೀಡುವುದರ ಮೂಲಕವೂ ವಿಶಿಷ್ಟ ಸ್ಥಾನವನ್ನು ನೀಡಲಾಗಿದೆ. ಕೆಲಮೊಮ್ಮೆ ಇಡೀ ಕಾಡು ಸ್ಥಳನಾಮಗಳಲ್ಲಿ ವಾರ್ಗಿಕವಾಗಿ ಬಳಕೆಯಾಗಿದೆ. ಸಸ್ಯವಾಚಿ ಸ್ಥಳನಾಮಗಳು ಆಯಾಪ್ರದೇಶದ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಅಂಶಗಳನ್ನು ತಿಳಿಸುತ್ತವೆ. ಇದರ ಜೊತೆಗೆ, ಅಂತಹ ಮರಗಳು, ನಿರ್ದಿಷ್ಟವಲಯದ ವಾತಾವರಣ, ಭೂಮಿಯ ಮೇಲ್ಮೈ ಲಕ್ಷಣ ಪರಿಸರ ನೀರಿನ ಒರತೆ ಮುಂತಾದುವುನ್ನು ಅರಿಯಲು ಸಹಾಯಕವಾಗಿದೆ. ಗಿಡಮರಗಳ ಬೆಳವಣಿಗೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನ ವಾಗುವ ಸಾಧ್ಯತೆ ಇದ್ದು ಜನರ ವೃತ್ತಿಗಳನ್ನು ಗುರುತಿಸಲು ಇದು ಸಹಾಯಕವಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಸ್ಯವಾಚಿ ಸ್ಥಳನಾಮಗಳನ್ನು ಗುರುತಿಸಬಹುದಾಗಿದ್ದು ಅನೇಕ ಗಿಡಮರಗಳ ಹೆಸರುಗಳು 'ವಿಶಿಷ್ಟ' ಗಳಾಗಿ ಬಳಕೆಯಾಗಿವೆ.

**ಸಸ್ಯವಾಚಿ ಸ್ಥಳನಾಮಗಳು**

**ಕನಕಪುರ ತಾಲ್ಲೂಕು**

| | | |
|---|---|---|
| ಅತ್ತಿಗುಪ್ಪೆ | ಅತ್ತೀಹಳ್ಳಿ | ಅವರೆಮಾಳ |
| ಗುತ್ತಲಹುಣಸೆ | ದಾಳಿಂಬ | ತೆಂಗನಾಯಕನಹಳ್ಳಿ |
| ಬನ್ನಿಕುಪ್ಪೆ | ಬಾಳೇಪುರ | ಮಲ್ಲಿಗೆ ಮೆಟ್ಟಿಲು |
| ಸೀಗೆಕೋಟೆ | ಹಲಸಿನ ಮರದ ಹಳ್ಳಿ | ಹಲಸೂರು |
| ಹುಣಸನಹಳ್ಳಿ | | |

**ಚನ್ನಪಟ್ಟಣ ತಾಲ್ಲೂಕು**

| | | |
|---|---|---|
| ಅತ್ತಿಗುಪ್ಪೆ | ಎಲೆತೋಟದಹಳ್ಳಿ | ಮೆಣಸಿಗನಹಳ್ಳಿ |
| ಮಾಕಳಿ | ಹುಣಸನಹಳ್ಳಿ | ಸೀಬಹಳ್ಳಿ |

**ದೇವನಹಳ್ಳಿ ತಾಲ್ಲೂಕು**

| | | |
|---|---|---|
| ಅತ್ತಿಬೆಲೆ | ಕಾಚೇಪುರ | ನೆಲ್ಲುಕಂಟೆ |
| ಬನ್ನಿಮಂಗಲ | ಬಾಳೇಪುರ | ಸಾಂಬಾರ ಗಿಡದಕಾವಲು |
| ಪೌತೇಗೌತನಹಳ್ಳಿ | | |

**ದೊಡ್ಡಬಳ್ಳಾಪುರ ತಾಲ್ಲೂಕು**

| | | |
|---|---|---|
| ಅರಳುಮಲ್ಲಿಗೆ | ಚಿಕ್ಕ ಹೆಜ್ಜಾಜಿ | ತೂಗರಿಘಟ್ಟ |
| ದೊಡ್ಡ ಹೆಜ್ಜಾಜಿ | ನೆಲ್ಲಕುಂಟೆ | ನೇರಳೆಘಟ್ಟ |
| ಮಾಕಳಿ | ಮುತ್ತುಗದಹಳ್ಳಿ | ಮೆಳೇಕೋಟೆ |

**ನೆಲಮಂಗಲ ತಾಲ್ಲೂಕು**

| | | |
|---|---|---|
| ಆಲದಹಳ್ಳಿ | ತಾವರೆಕೆರೆ | ತಾಳೇಕರೆ |
| ಮಾಕಳಿ | ಮಾವಿನ ಕುಂಟೆ | ಮಾವಿನಕೊಮ್ಮನಹಳ್ಳಿ |

**ಮಾಗಡಿ ತಾಲ್ಲೂಕು**

| | | |
|---|---|---|
| ಗೇರಹಳ್ಳಿ | ಆಲದಕಟ್ಟೆ | ತಾವರೆಕೆರೆ |
| ತಾಳೆಕೆರೆ | ವಸುರುಮಾವಿನಕಟ್ಟೆ | ಹಲಸುಬೆಲೆ |
| ಹೊಂಗೆಕಾವಲು | | |

**ರಾಮನಗರ ತಾಲ್ಲೂಕು**

| | | |
|---|---|---|
| ಕುಂಬಳಗೋಡು | ತೆಂಗಿನ ಕಲ್ಲು | ತಾಳೆಗುಪ್ಪೆ |
| ಹುಣಸನಹಳ್ಳಿ | ಹೆಜ್ಜಾಲ | ಬನ್ನಿಕುಪ್ಪೆ |
| ಬನ್ನೀಗೆರೆ | | |

**ಹೊಸಕೋಟೆ ತಾಲ್ಲೂಕು**

| | | |
|---|---|---|
| ಅತ್ತಿಬೆಲೆ | ಗುಳ್ಳಕಾಯಿಪುರ | ನಿಂಬೆಕಾಯಿಪುರ |
| ಬಿದರಹಳ್ಳಿ | ಮುತ್ತುಕದಹಳ್ಳಿ | ಹಲಸಿನಕಾಯಿ ಪುರ |
| ಹಲಸನಹಳ್ಳಿ | ಹಲಸನಹಳ್ಳಿ | ಹುಣಸೇಹಳ್ಳಿ |

ಬಿದರ ಹಳ್ಳಿ (ಹೊ) : ಬಿದಿರಹಳ್ಳಿ ಬಿದಿರು ದಟ್ಟವಾಗಿ ಬೆಳೆದಿರುವ ಊರು.
ಬಿದಿರು + ಹಳ್ಳಿ = ಬಿದಿರುಹಳ್ಳಿ > ಬಿದಿರ ಹಳ್ಳಿ > ಬಿದರಹಳ್ಳಿ ಆಗಿದೆ.
ಬಿದಿರು ಮೆಳೆ ಸೂಚಿಸುವ ಸ್ಥಳ. ಬಿದಿರು – ವಿಶಿಷ್ಟದಲ್ಲಿನ 'ಇ', 'ಉ' – ಸ್ವರಕ್ಕೆ ಆದೇಶವಾಗಿ 'ಅ' ಸೇರಿಕೊಂಡು ಬಿದಿರು > ಬಿದರ ಆಗಿದೆ.

ಹುಣಸನಹಳ್ಳಿ (ಚ) : ವೃಕ್ಷವಾಚಿ ಸ್ಥಳನಾಮವಾಗಿದ್ದು ಹುಣಸೆಮರಗಳು ಹೆಚ್ಚಾಗಿ ಬೆಳೆದಿದ್ದ ಪ್ರದೇಶವನ್ನು ಸೂಚಿಸುತ್ತದೆ. ಈ ಹೆಸರಿನ ಊರುಗಳು ಎಲ್ಲಾ ಕಡೆ ಕಂಡುಬರುತ್ತವೆ. ಈಗ ಕೆಲವು ಭಾಗದಲ್ಲಿ ಹುಣಸೆ ಮರಗಳಿಲ್ಲದಿರಬಹುದು. 'ಹುಣಸೆ' ಪದವು. ಸ್ಥಳನಾಮದಲ್ಲಿ ನಿರ್ದಿಷ್ಟವಾಗಿ ಬಳಕೆಯಾಗಿರುತ್ತದೆ.

ಯಲಿಯೂರು (ದೇ) : ಯಲಿಯೂರು - ಮರದ ಎಲೆಗಳು ಹೆಚ್ಚು ಬೀಳುತ್ತಿದ್ದ ಪ್ರದೇಶ. ಎಲೆ + ಊರು - ಎಲೆಯೂರು > ಎಲಿಯೂರು > ಯಲಿಯೂರು ಆಗಿದೆ.

ಹೆಜ್ಜಾಜಿ (ದೊ)* : ಜಾಜಿ ಹೂಗಳಿಂದ ಈ ಊರು ಹೆಸರುವಾಸಿಗಿದ್ದಿತೆಂಬ ಐತಿಹ್ಯವಿದೆ. (ದೊಡ್ಡ ಹೆಜ್ಜಾಜಿ ಚಿಕ್ಕಹೆಜ್ಜಾಜಿ)
ಹಿರಿದು + ಜಾಜಿ = ಹೆಜ್ಜಾಜಿ. ಇಲ್ಲಿ ವಿಶಾಲವಾದ ಕೆರೆಯೊಂದಿದೆ . ಕೆರೆಯ ಎರಡೂ ದಂಡೆಗಳಲ್ಲಿ ಊರುಗಳಿದ್ದು ಅವೆರಡೂ ಊರುಗಳನ್ನು ಪ್ರತ್ಯೇಕಿಸಿಕೊಳ್ಳಲು ಚಿಕ್ಕ ಮತ್ತು ದೊಡ್ಡ ಎಂಬ ವಿಶೇಷಣಗಳನ್ನು ಬಳಸಿಕೊಳ್ಳಲಾಗಿದೆ.

ಮೆಳೆಕೋಟೆ (ದೊ) : ಇಲ್ಲಿ ಕೋಟೆ ಇದೆ. ಬಿದಿರುಮೆಳೆ ದಟ್ಟವಾಗಿ ಬೆಳೆಯುತ್ತಿದ್ದ ಪ್ರದೇಶವಾಗಿದ್ದು, 'ಮೆಳೆ' ನಿರ್ದಿಷ್ಟವಾಗಿ 'ಕೋಟೆ' ವಾರ್ಗಿಕವಾಗಿ ಬಳಕೆಯಾಗಿ 'ಮೆಳೆಕೋಟೆ' ಆಗಿದೆ.

ದಾಳಿಂಬ (ಕ) : ದಾಳಿಂಬೆ - ವೃಕ್ಷವಾಚಿ, ದಾಳಿಂಬೆ ಗಿಡಗಳು ಬೆಳೆಸುತ್ತಿದ್ದ ಪ್ರದೇಶವಾಗಿದ್ದರಿಂದ, ಈ ಹೆಸರು ಬಂದಿದೆ ಎಂಬ ಅಭಿಪ್ರಾಯವಿದೆ. 'ದಾಳಿಮ' ಎಂಬುದು ಸ್ಥಳೀಯರ ಉಚ್ಚಾರಣೆಯಾಗಿದೆ.

ಮುತ್ತೂರು (ದೊ) : ಮುತ್ತುಗದ ಮರಗಳು ಹೆಚ್ಚಾಗಿ ಬೆಳೆದಿದ್ದು ಪ್ರದೇಶವಾಗಿದ್ದರಿಂದ ಈ ಹೆಸರು ಬಂದಿದೆ. ಮುತ್ತುಗದ ಊರು > ಮುತ್ತುಗದೂರು > ಮುತ್ತು ಊರು > ಮುತ್ತೂರು ಆಗಿದೆ.

ಹೊಂಗೇಕಾವಲು (ಮಾ) : ಹೊಂಗೇ ಗಿಡಗಳು ಬೆಳೆದಿರುವ ಸ್ಥಳ. ಹೊಂಗೇ- ಹುಲಿಗಿಲುಮರ, ತಮಾಳ ವೃಕ್ಷ ಎಂಬ ಹೆಸರುಗಳಿವೆ.
ಹೊಂಗೆ + ಕಾವಲು = ಹೊಂಗೇಕಾವಲು

ಹುರುಳೀಹಳ್ಳಿ (ನೆ) : ಹುರುಳಿ-ದ್ವಿದಳ ಧಾನ್ಯ, ಬೇಳೆಕಾಳು ಹಳ್ಳ -ತಗ್ಗಾದ ಪ್ರದೇಶ, ನೀರು ಹರಿಯುವ ಪ್ರದೇಶ ಹುರುಳೀಕಾವಲು ಬೆಳೆಯುವ ತಗ್ಗಾದ ಪ್ರದೇಶವಾಗಿದೆ. ಹೆಚ್ಚು ಶ್ರಮವಿಲ್ಲದೆ, ನೀರಿನ ಅವಶ್ಯಕತೆಯಿಲ್ಲದೆ ಹುರುಳೀ ಬೆಳೆ ಬೆಳೆಯುವ ಪ್ರದೇಶ ಹೊಂದಿರುವ ಊರು.

'ಹಳ್ಳ' ಎಂಬುದು 'ಹಳ್ಳಿ' ಆಗಿ ರೂಪಾಂತರವಾಗಿದೆ.

ನೆಲ್ಲುಕುಂಟೆ (ದೇ) : ನೆಲ್ಲು - ಭತ್ತ ಕುಂಟೆ - ಜಲವಾಚಿ , ವಾರ್ಗಿಕ. ಭತ್ತ ಬೆಳೆಯುವ ವ್ಯವಸಾಯ ಪ್ರದೇಶವಾಗಿದ್ದು ಕುಂಟೆಯ ನೀರು ಬಳಸಲಾಗುತ್ತದೆ.

ದೊಡ್ಡಬೆಲೆ (ನೆ) : ದೊಡ್ಡ -ಪರಿಮಾಣವಾಚಿ ವಿಶೇಷಣ, ಬೇಲಿ > ಬೆಲೆ ಆಗಿದೆ. ರಕ್ಷಣೆಗಾಗಿ ಬಳಸುತ್ತಿದ್ದ ಎತ್ತರದ ಬೇಲಿ ಗಿಡಗಳಿದ್ದುದರಿಂದ ಈ ಹೆಸರು ಬಂದಿದೆ. ದೊಡ್ಡಬೇಲಿ > ದೊಡ್ಡಬೆಲೆ ಆಗಿರುವ ಸಾಧ್ಯತೆ ಇದೆ.

ನಿಂಬೆಕಾಯಿಪುರ (ಹೊ) : ನಿಂಬೆ ಕಾಯಿ-ಲಿಂಬೆಕಾಯಿ, ಈಳೆಜಾತಿಗೆ ಸೇರಿದ ಮರ ಮತ್ತು
ಹಣ್ಣು, ಪುರ-ವಾಸ್ತವ್ಯ ಸೂಚಿ ವಾರ್ಗಿಕ.
ನಿಂಬೇಮರವಿರುವ ಊರಿನಿಂದ ಹೆಸರಿನ ನಿಷ್ಪನ್ನ
ನಿಂಬೆ + ಕಾಯಿ + ಪುರ - ಸಸ್ಯವಾಚಿ.

ಸೀಗೆಕುಪ್ಪೆ (ಮಾ) : ಸೀಗೆಗಿಡದ ಪೊದೆ. ಕುಪ್ಪೆ - ರಾಶಿ,
ಸೀಗೆಗಿಡದ ಪೊದೆ ಸೂಚಿಸುವ ಸ್ಥಳ.

## ೬.೬ ಶಿಲಾವಾಚಿ ಸ್ಥಳನಾಮಗಳು

ಪ್ರಾಕೃತಿಕ ಲಕ್ಷಣಗಳನ್ನು ಸೂಚಿಸುವ ಸ್ಥಳನಾಮಗಳಲ್ಲಿ ಶಿಲಾವಾಚಿ ಸ್ಥಳನಾಮಗಳು ಅತ್ಯಂತ ಪುರಾತನವಾದುವು. ತನ್ನ ಸುತ್ತಮುತ್ತಲಿನ ಪ್ರಕೃತಿಯ ಅಂಶ ಮತ್ತು ನಿರ್ಮಾಣ ವಾಚಿಗಳಲ್ಲಿ ಬಳಕೆಯಾಗಿರುವ ಶಿಲೆಯನ್ನು ವಾಸಸ್ಥಳ ಹಾಗೂ ನಿರ್ವಸಿತ ಸ್ಥಳಗಳನ್ನು ಗುರುತಿಸಲು ಬಳಸಿದ್ದಾನೆ. ಶಿಲೆಯ ಬಳಕೆಯನ್ನು ಪ್ರಾರಂಭಿಸಿದ ಕಾಲ 'ಶಿಲಾಯುಧ ಕಾಲ' ಎಂದು ಹೆಸರು ಬಂದಿದೆ. ಶಿಲೆಯ ಅರ್ಥ ಬರುವ ಕಲ್ಲು,ಬಂಡೆ, ಕಗ್ಗಲ್ಲು, ಗುಂಡು-ಎಂಬ ಕನ್ನಡದ ರೂಪಗಳನ್ನು ರಾಳ್ಳು, ಬಂಡ, ಗುಂಡಲು ಎಂಬ ತೆಲುಗು ಭಾಷೆಯ ಪದಗಳನ್ನು ಇಲ್ಲಿ ಗುರುತಿಸಹುದು. 'ಕಲ್ಲು' ಪದವು ನಿರ್ದಿಷ್ಟ ಹಾಗೂ ವಾರ್ಗಿಕಗಳಲ್ಲಿ ಸಮನಾಗಿ ಬಳಕೆಯಾಗಿದೆ. ಶಿಲಾವಾಚಿ ಪದವು ಪೂರ್ವಪದದಲ್ಲಿ ಬಂದರೆ 'ನಿರ್ದಿಷ್ಟ 'ವಾಗಿಯೂ ಉತ್ತರಪದದಲ್ಲಿ ಬಂದರೆ 'ವಾರ್ಗಿಕ'ವಾಗಿಯೂ, ಬಳಕೆಯಾಗಿರುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಶಿಲಾವಾಚಿ ಸ್ಥಳನಾಮಗಳನ್ನು ಗುರುತಿಸಲಾಗಿದ್ದು, ಕನಿಷ್ಠ ಎರಡು ಹೆಸರಿನಿಂದ ಗರಿಷ್ಠ ಎಂಟು ಹೆಸರುಗಳನ್ನು ಈ ತಾಲ್ಲೂಕುಗಳು ಹೊಂದಿವೆ.

### ತಾಲ್ಲೂಕುವಾರು ಶಿಲಾವಾಚಿ ಸ್ಥಳನಾಮಗಳ ಪಟ್ಟಿ

**ಕನಕಪುರ ತಾಲ್ಲೂಕು**

ಕಗ್ಗಲಹಳ್ಳಿ ಕಲ್ಲನಕುಪ್ಪೆ ಕಲ್ಲಹಳ್ಳಿ
ಕೋಟಗಲ್ಲು ಚಿಕ್ಕ ಕಲ್ ಬಾಳು ದೇವರ ಕಗ್ಗಲಹಳ್ಳಿ
ದೊಡ್ಡ ಕಲ್ಲ ಬಳ್ಳಿ ನಿಡುಗಲ್ಲು

**ಚನ್ನಪಟ್ಟಣ ತಾಲ್ಲೂಕು**

ಕೆಂಗಲ್ಲು ಕಲ್ಲಾಪುರ

**ದೇವನಹಳ್ಳಿ ತಾಲ್ಲೂಕು**

ಕಗ್ಗಲಹಳ್ಳಿ ಗುಂಡಲಹಳ್ಳಿ ಚಪ್ಪರಕಲ್ಲು

**ದೊಡ್ಡಬಳ್ಳಾಪುರ ತಾಲ್ಲೂಕು**

ಕಲ್ಲುಕೋಟೆ ಕಲ್ಲೋಡು ಕಲ್ಲು ದೇವನಹಳ್ಳಿ
ಗರುಡಗಲ್ಲು ಹುಲಿಕಲ್

**ನೆಲಮಂಗಲ ತಾಲ್ಲೂಕು**

| | | |
|---|---|---|
| ಕಲ್ಲನಾಯಕನಹಳ್ಳಿ | ಕೆಂಗಲ್ಲು | ಚಿಕ್ಕಬಿದರಕಲ್ಲು |
| ನಿಜಗಲ್ಲು | ಹಳೇ ನಿಜಗಲ್ಲು | |

**ಮಾಗಡಿ ತಾಲ್ಲೂಕು**

| | | |
|---|---|---|
| ಕಲ್ಲದೇವನಹಳ್ಳಿ | ಕಲ್ಲಹಟ್ಟಿ ಪಾಳ್ಯ | ಕಲ್ಕೆರೆ |
| ಹೂಜಿಗಲ್ಲು | ಹುಲಿಕಲ್ಲು | ಮಾನಗಲ್ಲು |
| ಗಾಣಕಲ್ಲು | ಶಂಕನಕಲ್ಲು | |

**ರಾಮನಗರ ತಾಲ್ಲೂಕು**

| | | |
|---|---|---|
| ಕಲ್ಲುಗೋಪನಹಳ್ಳಿ | ಕುಣಗಲ್ಲು | ಕುತಗಲ್ಲು |
| ಗಣಕಲ್ಲು | ತೆಂಗಿನ ಕಲ್ಲು | ಸಿಡ್ಲಕಲ್ಲು |

**ಹೊಸಕೋಟೆ ತಾಲ್ಲೂಕು**

| | | |
|---|---|---|
| ಕಣಿಕಲ್ಲು | ಕಲ್ಲಹಳ್ಳಿ | ಕಲ್ಲುಕುಂಟೆ ಅಗ್ರಹಾರ |
| ಗಣಕಲ್ಲು | ಬಂಡೆಬೊಮ್ಮನಹಳ್ಳಿ | ಬಂಡಾಪುರ |
| ಬೊಮ್ಮವ ಬಂಡೆ | ರಾಳ್ಳಕುಂಟೆ | |

ಶಿಲಾವಾಚಿ ಸೂಚಕ ಘಟಕಗಳಲ್ಲಿನ ಕೆಲವು ಸ್ಥಳನಾಮಗಳು ವಿಶಿಷ್ಟ ಅಂಶಗಳ ಜೊತೆ ಥಳುಕು ಹಾಕಿಕೊಂಡಿರುವುದನ್ನು ಗುರುತಿಸಬಹುದು. 'ಕಲ್ಲು' ಪದವು ಜಲವಾಚಿ ಅಂಶದ ಜೊತೆಗೆ ಬಳಕೆಯಾಗಿರುವುದನ್ನು ಇಲ್ಲಿ ಗುರುತಿಸಲಾಗಿದೆ.

ಉದಾ : ಕಲ್ಕೆರೆ - ಮಾ

ಕಲ್ಲು ಕುಂಟೆ – ಹೊ

ರಾಳ್ಳಕುಂಟೆ – ಹೊ (ತೆಲುಗು ಪ್ರಭಾವದ 'ರಾಳ್ಳು' ಪದ ಬಳಕೆಯಾಗಿದೆ.)

'ನಿರ್ಮಾಣವಾಚಿ' ಅಂಶಗಳನ್ನು ಸೂಚಿಸುವ ಶಿಲಾವಾಚಿ ಸ್ಥಳನಾಮಗಳು

ಉದಾ : ಕೆಂಗಲ್ಲು – ಚ

ಚಪ್ಪರಕಲ್ಲು - ದೇ

ಕಲ್ಲುಕೋಟೆ - ದೊ

ಗಾಣಕಲ್ಲು - ಮಾ

'ನಿರ್ದಿಷ್ಟವಾಗಿ ಬಳಕೆಯಾಗಿರುವ ಶಿಲಾವಾಚಿ ಸ್ಥಳನಾಮಗಳು

| | | |
|---|---|---|
| ಉದಾ : | ಕಗ್ಗಲಹಳ್ಳಿ - ಕ | ಬಂಡೆ ಬೊಮ್ಮನಹಳ್ಳಿ - ಹೊ |
| | ಕಲ್ಲನ ಕುಪ್ಪ - ಕ | ಬೊಮ್ಮನ ಬಂಡೆ - ಹೊ |
| | ಕಲ್ಲಹಳ್ಳಿ - ಕ | ರಾಳ್ಳಕುಂಟೆ - ಹೊ |
| | ಕಲ್ಲಾಪುರ - ಚ | ಗುಂಡಲಹಳ್ಳಿ - ದೇ |
| | ಕಲ್ಲು ಕೋಟೆ - ದೊ | ಕಲ್ಲಹಟ್ಟಿ ಪಾಳ್ಯ - ದೊ |

'ದೈವವಾಚಿ' ಅಂಶ ವ್ಯಕ್ತಪಡಿಸುವ ಶಿಲಾವಾಚಿ ಸ್ಥಳನಾಮಗಳು,

ಉದಾ : ದೇವರ ಕಗ್ಗಲಹಳ್ಳಿ
ಕೆಂಗಲ್ಲು
ಕಗ್ಗಲಹಳ್ಳಿ
ಗರುಡಗಲ್ಲು

**ಶಿಲಾವಾಚಿ ಸ್ಥಳನಾಮಗಳ ವಿಶ್ಲೇಷಣೆ**

ಕೆಂಗಲ್ (ಚ) : ಕೆಂಪು + ಕಲ್ > ಕೆಂಗಲ್, ಕೆಂಪು ಕಲ್ಲಿನ ಮುತ್ತುರಾಯಸ್ವಾಮಿ ವಿಗ್ರಹ ವಿರುವುದರಿಂದ ಈ ಹೆಸರು ಬಂದಿದೆ.

ಚಪ್ಪರಕಲ್ಲು (ದೇ) : ಚಪ್ಪರ + ಕಲ್ಲು > ಚಪ್ಪರ ಕಲ್ಲು, ಕಲ್ಲು ಬಂಡೆಯ ಮೇಲೆ, ಕಲ್ಲು ಮಂಟಪದ ನಿರ್ಮಾಣವಿದೆ. ಕಲ್ಲಿನ ಮಂಟಪಕ್ಕೆ ಚಪ್ಪರಕಲ್ಲು ಎಂದು ಹೆಸರು ಬಂದಿದೆ.

ಕಲ್ಲುಕೋಟೆ (ದೊ) : ಕಲ್ಲು + ಕೋಟೆ = ಕಲ್ಲುಕೋಟೆ, ಕಲ್ಲಿನಿಂದ ನಿರ್ಮಾಣ ಮಾಡಿರುವ ಕೋಟೆ, ನಿರ್ಮಾಣ ವಾಚಿ.

ಕಲ್ಲೂರು (ಮಾ) : ಕಲ್ಲು + ಊರು = ಕಲ್ಲೂರು, ಕಲ್ಲುಗಳಿಂದ ಆವೃತ್ತವಾಗಿರುವ ಊರು ಹಾಗೂ ಆಂಜನೇಯ ದೇವಾಲಯವನ್ನು ಕಲ್ಲಿನಿಂದ ಕಟ್ಟಲಾಗಿರುವುದರಿಂದ ಈ ಹೆಸರು ಬಂದಿದೆ, ನಿರ್ಮಾಣವಾಚಿ.

ಹುಲಿಕಲ್ (ಮಾ) : ಹುಲಿ + ಕಲ್ = ಹುಲಿಕಲ್, ಸನ್ಯಾಸಿಯೊಬ್ಬನು ಸಾಕಿದ್ದ ಹೋರಿಗಳು, ತಮ್ಮ ಮೇಲೆ ಎರಗಿದ ಹುಲಿಯನ್ನು ಬಂಡೆಯೊಂದರ ಬಳಿ ಕೊಂದದ್ದರಿಂದ 'ಹುಲಿ + ಕೊಲ್' - ಎಂಬ ಹೆಸರು ಬಂದಿತೆಂಬ ಐತಿಹ್ಯವಿದೆ.

ಹುಲಿ+ ಕೊಲ್ > ಹುಲಿ + ಕಲ್ = ಹುಲಿಕಲ್ ಆಗಿರುವ ಸಾಧ್ಯತೆ ಇದೆ.

ಗಾಣಕಲ್ಲು (ಮಾ) : ಗಾಣ + ಕಲ್ಲು = ಗಾಣಕಲ್ಲು
ಕಲ್ಲಿನ ಗಾಣವನ್ನು ಹೊಂದಿರುವ ಊರು. ಎಣ್ಣೆ ಕಾಳುಗಳ ತೈಲವನ್ನು ತೆಗೆಯಲು ಬಳಸುತ್ತಿದ್ದ ಗಾಣ ವಿದ್ದುದರಿಂದ ಈ ಹೆಸರು ಬಂದಿದೆ.

ಬಂಡೆಬೊಮ್ಮನಹಳ್ಳಿ (ಹೊ) : ಬಂಡೆ + ಬೊಮ್ಮ + ಅ + ಹಳ್ಳಿ = ಬಂಡೆಬೊಮ್ಮನಹಳ್ಳಿ, ಶಿಲಾವಾಚಿ ಹಾಗೂ ಜಾತಿವಾಚಿ ಸ್ಥಳನಾಮವಾಗಿದೆ. ಷಷ್ಠಿ ವಿಭಕ್ತಿ 'ಅ' ಪ್ರತ್ಯಯ ಹೊಂದಿದೆ . ಬಂಡೆ ಇಲ್ಲಿ ನಿರ್ದಿಷ್ಟವಾಗಿ ಬಳಕೆಯಾಗಿದೆ.

ಬಂಡಾಪುರ (ಹೊ) : ಬಂಡ + ಪುರ = ಬಂಡಾಪುರ ಬಂಡೆ - ಕನ್ನಡ ಶಬ್ದವಾಗಿದ್ದು 'ಬಂಡೆ ತೆಲುಗು ಭಾಷೆಯ ಪದವಾಗಿ ಬಳಕೆಯಾಗಿದೆ. ತೆಲುಗು ಭಾಷೆಯ ಪ್ರಭಾವ ಗುರುತಿಸಬಹುದು.

ರಾಳ್ಳ ಕುಂಟೆ (ಹೊ) : ರಾಳ್ಳ + ಕುಂಟೆ = ರಾಳ್ಳಕುಂಟೆ, ರಾಳ್ಳ - ಕಲ್ಲು ಎಂಬರ್ಥ ನೀಡುವ ತೆಲುಗು ಪದ. ಕಟ್ಟೆ ಕಟ್ಟಲು ಕಲ್ಲು ಬಳಸಿರುವ ಕುಂಟೆಯಾಗಿದೆ. ಶಿಲಾವಾಚಿ ಹಾಗ ಜಲವಾಚಿ ಸ್ಥಳನಾಮವಾಗಿದೆ.

## ಪ್ರಾಣಿ - ಪಕ್ಷಿ ವಾಚಿ ಸ್ಥಳನಾಮಗಳು

ಮಾನವನು ತನ್ನ ವಾಸದ ನೆಲೆಗಳಿಗೆ ನಾಮನಿರ್ದೇಶನ ಮಾಡುವಾಗ, ಭೌಗೋಳಿಕ ಅಂಶಗಳ ಜೊತೆಗೆ, ನಿಸರ್ಗದ ಭಾಗವಾದ ಪ್ರಾಣಿ-ಪಕ್ಷಿಗಳ ಹೆಸರುಗಳನ್ನು ವಿಶಿಷ್ಟಾಂಶವಾಗಿ ಬಳಸಿಕೊಂಡಿದ್ದಾನೆ. ಈ ನಿರ್ದಿಷ್ಟಗಳನ್ನು ಭೌಗೋಳಿಕ ಅಂಶಗಳ ಜೊತೆಯಲ್ಲಿ ಹೆಚ್ಚಾಗಿ ಬಳಸಿಕೊಂಡಿದ್ದಾನೆ, ಪೂರ್ವದಲ್ಲಿ ಈ ಸ್ಥಳನಾಮಗಳು ನಿರ್ವಸಿತವಾಗಿದ್ದು ನಂತರದಲ್ಲಿ ವಸತಿ ನೆಲೆಗಳಾಗಿರುವ ಸಾಧ್ಯತೆಯಿದೆ. ವಾರ್ಗಿಕಗಳನ್ನು ಆಧಾರವಾಗಿಟ್ಟುಕೊಂಡು ಇದನ್ನು ನಿರ್ಧರಿಸಬಹುದಾಗಿದೆ ಪ್ರಾಣಿಗೆ ಸಂಬಂಧಪಟ್ಟಂತೆ ನಡೆದ ಘಟನೆಗಳು, ಹೆಚ್ಚಿನ ಸಂಖ್ಯೆಯಲ್ಲಿ ಪ್ರಾಣಿಗಳು ವಾಸಿಸುವ ನೆಲೆಯಿದ್ದಲ್ಲಿ ಅದೇ ಹೆಸರಿನಲ್ಲಿ ಸ್ಥಳನಾಮ ಅಥವಾ ಕ್ಷೇತ್ರನಾಮಗಳನ್ನು ಗುರುತಿಸಲಾಗಿದೆ.

| | |
|---|---|
| ಆನೆಹೊಸ ಹಳ್ಳಿ (ಕ) | ಕೊಕ್ಕರೆ ಹೊಸ ಹಳ್ಳಿ (ಕ) |
| ಕೋಣನ ಗುಂಡಿ (ಕ) | ಕೋಣಸಂದ್ರ (ಕ) |
| ಬಸವಾಪಟ್ಟಣ (ಕ) | ಸಿಂಗಸಂದ್ರ (ಕ) |
| ನಾಯ್ದೊಳ್ಳೆ (ಚ) | ನಾಗಪುರ (ಚ) |
| ಮಂಗಸಂದ್ರ (ದೇ) | ಮೀನುಕುಂಟೆ (ದೇ) |
| ಗೂಳ್ಯನಂದೀ ಗುಡ್ಡ (ದೊ) | ಸಿಂಗಹಳ್ಳಿ (ದೇ) |
| ಬಸವಾಪಟ್ಟಣ (ಮಾ) | ಗೆದ್ದಪಾಳ್ಯ (ದೊ) |
| ಕೋತಿಪುರ (ರಾ) | ಗೆದ್ದಲಹಳ್ಳಿ (ನೆ) |
| ಎತ್ತಿನ ವಡೇರ ಪುರ (ಹೊ) | ಗಜ್ಜಗಾರ ಗುಪ್ಪೆ (ಮಾ) |
| ಚಿಕ್ಕಗುಬ್ಬಿ (ಹೊ) | ಗುಬ್ಬಿ (ಹೊ) |
| ಗೆದ್ದಲಹಳ್ಳಿ ಪುರ (ಹೊ) | ಹೂವಿನ ಆನೆ (ಹೊ) |

## ಪ್ರಾಣಿ-ಪಕ್ಷಿವಾಚಿ ಸ್ಥಳವಾಚಿ ಸ್ಥಳವಾಚಿ ವಿಶ್ಲೇಷಣೆ

ಮೇಕೆದಾಟು (ಕ) : ಅರ್ಕಾವತಿ ಮತ್ತು ಕಾವೇರಿನದಿಗಳ ಸಂಗಮದ ಸ್ಥಳವಾಗಿದೆ. ಕಾವೇರಿ ನದಿಯು ತಮಿಳುನಾಡಿಗೆ ಹರಿಯುವ ಮಾರ್ಗದಲ್ಲಿ, ಅತ್ಯಂತ ಕಿರಿದಾದ ನಿರ್ದಿಷ್ಟ ಸ್ಥಳ. ಮೇಕೆಯು ದಾಟಬಹುದಾದ ಕಿರಿದಾದ ಸ್ಥಳ. ಮೇಕೆದಾಟು - ವಿಶಿಷ್ಟ, ಜಲವಾಚಿ, ಕ್ಷೇತ್ರವಾಚಿಯಾಗಿದೆ.

ನಾಗದೇನಹಳ್ಳಿ (ದೊ) : ನಾಗ-ನಾಗರಹಾವು, ದೈವವಾಚಿ, ನಾಗದೇವರುಗಳಿದ್ದ ದೇವಸ್ಥಾನವನ್ನು ಹೊಂದಿದ್ದ ಸ್ಥಳ, ನಾಗದೇವರಹಳ್ಳಿ > ನಾಗದೇವನಹಳ್ಳಿ ನಾಗ + ದೇವ + ಅ + ಹಳ್ಳಿ = ನಾಗದೇವರಹಳ್ಳಿ > ನಾಗದೇನಹಳ್ಳಿ > ನಾಗ್ದೇನಹಳ್ಳಿ ಆಗಿದೆ. ಬಹುವಚನವು ಏಕವಚನವಾಗಿದೆ 'ವ' ಕಾರಲೋಪವಾಗಿ ದ್ವಿರುಕ್ತಿಯಾಗಿ ಬಳಕೆ

ಬಸವಾಪಟ್ಟಣ (ನೆ) : ಬಸವಾ - ನಿರ್ದಿಷ್ಟ, ಪ್ರಾಣಿವಾಚಿ ಪಟ್ಟಣ - ವಾರ್ಗಿಕ ಬಸವ = ವೃಷಭ, ಶಿವನವಾಹನ 'ನಂದಿ'ಯ ಹೆಸರಿನ ಊರಾಗಿರುವ ಸಾಧ್ಯತೆ. ಬಸವಣ್ಣನವರ ಹೆಸರಿನ ಊರಾಗಿರುವ ಸಾಧ್ಯತೆ ಇದ್ದು, ವೀರಶೈವ ಧರ್ಮ ಸೂಚಿಸುವ ಸ್ಥಳನಾಮವಾಗಿರುವ ಸಾಧ್ಯತೆಯೂ ಇದೆ.

ಹುಲ್ಕುಂಟೆ (ದೊ) : ಹುಲಿಕುಂಟೆ > ಹುಲ್ಕುಂಟೆ, 'ಹುಲಿ' ನಿರ್ದಿಷ್ಟ ಪ್ರಾಣಿವಾಚಿ,

ಕುಂಟೆ -ವಾರ್ಗಿಕ, ಜಲವಾಚಿ

ನರಸಿಂಹ ಎಂಬ ಬೇಟೆಗಾರನೊಬ್ಬನು, ಕಾಡಿನ ಹುಲಿಗಳು ನೀರು ಕುಡಿಯಲು ಕುಂಟೆ ಬಳಿ ಬಂದಾಗ ಬೇಟೆಯಾಡಿ ಕೊಂದ ನೆನಪಿಗೆ 'ಹುಲಿಕುಂಟೆ' ಹೆಸರು ಬಂದಿದೆ.

ಗೆಜ್ಜಗಾರಗುಪ್ಪೆ (ಮಾ) : ಗಜಪುರಿ > ಗೆಜ್ಜಗಾರಗುಪ್ಪೆ, ಗಜ - ಪ್ರಾಣಿವಾಚಿ, ನಿರ್ದಿಷ್ಟ, ಪುರಿ - ವಾರ್ಗಿಕ, ಪುರ > ಪುರಿ ಆಗಿದೆ.

ಗೆಜ್ಜೆಕಾರ > ಗೆಜ್ಜಗಾರ - ಕುಣಿಯುವ, ನೃತ್ಯಮಾಡುವವ್ಯಕ್ತಿ ವಾಚಿಪದ.

ಕುಪ್ಪೆ - ವಾರ್ಗಿಕ, ದಿಣ್ಣೆ ತೆವರು ಎಂಬರ್ಥಗಳಿವೆ. ವಿದ್ಯಾರಾಜ ಎನ್ನುವ ವಿದ್ವಾಂಸ ಜಹಗೀರು ಪಡೆದ ಗ್ರಾಮ. ಆನೆಯನ್ನು ಹಿಂಬಾಲಿಸಿ, ಅದು ನಿಂತ ಸ್ಥಳವನ್ನೆ ಜಹಗೀರು ಪಡೆದದ್ದರಿಂದ 'ಗಜಪುರಿ' ಎಂಬಹೆಸರು ಬಂದಿದೆ.

ಹುಲಿಕಲ್ (ಮಾ) : ಹುಲಿಕೊಲ್ಲು < ಹುಲಿಕಲ್ಲು < ಹುಲಿಕಲ್ ಆಗಿದೆ.
ಹುಲಿ - ನಿರ್ದಿಷ್ಟ ಪ್ರಾಣಿ ವಾಚಿ ಕೊಲ್ಲು - ಕ್ರಿಯಾಪದ,
ಕೊಲ್ಲು > ಕಲ್ಲು > ಕಲ್ ಆಗಿದೆ. ಕಲ್ > ಶಿಲಾವಾಚಿ ಆಗಿದೆ.

ಸನ್ಯಾಸಿಯೊಬ್ಬನ ಹೋರಿಗಳ ಮೇಲೆ ಹುಲಿಯು ಎರಗಿದಾಗ ಕೊಂಬಿನಿಂದ ತಿವಿದು ಹುಲಿಯನ್ನು ಕೊಂದದ್ದರಿಂದ 'ಹುಲಿಕೊಲ್' ಕ್ಷೇತ್ರನಾಮವಾಯಿತು. ಕ್ರಿ.ಶ. ೧೩.೧೦ ರಲ್ಲಿ ಹೊಯ್ಸಳ ರಾಜನಿಂದ ಗ್ರಾಮ ನಿರ್ಮಾಣವಾಯಿತು ಎಂಬ ಇತಿಹಾಸವಿದೆ.

ಹೆಗ್ಗುಂದ (ನೆ) : ಪಿರಿಯ + ಕುಂದ > ಪೆರ್ಗುಂದ > ಹೆಗ್ಗುಂದ ಆಗಿದೆ.
ಕುಂದ - ಎತ್ತರದ ಭೂಪ್ರದೇಶ.
ಪಿರಿಯ, ಹಿರಿಯ - ವಿಶೇಷಣ ಸೇರಿದೆ, ತಪ್ಪು ಗ್ರಹಿಕೆಯಿಂದ ಸಂಸ್ಕೃತೀಕರಣಗೊಂಡಿದ್ದು ಹೆಗ್ಗುಂದ < ಹಯಗುಂದ ಆಗಿದ್ದು ಬಳಕೆಯಲ್ಲಿಲ್ಲ, ಲವಕುಶರು, ಶ್ರೀರಾಮನ ಯಜ್ಞಾಶ್ವವನ್ನು ಕಟ್ಟಿ ಹಾಕಿದರೆಂಬ ಐತಿಹ್ಯವಿದೆ.

ತಡಿಕವಾಗಿಲು (ರಾ) : ೧. ತಡಿಕೆ - ಬಿದಿರಿನತಡೆ, ವಾಗಿಲು <ಬಾಗಿಲು,
ತಡಿಕೆ - ವಾಗಿಲು - ದ್ವಿರುಕ್ತಿ ಪದಗಳಾಗಿದೆ. ಮಾಗಡಿ ಕಡೆಯಿಂದ ಬಂದ ವಲಸೆಗಾರರನ್ನು ಇಲ್ಲಿನ ಕೋಗಿಲೆಗಳು ತಡೆದು ನಿಲ್ಲಿಸಿತಂತೆ. ಕೋಗಿಲೆಗಳು ತಡೆದದ್ದರಿಂದ 'ತಡೆಕೋಗಿಲೆ' ಯಾಗಿದೆ - ಎಂಬ ಐತಿಹ್ಯವಿದೆ. ತಡೆಕೋಗಿಲೆ > ತಡಕೆ ಕೋಗಿಲು > ತಡಿಕೆವಾಗಿಲು ಪಕ್ಷಿ ವಾಚಿಯಾಗಿದೆ - ಆದರೆ ಈ ಐತಿಹ್ಯದಿಂದ ಹೆಸರಿನ ನಿಷ್ಪತ್ತಿ ಸಿಗುವುದಿಲ್ಲ, ಅಸ್ಪಷ್ಟವಾಗಿದೆ.

೨. ತಡಿಕೆ +ಬಾಗಿಲು ದ್ವಿರುಕ್ತಿಯಾಗಿ ಬಳಕೆಯಾಗಿದ್ದು ಶತ್ರುಗಳನ್ನು ತಡೆಯಲು ಸೂಕ್ತವಾದ, ಕಿರಿದಾದ ಸ್ಥಳವಾಗಿದ್ದುದರಿಂದ, ತಡಿಕೆಬಾಗಿಲು < ತಡಿಕೆಬಾಗಿಲು > ತಡಿಕೆವಾಗಿಲು ಆಗಿರುವ ಸಾಧ್ಯತೆ ಇದೆ.

ಕೊಕ್ಕರೆ ಪಾಡಿಯ (ದೇ) : ಕೊಕ್ಕರೆ ಪಕ್ಷಿವಾಚಿ - ವಿಶಿಷ್ಟ, ಪಾಳೆಯ > ಪಾಡಿಯ - ಬೀಡು ಬಿಟ್ಟಿರುವ ಸ್ಥಳ. ಕೊಕ್ಕರೆಗಳು ಹೆಚ್ಚಾಗಿ ಬೀಡುಬಿಟ್ಟಿದ್ದ ಸ್ಥಳವಾದ್ದರಿಂದ, ಕೊಕ್ಕರೆ ಪಾಳೆಯ > ಕೊಕ್ಕರೆ ಪಾಡಿಯ ಆಗಿದೆ. ಳ್ > ಡ್ ಆಗಿದೆ. ಳ್ - ಹಿಂದಿಭಾಷೆಯ ಪ್ರಭಾವದಿಂದ 'ಡ್' ಆಗಿ ಬಳಕೆಯಾಗಿರುವ ಸಾಧ್ಯತೆ ಇದೆ.

---

ಅಡಿ ಟಿಪ್ಪಣಿಗಳು

೧. ಡಾ। ಅರ್ಕೆಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೨೧
೨. ಡಾ। ಅರ್ಕೆಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೩೪
೩. ಡಾ। ಗೋಪಾಲಕೃಷ್ಣ ವಿ. ಸ್ಥಳನಾಮ ಅಧ್ಯಯನಗಳು, ಪುಟ ೧೫
೪. ಬೊಮ್ಮೇಗೌಡ , ಚನ್ನಪಟ್ಟಣ ತಾಲ್ಲೂಕು ಸ್ಥಳನಾಮಗಳು (ಅಪ್ರಕಟಿತ ಎಂ.ಫಿಲ್ ನಿಬಂಧ) ಬೆಂಗಳೂರು ವಿಶ್ವವಿದ್ಯಾಲಯ, ಪುಟ ೩೯
೫. ಕೆಮ್ತೂರು ರಘುಪತಿ ಭಟ್ಟ, ತುಳುನಾಡಿನ ಸ್ಥಳನಾಮಗಳು, ಪುಟ ೪೬
೬. ಪ್ರಸಾದ್ ರಾವ್ ಟಿ.ಎಸ್.ವಿ, ವೆರಿಟೆಬಲ್ ಒರಿಯಂಟೆಡ್ ತೆಲುಗು ಪ್ಲೇಸ್ ನೇಮ್ಸ್, ಭಾರತೀಯ ಸ್ಥಳನಾಮ ಸಂಸ್ಥೆ ಪ್ರಕಟಣೆ, ಸಂಪುಟ - ೨ ಪುಟ ೨೬
೭. ವೆಂಕಟೇಶಪ್ಪ ಎಸ್. ಅರ್ಕಾವತಿ, ಕ.ಸಾ.ಪ. ಪ್ರಕಟಣೆ, ಪುಟ ೫೨೮

# ೭

# ಸಂಕೀರ್ಣ ಸ್ಥಳನಾಮಗಳು

ಸ್ಥಳನಾಮಗಳ ಅಧ್ಯಯನದಲ್ಲಿ, ನಿರ್ದಿಷ್ಟ ವಿಷಯಗಳಿಗೆ ಅನುಸಾರವಾಗಿ ವರ್ಗೀಕರಣ ಮಾಡಿಕೊಳ್ಳುವಿಕೆ ಸಾಮಾನ್ಯವಾಗಿದೆ. ನಿರ್ದಿಷ್ಟ ವಿಷಯಗಳಲ್ಲಿ ವೈವಿಧ್ಯತೆ ಕಂಡುಬರುತ್ತದೆ. ಇಂತಹ ವೈವಿಧ್ಯ ಲಕ್ಷಣಗಳ ಆಧಾರದಿಂದ ವರ್ಗೀಕರಣ ಮಾದರಿಯನ್ನು ಸಿದ್ಧಪಡಿಸಲಾಗುತ್ತದೆ. ಕೆಲವು ಸ್ಥಳನಾಮಗಳನ್ನು ಈ ರೀತಿ ಒಂದು ನಿರ್ದಿಷ್ಟ ಗುಂಪಿಗೆ ಸೇರಿಸಲು ಸಾಧ್ಯವಾಗುವುದಿಲ್ಲ, ಇದಕ್ಕೆ ಕಾರಣವೆಂದರೆ, ಇದರಲ್ಲಿ ಬಳಕೆಯಾಗಿರುವ 'ವಿಶಿಷ್ಟಗಳು ಪ್ರತ್ಯೇಕವಾದ ಲಕ್ಷಣವನ್ನು ಹೊಂದಿರುತ್ತದೆ. ಇಂತಹ ವೈವಿಧ್ಯ ಲಕ್ಷಣಗಳನ್ನೊಳಗೊಂಡಿರುವ ಸ್ಥಳನಾಮಗಳನ್ನು, ಅಧ್ಯಯನ ದೃಷ್ಟಿಯಿಂದ 'ಸಂಕೀರ್ಣ ಸ್ಥಳನಾಮ'ಗಳೆಂದು ಗುರುತಿಸಲಾಗಿದೆ.

## ೭.೧ ಸಾಪೇಕ್ಷ ಸ್ಥಳನಾಮಗಳು

ಮಾನವನು ನೆಲೆನಿಂತ ಸ್ಥಳದಲ್ಲಿ, ಕಾಲಾಂತರದಲ್ಲಿ ಜನಸಂಖ್ಯೆ ಅಧಿಕವಾಗುವಿಕೆ ಸಾಮಾನ್ಯವಾಗಿರುತ್ತದೆ. ಜನಸಂಖ್ಯೆಯ ಹೆಚ್ಚಳವಾದಂತೆ, ಸ್ಥಳನಾಮಗಳ ಸಂಖ್ಯೆಯಲ್ಲಿಯೂ ಹೆಚ್ಚುವರಿಯಾಯಿತು. ಊರು ಸರ್ವಾಂಗೀಣ ಅಭಿವೃದ್ಧಿ ಹೊಂದುತ್ತಿದ್ದಂತೆ, ಅನಿವಾರ್ಯವಾಗಿ ಸಾಮಾಜಿಕ ವ್ಯವಸ್ಥೆಯನ್ನು ಸುಧಾರಿಸಿಕೊಳ್ಳಬೇಕಾಗುತ್ತದೆ.[೧] ಈ ನಿಟ್ಟಿನಲ್ಲಿ ಊರಿನಲ್ಲಿನ ಜನರು ಸ್ಥಳಾಂತರವಾಗುವ ಸಾಧ್ಯತೆ ಇದ್ದು ಅನುಕೂಲಕರವಾದ ಮತ್ತೊಂದು ಭೂ ಪ್ರದೇಶದಲ್ಲಿ ನೆಲೆ ನಿಲ್ಲುತ್ತಾರೆ. ಈ ಹೊಸ ನೆಲೆಗೆ ಸೇರಿದ ಜನರು, ಮೂಲ ಸ್ಥಳದಿಂದ ಬೇರ್ಪಡೆಯಾಗಿದ್ದರೂ, ತಮ್ಮ ಊರಿನ ಬಗ್ಗೆ ಅಭಿಮಾನ ಹಾಗೂ ಗೌರವವನ್ನು ಹೊಂದಿರುವುದು ಸಹಜವಾಗಿರುತ್ತದೆ. ಈ ಸಹಜತೆಯಿಂದಲೇ ತಮ್ಮ ಹೊಸ ನೆಲೆಗೆ, ಹಿಂದಿನ ಊರಿನ ಹೆಸರನ್ನೇ ಮುಂದುವರಿಸಿರುವ ಸಂಭವವಿರುತ್ತದೆ. ಹೀಗೆ ಮೂಲದ ಊರಿನ ಹೆಸರನ್ನು ಹೊಸ ನೆಲೆಗೆ ಸಾಪೇಕ್ಷವಾದ ಹೆಸರನ್ನೇ ನಾಮಕರಣ ಮಾಡಿಕೊಂಡಾಗ, ಒಂದೇ ರೀತಿಯ ಹೆಸರು ಗೊಂದಲವನ್ನುಂಟುಮಾಡುವುದು ಸಹಜ. ಈ ಗೊಂದಲವನ್ನು ತಪ್ಪಿಸುವ ಉದ್ದೇಶದಿಂದ ಮೂಲ ಹೆಸರಿನಲ್ಲಿ ಪೂರ್ವಪದವಾಗಿ ಕೆಲವು ವಿಶೇಷಣಗಳನ್ನು ಬಳಸಿಕೊಂಡಿರುವುದು ಮಾನವನ ಬುದ್ಧಿವಂತಿಕೆಯನ್ನು ಸೂಚಿಸುತ್ತದೆ.[೨] ಈ ವಿಶೇಷಣಗಳನ್ನು ಎಲ್ಲಾ ಪ್ರದೇಶಗಳಲ್ಲಿಯೂ ಗುರುತಿಸಬಹುದಾಗಿದೆ. ಈ ರೀತಿಯ ವಿಶೇಷಣಗಳ ಬಳಕೆಗೆ ಮಾನವನ ಜ್ಞಾನದ ವೈಶಾಲ್ಯತೆಯೂ ಕಾರಣವಾಗಿರುವುದು ಅತ್ಯಂತ ಮುಖ್ಯವಾದ ಅಂಶವಾಗಿದೆ. ಈ ಊರುಗಳ

ಪ್ರತ್ಯೇಕೀಕರಣಕ್ಕೆ ಬಳಸಿರುವ ವಿಶೇಷಣಗಳು ಕೆಳಕಂಡಂತೆ ಇವೆ. ಹೊಸ - ಹಳೆ, ಕಿರಿಯ - ಹಿರಿಯ, ಚಿಕ್ಕ - ದೊಡ್ಡ ಮೇಲಿನ - ಕೆಳಗಿನ ಮುಂತಾದ ವಿಶೇಷಣ ಸೂಚಕ ಪದಗಳ ಜೊತೆಗೆ ವಿವಿಧ ದಿಕ್ಕುಗಳು, ಭೂಸ್ಥಿತಿ ಸೂಚಿಸುವ ಸಾಪೇಕ್ಷ ಸ್ಥಳನಾಮಗಳಲ್ಲಿ ಸೇರಿವೆ.

ಸಾಪೇಕ್ಷ ಸ್ಥಳನಾಮಗಳು ಸಾರ್ವಕಾಲಿಕ ಅಸ್ತಿತ್ವವನ್ನು ಹೊಂದಿರುತ್ತದೆ ಎಂದು ತಿಳಿಯಲು ಸಾಧ್ಯವಿಲ್ಲ. ಕೆಲವೊಮ್ಮೆ ಒಂದು ಊರು ತನ್ನ ಹೆಸರನ್ನು ಬದಲಾಯಿಸಿಕೊಂಡಿರಬಹುದು ಅಥವಾ ಊರೇ ಇಲ್ಲದಿರಬಹುದು. ವಿಶೇಷಣಗಳನ್ನು ಪೂರ್ವಪದದಲ್ಲಿ ಹೊಂದಿರುವ ಸ್ಥಳನಾಮಗಳು ವಾಚ್ಯಾರ್ಥವನ್ನು ಯಥಾವತ್ತಾಗಿ ನೀಡದಿರಬಹುದು.

ಉದಾ : ದೊಡ್ಡ - ಸಣ್ಣ ವಿಶೇಷಣಗಳು ಗಾತ್ರವನ್ನು ಕ್ವಚಿತ್ತಾಗಿ ನಿರ್ದೇಶಿಸದೇ ಇರಬಹುದು.

ಚಿಕ್ಕಬಳ್ಳಾಪುರ ಎಂದಾಗ ಮನಸ್ಸಿಗೆ ಬರುವ ಆಲೋಚನೆ ದೊಡ್ಡಬಳ್ಳಾಪುರ ಎಂದಾಗ ಸಂಪೂರ್ಣವಾಗಿ ಭಿನ್ನವಾಗುತ್ತದೆ. ಈ ಊರುಗಳು ವಿಶೇಷಣಗಳಿಗೆ ಅನ್ವರ್ಥವಾಗಿಲ್ಲದಿರುವುದು ಇಲ್ಲಿ ಗುರುತಿಸಬಹುದು.

### ೭.೧.೧ ಸಾಪೇಕ್ಷ ಸ್ಥಳನಾಮಗಳು - ಪರಿಮಾಣ ಸೂಚಕ

ಸ್ಥಳನಾಮಗಳಲ್ಲಿನ 'ನಿರ್ದಿಷ್ಟ'ಗಳಿಗೆ ಅನುಗುಣವಾಗಿ ಊರುಗಳು ಪ್ರತ್ಯೇಕ ಗುಂಪಿಗೆ ಸೇರುವುದು ಸಹಜವಾದುದು. ಕೆಲವು ಸಂದರ್ಭದಲ್ಲಿ 'ನಿರ್ದಿಷ್ಟ'ಗಳು ಒಂದೇ ಇದ್ದರೂ, ಪೂರ್ವಪದದಲ್ಲಿರುವ ವಿಶೇಷವು ಒಂದು ಊರನ್ನು ಮತ್ತೊಂದರಿಂದ ಬೇರ್ಪಡಿಸುವ ಗುಣ ಹೊಂದಿರುತ್ತದೆ. 'ಪರಿಮಾಣ' ಸೂಚಕ ವಿಶೇಷಣವು ಸ್ಥಳನಾಮಗಳಲ್ಲಿ ಈ ಪ್ರತ್ಯೇಕತೆಯನ್ನು ಉಂಟುಮಾಡುತ್ತವೆ., ಇದಕ್ಕೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳಲ್ಲಿ ಅನೇಕ ಉದಾಹರಣೆಗಳನ್ನು ನೀಡಿಬಹುದಾಗಿದೆ. ಹಿರಿಯ (ಹಿರೇ) ಕಿರಿಯ (ಕಿರೇ), ದೊಡ್ಡ - ಚಿಕ್ಕ ಮುಂತಾದ ವಿಶೇಷಣಗಳು ಊರಿನ ಗಾತ್ರವನ್ನು ಸೂಚಿಸುತ್ತಿರುತ್ತವೆ, ಸಾಮಾನ್ಯವಾಗಿ ಇವುಗಳು ಜೋಡಿಗ್ರಾಮಗಳಾಗಿದ್ದು ಸಾಪೇಕ್ಷ ಸ್ಥಳನಾಮಗಳಾಗಿರುತ್ತವೆ. ಒಂದೇ ಹೆಸರಿನ ಎರಡು ಊರುಗಳಿದ್ದಲ್ಲಿ, ಇವೆರಡೂ ಎರಡು ವೈರುಧ್ಯ ಗುಣವಿರುವ ವಿಶೇಷಣಗಳನ್ನು ಪೂರ್ವಪದವಾಗಿಟ್ಟುಕೊಂಡಿರುತ್ತದೆ. ನಿರ್ದಿಷ್ಟ ಮತ್ತು ಸಾಮಾನ್ಯ ವಾರ್ಗಿಕಗಳಲ್ಲಿ ಬದಲಾಣೆಗಳೇನೂ ಇರುವುದಿಲ್ಲ.

ಉದಾ : ಚಿಕ್ಕ ಸನ್ನೆ - ದೊಡ್ಡ ಸನ್ನೆ (ದೇ) (ಚಿಕ್ಕಸೊಣ್ಣೆ - ದೊಡ್ಡ ಸೊಣ್ಣೆ)

ಚಿಕ್ಕ ಬೆಳವಂಗಲ - ದೊಡ್ಡ ಬೆಳವಂಗಲ (ದೊ)

ಚಿಕ್ಕ ಮೂಡಿಗೆರೆ - ದೊಡ್ಡ ಮೂಡಿಗೆರೆ (ಮಾ)

ಚಿಕ್ಕ ಮನಗುಡ್ಡೆ - ದೊಡ್ಡಮನಗುಡ್ಡೆ (ರಾ)

ಚಿಕ್ಕ ಮರಳವಾಡಿ - ದೊಡ್ಡ ಮರಳವಾಡಿ (ಕ)

ಚಿಕ್ಕೇನಹಳ್ಳಿ - ದೊಡ್ಡನಹಳ್ಳಿ (ಚ)

ಚಿಕ್ಕ ಅರಳಗೆರೆ - ದೊಡ್ಡ ಅರಳಗೆರೆ (ಹೊ)

### ದೊಡ್ಡ ಬೆಲೆ (ನೆ)

ಮೇಲಿನ ಪಟ್ಟಿಯಲ್ಲಿ ನೆಲಮಂಗಲ ತಾಲ್ಲೂಕಿನ 'ದೊಡ್ಡಬೆಲೆ' ಸ್ಥಳನಾಮದಲ್ಲಿ 'ದೊಡ್ಡ' ವಿಶೇಷಣಕ್ಕೆ ವೈರುಧ್ಯವಾದ 'ಚಿಕ್ಕ' ವಿಶೇಷಣ ಹೊಂದಿರುವ ಅದೇ 'ನಿರ್ದಿಷ್ಟ ಹೊಂದಿರುವ ಸ್ಥಳನಾಮ ಇಲ್ಲ. ಆದುದರಿಂದ ಎಲ್ಲಾ ಸಂದರ್ಭಗಳಲ್ಲಿಯೂ ವೈರುಧ್ಯ ಗುಣವಿರುವ ವಿಶೇಷಣವನ್ನು ಹೊಂದಿರುವ ಸ್ಥಳನಾಮಗಳನ್ನು ಗುರುತಿಸಲು ಸಾಧ್ಯವಿರುವುದಿಲ್ಲ. ಈ ರೀತಿಯ ಪರಿಮಾಣ ಸೂಚಕ ವಿಶೇಷಣಕ್ಕೆ ಕಾರಣವೆಂದರೆ, ಆ ಭೂಪ್ರದೇಶದ ಯಾವುದಾದರೂ ಗುಣವಿರಬಹುದು ಅಥವಾ ಪ್ರಾಕೃತಿಕ ಕಾರಣ ಇರಬಹುದಾಗಿದೆ. ಕೆಲವು ಸಂದರ್ಭದಲ್ಲಿ ವೈರುಧ್ಯ ಗುಣದ 'ವಿಶೇಷಣ' ಹೊಂದಿರುವ ಸ್ಥಳನಾಮಗಳಲ್ಲಿ ಕೆಲವೊಂದು ತಮ್ಮ ಅಸ್ತಿತ್ವ ಕಳೆದುಕೊಂಡಿರುವ ಸಾಧ್ಯತೆಯೂ ಇರುತ್ತದೆ.

ದೊಡ್ಡ ಬೆಲೆ : ಹೆಚ್ಚು ಎತ್ತರವಾಗಿ ಬೇಲಿ ಬೆಳೆಯುತ್ತಿದ್ದ ಸ್ಥಳವಾದ್ದರಿಂದ 'ದೊಡ್ಡ ಬೇಲಿ' ಎನ್ನುವ ಹೆಸರು ಬಂದಿದ್ದು ಕಾಲಾಂತರದಲ್ಲಿ ಬೇಲಿ > ಬೆಲೆ ಎಂಬ ಪದವಾಗಿ ಸ್ಥಿತ್ಯಂತರಗೊಂಡಿರುವ ಸಾಧ್ಯತೆ ಇದೆ.

ದೊಡ್ಡ = ಎತ್ತರ, ಬೆಲೆ > ಬೇಲಿ.

### ಚಿಕ್ಕ ಸನ್ನೆ - ದೊಡ್ಡ ಸನ್ನೆ (ದೇ) (ಚಿಕ್ಕ ಸೊಣ್ಣೆ - ದೊಡ್ಡ ಸೊಣ್ಣೆ)

ಸನ್ನೆ > ಸೊಣ್ಣೆ = ಕೆರೆ ಎನ್ನುವ ಅರ್ಥನೀಡುತ್ತದೆ. ಎರಡು ಕೆರೆಗಳಿದ್ದು ಸಣ್ಣ ಮತ್ತು ದೊಡ್ಡ ಕೆರೆಗಳನ್ನು ಸೂಚಿಸುತ್ತದೆ. ಎರಡೂ ಕೆರೆಗಳ ಬಳಿ ಪ್ರತ್ಯೇಕ ಊರುಗಳಿದ್ದು 'ಚಿಕ್ಕ', 'ದೊಡ್ಡ' ಎಂಬ ವಿಶೇಷಣಗಳನ್ನು ಬಳಸಿಕೊಂಡಿದ್ದಾರೆ.

### ಚಿಕ್ಕ ಮೂಡಿಗೆರೆ - ದೊಡ್ಡ ಮೂಡಿಗೆರೆ.

ಮೂಡು > ಮೂಡಿ - ಉದಯ ವಾಗುವಿಕೆ ಸೂರ್ಯನ ಉದಯವಾಗುವಿಕೆ, ಮೂಡಣ ದಿಕ್ಕು ಮೂಡಣದಿಕ್ಕಿನಲ್ಲಿ ಕೆರೆ ಇರುವಿಕೆ.

ಮೂಡಣ > ಮೂಡು + ಕೆರೆ > ಮೂಡುಕೆರೆ > ಮೂಡುಗೆರೆ > ಮೂಡಗೆರೆ > ಮೂಡಿಗೆರೆ ಆಗಿರುವ ಸಾಧ್ಯತೆ ಇದೆ.

'ಕ' > 'ಗ' ಆದೇಶವಾಗಿದೆ

'ಮೂಡಿಗೆರೆ' ಸ್ಥಳನಾಮಕ್ಕೆ ಚಿಕ್ಕ - ದೊಡ್ಡ ಪರಿಮಾಣ ವಾಚಕ ವಿಶೇಷಣಗಳು ಸೇರಿ ಪ್ರತ್ಯೇಕ ಊರುಗಳಾಗಿವೆ.

**ಚಿಕ್ಕ ಬೆಳವಂಗಲ - ದೊಡ್ಡ ಬೆಳವಂಗಲ (ದೊ)**

ಬೆಳ್ - ನೀರಿನ ಆಧಿಕ್ಯ ಸೂಚಕ ಪದ

ಮಂಗಲ - ನೀರುಳ್ಳ ಪ್ರದೇಶ, ಬ್ರಾಹ್ಮಣ ವಾಸದ ಪ್ರದೇಶ , ವ್ಯವಸಾಯಕ್ಕೆ ಯೋಗ್ಯವಾದ ಭೂ ಪ್ರದೇಶ

ಬೆಳ್ +ಮಂಗಲ = ಬೆಳಮಂಗಲ ನೀರಿನ ಒರತೆಯುಳ್ಳ ಪ್ರದೇಶ ಎಂಬುದು ಸಮಂಜಸವಾಗಿದೆ.

ಬೆಳಮಂಗಲ < ಬೆಳವಂಗಲವಾಗಿದ್ದು 'ಮ್' ಅನುನಾಸಿಕ ವ್ಯಂಜನವು ಲೋಪವಾಗಿ 'ವ್'ಕಾರ ಬಂದಿದೆ.

ಈ ಸ್ಥಳನಾಮಗಳಿಗೆ ಚಿಕ್ಕ - ದೊಡ್ಡ ವಿಶೇಷಣಗಳು ಸೇರಿ ಪ್ರತ್ಯೇಕ ಊರುಗಳಾಗಿದ್ದು, ಈ ಊರಿಗೆ ಸೇರಿರುವ ವಿಶೇಷಣಗಳು ಅನ್ವರ್ಥವಾಗಿದ್ದು ಗಾತ್ರದಲ್ಲಿಯೂ ಇವೆರಡೂ ಭಿನ್ನವಾಗಿಯೇ ಇದೆ.

**ಚಿಕ್ಕಮನಗುಡ್ಡೆ - ದೊಡ್ಡ ಮನಗುಡ್ಡೆ (ರಾ)**

ಮನಗುಡ್ಡೆ > ಮಾನ್ಯಗುಡ್ಡೆಯಿಂದ ರೂಪಿತವಾದುದಾಗಿದೆ.

ಚಿಕ್ಕ -ದೊಡ್ಡ ಪೂರ್ವಪದಗಳು ಊರನ್ನು ಪ್ರತ್ಯೇಕಿಸಲು ಬಳಸಿಕೊಂಡಿರುವ ವಿಶೇಷಣಗಳಾಗಿವೆ.

**ಚಿಕ್ಕಮರಳವಾಡಿ - ದೊಡ್ಡ ಮರಳವಾಡಿ (ಕ)**

ಮರಳ್ > ಮರಲ್ > ಮಣಲ್ > ಮರಳು

ಮರಳಿನಿಂದ ಆವೃತ್ತವಾದ ಪ್ರದೇಶ

ವಾಡಿ - ಸಾಮಾನ್ಯ ವಾರ್ಗಿಕವಾಗಿ ಬಳಕೆ

ಮರಳು +ವಾಡಿ = ಮರಳುವಾಡಿ > ಮರಳವಾಡಿ ಆಗಿದೆ. ಚಿಕ್ಕ - ದೊಡ್ಡ ಪೂರ್ವಪದಗಳು, ಎರಡು ಸ್ಥಳನಾಮಗಳನ್ನು ಪ್ರತ್ಯೇಕಿಸಿಕೊಳ್ಳಲು ಬಳಸಿಕೊಂಡಿರುವ ವಿಶೇಷಣಗಳಾಗಿವೆ.

**ಚಿಕ್ಕ ಅರಳಗೆರೆ - ದೊಡ್ಡ ಅರಳಗೆರೆ (ಹೊ)**

ಅರಳಗೆರೆ — ಸ್ಥಳನಾಮದಲ್ಲಿ 'ಅರಳು' ವಿಶಿಷ್ಟವೂ 'ಕೆರೆ' ಎಂಬ ಸಾಮಾನ್ಯವಾರ್ಗಿಕವೂ ಇದ್ದು, 'ಅರಳು' ಎಂಬ ಪದವು ಅರಳಿಮರ (ಅಶ್ವತ್ಥ ವೃಕ್ಷ) ಅಥವಾ ಅರಳೇಗಿಡ (ಹತ್ತಿ ಗಿಡ) ವೃಕ್ಷವಾಚಿ ವಿಶಿಷ್ಟವಾಗಿದೆ. ಕೆರೆ - ವಾರ್ಗಿಕ ಬಳಕೆಯಾಗಿದೆ.

ಚಿಕ್ಕ - ದೊಡ್ಡ ವಿಶೇಷಣಗಳು ಸೇರಿ ಪ್ರತ್ಯೇಕ ಊರುಗಳು ನಿರ್ಮಾಣಗೊಂಡಿವೆ.

ಚಿಕ್ಕೇನಹಳ್ಳಿ (ತ) — 'ಚಿಕ್ಕ' ಎಂಬ 'ವಿಶಿಷ್ಟವೂ 'ಹಳ್ಳಿ' ವಾರ್ಗಿಕವೂ ಸೇರಿ ನಿರ್ಮಾಣವಾಗಿರುವ ಸ್ಥಳನಾಮವಾಗಿದೆ. 'ಚಿಕ್ಕ' ಎಂಬುದು ವ್ಯಕ್ತಿ ನಾಮವಾಚಿಯಾಗಿದ್ದು, 'ಚಿಕ್ಕ' ಎಂಬ ಹೆಸರಿನಲ್ಲಿ ಊರು ನಿರ್ಮಾಣವಾಗಿದೆ. ಇದಕ್ಕೆ ವೈರುಧ್ಯ ವಿಶೇಷಣ ಹೊಂದಿರುವ ಸ್ಥಳನಾಮವನ್ನು ಗುರುತಿಸಲು ಸಾಧ್ಯವಿಲ್ಲ.

ಹೀಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪರಿಮಾಣ ಸೂಚಕ ಪೂರ್ವಪದಗಳನ್ನು ಸಾಪೇಕ್ಷ ಸ್ಥಳನಾಮಗಳಲ್ಲಿ ಗುರುತಿಸಬಹುದಾಗಿದೆ.

### ೭.೧.೨ ಸಾಪೇಕ್ಷ ಸ್ಥಳನಾಮಗಳು - ಪೌರ್ವಾಪರ್ಯ ಸೂಚಕ

ಪೌರ್ವಾಪರ್ಯವು ಸ್ಥಳನಾಮಗಳು ಸೃಷ್ಟಿಯಾದ ಕಾಲವನ್ನು ಸೂಚಿಸುವ ವಿಶೇಷಣವಾಗಿದೆ. ಪೂರ್ವದಲ್ಲಿದ್ದ ಹಾಗೂ ನಂತರದಲ್ಲಿ ಸೃಷ್ಟಿಯಾದ ಊರುಗಳನ್ನು ಪ್ರತ್ಯೇಕಿಸಿಕೊಳ್ಳಲು, ಸಾಮಾನ್ಯವಾಗಿ ಹಳೆ - ಹೊಸ ಎಂಬ ಎರಡು ಕಾಲ ನಿರ್ಣಾಯಕ ವಿಶೇಷಣ ಬಳಸಿಕೊಂಡಿರುವ ಸ್ಥಳನಾಮಗಳನ್ನು ಎಲ್ಲಾ ಪ್ರದೇಶಗಳಲ್ಲಿಯೂ ಗುರುತಿಸಬಹುದು.

ಒಂದು ಊರಿನಲ್ಲಿ ವಾಸವಿದ್ದ ಕೆಲ ಜನರು, ತಮಗೆ ಅನುಕೂಲಕರವಾದ ಮತ್ತೊಂದು ಸ್ಥಳಕ್ಕೆ ವಲಸೆ ಬಂದು ನೆಲೆಸುವುದು ಸಾಮಾನ್ಯ ವಿಷಯವಾಗಿದೆ. ಈ ರೀತಿ ಹೊಸಸ್ಥಳಕ್ಕೆ ಬಂದು ನೆಲೆಸಿದಾಗ, ಈ ನೆಲೆಯನ್ನು ಗುರುತಿಸಿಕೊಳ್ಳುವ ದೃಷ್ಟಿಯಿಂದ, 'ಹಳೆ'ಯ ಊರಿನ ಹೆಸರಿನಿಂದ ತಮ್ಮ ಊರನ್ನು ಪ್ರತ್ಯೇಕಿಸಿಕೊಳ್ಳಲು 'ಹೊಸ' ಎನ್ನುವ ವಿಶೇಷಣ ಬಳಸಿಕೊಂಡಿರುವುದುಂಟು 'ಹಳೆ – ಹೊಸ' ಹೊಂದಿರುವ ಸ್ಥಳನಾಮಗಳಲ್ಲಿ, ಇವುಗಳು 'ವಿಶಿಷ್ಟ' ಹಾಗೂ 'ವಿಶೇಷಣ'ವಾಗಿ ಕಾರ್ಯ ನಿರ್ವಹಿಸುತ್ತಿರುತ್ತವೆ. ಪ್ರತ್ಯೇಕವಾದ 'ವಿಶಿಷ್ಟ'ವನ್ನು ಗುರುತಿಸಲು ಸಾಧ್ಯವಿಲ್ಲ. ಸಾಮಾನ್ಯ ವಾರ್ಗಿಕಕ್ಕೆ ಈ ವಿಶೇಷಣ ಸೇರಿ ಸ್ಥಳನಾಮ ಸೃಷ್ಟಿಯಾಗಿರುತ್ತದೆ. ಮೂಲಸ್ಥಳನಾಮವನ್ನು 'ಹಳೆ' (ಪೂರ್ವದ) ಎಂಬ ಪೂರ್ವಪದದಿಂದ, ನಂತರದ ಸ್ಥಳನಾಮವನ್ನು 'ಹೊಸ' (ನೂತನ) ಎಂಬ ಪೂರ್ವಪದದಿಂದ ಪ್ರತ್ಯೇಕಿಸಿಕೊಳ್ಳಲಾಗುತ್ತದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಈ ವಿಶೇಷಣ ಹೊಂದಿರುವ ಸ್ಥಳನಾಮಗಳು ಅಧಿಕ ಸಂಖ್ಯೆಯಲ್ಲಿವೆ. ಎಲ್ಲಾ ಸಂದರ್ಭಗಳಲ್ಲಿಯೂ ಪರಸ್ಪರ ವೈರುಧ್ಯ ವಿಶೇಷಣ ಹೊಂದಿರುವ ಸ್ಥಳನಾಮಗಳನ್ನು ಗುರುತಿಸಲು ಸಾಧ್ಯವಿಲ್ಲ. ಕೆಲವು ಸ್ಥಳನಾಮಗಳು ಅಸ್ತಿತ್ವವನ್ನು ಕಳೆದುಕೊಂಡಿರುವ ಸಾಧ್ಯತೆ ಇರುವುದರಿಂದ, ನಿದರ್ಶನಗಳನ್ನು ಎಲ್ಲಾ ಸಂದರ್ಭದಲ್ಲಿಯೂ ನೀಡಲು ಸಾಧ್ಯವಿರುವುದಿಲ್ಲ.

| ಉದಾ : | **ಹೊಸ** | **ಹಳೆ** |
| --- | --- | --- |
| | ಹೊಸಹಳ್ಳಿ – (ದೇ) | |
| | ಹೊಸಕೋಟೆ | ಹಳೆಕೋಟೆ (ದೊ) |
| | ಹೊಸ ಹಳ್ಳಿ | ಹಳೇನಹಳ್ಳಿ (ಸಿ) |
| | ಹೊಸ ಹಳ್ಳಿ (ಮಾ) | |
| | ಹೊಸ ಹಳ್ಳಿ | ಹಳೇಹಳ್ಳಿ (ಹೊ) |
| | ಹೊಸದುರ್ಗ (ಕ) | |
| | ಹೊಸದೊಡ್ಡಿ (ರಾ) | |

'ಹಳೆ - ಹೊಸ' ವಿಶೇಷಣಗಳು ನಿರ್ಮಾಣದ ಕಾಲವನ್ನು ತಿಳಿಸುವ ಘಟಕಗಳಾದರೂ, 'ಹೊಸ' ಊರಿನ ರಚನೆಯಾದ ನಂತರ, 'ಹಳೆ' ವಿಶೇಷಣ ಊರಿಗೆ ಸೇರಿರುವ ಸಾಧ್ಯತೆ ಇದೆ. ಊರು ಸೃಷ್ಟಿಯಾದ ಕೂಡಲೇ 'ಹಳೇ' ಎನ್ನುವ ಹಣೆಪಟ್ಟಿಯನ್ನು ಹೊಂದಿರುವ ಸಾಧ್ಯತೆ ಇರಲಾರದು. ಹೊಸ ಊರಿನ ನಿರ್ಮಾಣವಾದ ನಂತರ 'ಹಳೆ' ಎನ್ನುವ ವಿಶೇಷಣವನ್ನು ಸೇರಿಸಿಕೊಂಡಿರಬಹುದು. ಸಾಮಾನ್ಯವಾಗಿ ಈ ಊರುಗಳು ಜೋಡಿ ಗ್ರಾಮ ಹಾಗೂ ಸಾಪೇಕ್ಷ ಸ್ಥಳನಾಮಗಳಾಗಿರುತ್ತವೆ. ಕೆಲವೊಮ್ಮೆ ಜೋಡಿಗ್ರಾಮದ ಒಂದು ನೆಲೆ ಮಾತ್ರ ದೊರಕುತ್ತದೆ. ಮತ್ತೊಂದು ಊರು ಇದ್ದಿರಬಹುದಾಗಿದ್ದರೂ ತನ್ನ ಅಸ್ತಿತ್ವವನ್ನು ಕಳೆದುಕೊಂಡಿರುವ ಅಥವಾ ತನ್ನ ಹೆಸರನ್ನು ಬದಲಾಯಿಸಿಕೊಂಡಿರುವ ಸಾಧ್ಯತೆಯೂ ಇರುತ್ತದೆ.

### ೭.೧೩. ಸಾಪೇಕ್ಷ ಸ್ಥಳನಾಮಗಳು - ದಿಗ್ವಾಚಕ

ದಿಕ್ಕು ಅಥವಾ ದೆಸೆಯು ಒಂದು ವಸ್ತುವಿನ, ಸ್ಥಳದ ಅಥವಾ ವ್ಯಕ್ತಿಯ ಮೇಲ್ಭಾಗ, ಕೆಳಭಾಗ, ಹಿಂಭಾಗ, ಮುಂಭಾಗ, ಎಡಭಾಗ ಬಲಭಾಗ ಹಾಗೂ ಇವುಗಳ ನಡುವಿನ ಯಾವುದೇ ಕೋನವನ್ನು ಸೂಚಿಸುವ ವಿಶೇಷಗಳಾಗಿವೆ.[೩] ಸ್ಥಳನಾಮ ನಿರ್ದೇಶನದ ಮುಖ್ಯ ಉದ್ದೇಶವೂ ನಿರ್ದಿಷ್ಟ ವಾದ ಒಂದು ಭೂಪ್ರದೇಶವನ್ನು ಅಥವಾ ಭೂಪ್ರದೇಶದ ಮಿತಿಯನ್ನು ತಿಳಿಸುವುದಾಗಿರುತ್ತದೆ. ಈ ನಿಟ್ಟಿನಲ್ಲಿ ದಿಕ್ಕುಗಳು ಸ್ಥಳನಾಮ ನಿರ್ದೇಶನದಲ್ಲಿ ನಿರ್ಣಾಯಕ ಅಥವಾ ಕ್ವಚಿತ್ತಾದ ಅರ್ಥ ಬರುವಂತೆ ಕಾರ್ಯ ನಿರ್ವಹಿಸುವಿಕೆಯನ್ನು ಗುರುತಿಸಬಹುದು. ಸಾಪೇಕ್ಷ ಸ್ಥಳನಾಮಗಳಲ್ಲಿ ಪೂರ್ವಪದವಾಗಿ ಬಳಕೆಯಾಗುವ ದಿಕ್ಕುಗಳು, ಊರುಗಳ ನಡುವೆ ಪ್ರತ್ಯೇಕತೆಯನ್ನು ಗುರುತಿಸಲು ಸಹಾಯಕವಾಗಿದೆ. ಸಾಪೇಕ್ಷ ಊರುಗಳ ನಡುವಿನ ಸಂಬಂಧವನ್ನು ದಿಕ್ಕುಗಳು ಪ್ರತ್ಯೇಕಿಸುತ್ತಾ, ಕೆಲವೊಮ್ಮೆ ಊರಿನ ಪ್ರಾಚೀನತೆಯನ್ನು ತಿಳಿಸುವ ಪ್ರಯತ್ನ ಪರೋಕ್ಷ ಮಾಡುತ್ತಿರುತ್ತವೆ.

ದಿಗ್ವಾಚಕ ಸಾಪೇಕ್ಷ ಸ್ಥಳನಾಮಗಳು ಎಲ್ಲಾ ಸಂದರ್ಭದಲ್ಲಿಯೂ, ಪ್ರಾಚೀನ ಅಥವಾ ಅರ್ವಾಚೀನ ಎಂಬರ್ಥವನ್ನು ನೀಡದೆ, ಬೆಳವಣಿಗೆಯ ಹಂತವನ್ನು ಗುರುತಿಸಲು ಸಹಾಯಕವಾಗಿರುತ್ತವೆ.[೪] ಪರಸ್ಪರ ವೈರುಧ್ಯ ಹೊಂದಿರುವ ದಿಗ್ವಾಚಕ ಅಂಶಗಳನ್ನು ಸೂಚಿಸುವ ಸ್ಥಳನಾಮಗಳನ್ನು ಎಲ್ಲಾ ಸಂದರ್ಭಗಳಲ್ಲಿಯೂ ಗುರುತಿಸಲು ಸಾಧ್ಯವಿರುವುದಿಲ್ಲ. ಇಲ್ಲಿಯೂ ಸಹ ಅಸ್ತಿತ್ವ ಹೊಂದಿಲ್ಲದ ಅಥವಾ ಹೆಸರು ಬದಲಾದ ಊರುಗಳಿರುವ ಸಾಧ್ಯತೆ ಇದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಈ ರೀತಿಯ ವಿಶೇಷಣಗಳನ್ನು ಹೊಂದಿರುವ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ.

ಉದಾ: ಮೇಲಿನ ತೋಟ - ಕೆಳಗಿನ ತೋಟ (ದೇ)

ಮೇಲಿನ ಜೂಗನಹಳ್ಳಿ - ಕೆಳಗಿನ ಜೂಗನಹಳ್ಳಿ (ದೊ)

ತೆಂಕನಹಳ್ಳಿ (ಚ)

ಎಡಹಳ್ಳಿ (ನೆ)

ತಿಟ್ಟು ಮೇಲಿನ ಗೊಲ್ಲಹಳ್ಳಿ (ಕ)

ಮೇಗಳ ಪಾಳ್ಯ (ಮಾ)

ದೇವನಹಳ್ಳಿ ಹಾಗೂ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಎರಡು ದಿಗ್ವಾಚಕ ಸ್ಥಳನಾಮಗಳನ್ನು ಗುರುತಿಸಬಹುದಾಗಿದ್ದು, ಮಾಗಡಿ, ಹೊಸಕೋಟೆ ಹಾಗೂ ರಾಮನಗರ ತಾಲ್ಲೂಕುಗಳಲ್ಲಿ ಈ ರೀತಿಯ ಸ್ಥಳನಾಮಗಳು ಕಂಡುಬರುವುದಿಲ್ಲ.

**ಮೇಲಿನ ತೋಟ - ಕೆಳಗಿನ ತೋಟ (ದೇ)** ಇವೆರಡೂ ಮೊದಲು ಕ್ಷೇತ್ರವಾಚಕಗಳಾಗಿದ್ದು, ಕಾಲಕ್ರಮೇಣ ವಸತಿವಾಚಿಯಾಗಿ ಪರಿವರ್ತನೆಯಾಗಿದೆ. ಈ ಪ್ರದೇಶವು ವ್ಯವಸಾಯದ ಪ್ರದೇಶವಾಗಿರುವುದು ಭೂಲಕ್ಷಣಗಳಿಂದ ಹಾಗೂ ಜನಗಳ ಕಸುಬಿನಿಂದ ಗುರುತಿಸಬಹುದಾಗಿದೆ. ತಮ್ಮ ಕೃಷಿ ಕಸುಬಿನ ಅನುಕೂಲಕ್ಕಾಗಿ, ತಮ್ಮ ತೋಟಗಳ ಬಳಿ ಒಂದೊಂದೇ ಮನೆಗಳ ನಿರ್ಮಾಣ ಮಾಡಿಕೊಳ್ಳಲಾರಂಭಿಸಿದರು. ಹೀಗೆ ಹಲವು ಕುಟುಂಬಗಳು ಒಂದೆಡೆ ನೆಲೆಸಿ ಅದೊಂದು ಊರಾಗಿ ಬೆಳೆದಿದೆ.

ಇವೆರಡೂ ಮೂಲತಃ ಕೆರೆಯ ನೀರಾವರಿ ಪ್ರದೇಶಗಳಾಗಿವೆ. ನೀರಾವರಿಯ ಈ ಪ್ರದೇಶವನ್ನು ತೋಟಗಳು ಎಂದು ಕರೆಯುತ್ತಿದ್ದರು. ಇದು ವಸತಿವಾಚಿಯಾದ ನಂತರ 'ಮೇಲಿನ' ಹಾಗೂ 'ಕೆಳಗಿನ' ಎಂಬ ವಿಶೇಷಣಗಳನ್ನು ಸೇರಿಸಿ, ಈ ಎರಡೂ ವಸತಿ ವಾಚಿಗಳನ್ನು ಪ್ರತ್ಯೇಕಿಸಿಕೊಳ್ಳಲಾಗಿದೆ.

**ಮೇಲಿನ ಜೂಗನಹಳ್ಳಿ -**
**ಕೆಳಗಿನ ಜೂಗನಹಳ್ಳಿ (ದೊ)** ಇವೆರಡೂ ಲಂಬಾಣಿ ಜನರು ವಾಸಿಸುತ್ತಿರುವ ವಸತಿವಾಚಿ ತಾಂಡ್ಯಗಳಾಗಿವೆ. 'ಜೂಗ' ಎನ್ನುವ ವಿಶಿಷ್ಟವು ವ್ಯಕ್ತಿವಾಚಿಯಾಗಿದ್ದು 'ಹಳ್ಳಿ' ಸಾಮಾನ್ಯ ವಾರ್ಗಿಕವಾಗಿದೆ. 'ಜೂಗ' ಎನ್ನುವ ವ್ಯಕ್ತಿಯ ಹೆಸರಿನಲ್ಲಿ ಈ ಊರುಗಳು ನಿರ್ಮಾಣವಾಗಿರುವುದರಿಂದ 'ಜೂಗನಹಳ್ಳಿ' ಎಂಬ ಹೆಸರು ನಿಷ್ಪತ್ತಿಯಾಗಿದೆ. ಈ ಎರಡೂ ಊರಿನ ನಡುವೆ ಅಂತರ ಕಡಿಮೆ ಇದ್ದು ಘಟ್ಟ ಪ್ರದೇಶದ ಮೇಲ್ಭಾಗವು 'ಮೇಲಿನ ಜೂಗನಹಳ್ಳಿ'ಯೂ ಕೆಳಭಾಗವು 'ಕೆಳಗಿನ ಜೂಗನಹಳ್ಳಿ'ಯೂ ಆಗಿದ್ದು, ನಿರ್ದಿಷ್ಟವಾದ ಅನ್ವರ್ಥನಾಮವನ್ನು ಹೊಂದಿದೆ.

**ತೆಂಕನ ಹಳ್ಳಿ (ಚ)** ತೆಂಕನ < ತೆಂಕಣ - ವಿಶಿಷ್ಟ, ಹಳ್ಳಿ - ವಾರ್ಗಿಕ

ದಕ್ಷಿಣ ದಿಕ್ಕಿನಲ್ಲಿರುವ ಊರು ಎಂಬರ್ಥ ಬರುತ್ತದೆ. ದಕ್ಷಿಣೋತ್ತರ ಊರಿನವರು ನಿರ್ದೇಶಿಸಿರುವ ಹೆಸರು ಇದಾಗಿದೆ.

| | |
|---|---|
| ತಿಟ್ಟುಮೇಲಿನ ಗೊಲ್ಲಹಳ್ಳಿ (ಕ) | ಈ ಇದು ಭೂಪ್ರದೇಶದ ಲಕ್ಷಣ, ಜಾತಿವಾಚಿ, ವಿಶೇಷಣವನ್ನು ಹೊಂದಿರುವ ಬಹು ಆಕೃತಿಮಾ ಬಳಕೆಯಾಗಿರುವ ಸ್ಥಳನಾಮವಾಗಿದೆ. ಗೊಲ್ಲರು ವಾಸವಿದ್ದ ಊರು ಇದಾಗಿದ್ದು 'ಗೊಲ್ಲ' ವಿಶಿಷ್ಟವಾಗಿ 'ಹಳ್ಳಿ' ಸಾಮಾನ್ಯ ವಾರ್ಗಿಕವಾಗಿ ಕಾರ್ಯ ನಿರ್ವಹಿಸಿದೆ. 'ತಿಟ್ಟು' ಎತ್ತರ ಭೂ ಪ್ರದೇಶವನ್ನು ಸೂಚಿಸುವ ಆಕೃತಿಮಾ ಆಗಿದ್ದು, ಇದೇ ಅರ್ಥವನ್ನು ನೀಡುವ 'ಮೇಲಿನ' ಎಂಬ ದಿಗ್ವಾಚಕ ವಿಶೇಷವನ್ನು ಇಲ್ಲಿ ಗುರುತಿಸಬಹುದಾಗಿದೆ. |
| ಮೇಗಳ ಪಾಳ್ಯ (ಮಾ) | ಈ ಊರಿನ ಬದಿಯಲ್ಲಿ ಸಣ್ಣ ತೊರೆಯೊಂದು ಹರಿಯುತ್ತದೆ. ನದಿಯು ಹರಿದು ಬರುವ ದಿಕ್ಕನ್ನು ಇಲ್ಲಿ 'ಮೇಗಳ' ಎಂಬ ಆಕೃತಿಮಾದಿಂದ ಸೂಚಿಸಲಾಗಿದೆ. 'ಪಾಳ್ಯ' - ಪಾಳೆಯ ಎಂಬ ಆಕೃತಿಮಾದಿಂದ ಸೃಷ್ಟಿಯಾದ ಪದವಾಗಿದೆ.<br>ಮೇಗಳ = ಮೇಲಿನ<br>ಮೇಗಳ + ಪಾಳ್ಯ = ಮೇಗಳ ಪಾಳ್ಯ ಆಗಿದೆ. |

## ೭.೨ ವರ್ಣ ಸೂಚಕ ಸ್ಥಳನಾಮಗಳು

ಸ್ಥಳನಾಮಗಳಲ್ಲಿ ವೈವಿಧ್ಯತೆಯನ್ನು ಗುರುತಿಸಬಹುದು. ಈ ವೈವಿಧ್ಯತೆಯಲ್ಲಿ 'ವಿಶಿಷ್ಟವಾಗಿ ಬಳಕೆಯಾಗಿರುವ ಘಟಕದ ಪೂರ್ವಪದವಾಗಿ ವರ್ಣ ಅಥವಾ ಬಣ್ಣ ಸೂಚಿಸುವ ವಿಶೇಷಣ ಸೇರಿರುವುದನ್ನು ಎಲ್ಲಾ ಪ್ರದೇಶದ ಸ್ಥಳನಾಮಗಳಲ್ಲಿಯೂ ಗುರುತಿಸಬಹುದು. ಈ ವರ್ಣಗಳು ಪೂರ್ವಪದವಾಗಿ ಬಳಕೆಯಾಗಲು ಊರಿನವರಿಗಿಂತಲೂ ಆಸುಪಾಸಿನ ಜನರು ಕಾರಣರಾಗಿರುತ್ತಾರೆ. ತಾವು ಬಳಸುವ ವಿಶೇಷಣಗಳು ನಿರ್ದಿಷ್ಟವಾದ ಸ್ಥಳನಿರ್ದೇಶನಕ್ಕೆ ಕಾರಣವಾಗಿರುತ್ತದೆ.

ವರ್ಣಗಳು ಸ್ಥಳನಾಮಗಳಲ್ಲಿ ಮಾತ್ರವಲ್ಲದೆ. ವ್ಯಕ್ತಿನಾಮಗಳಲ್ಲಿಯೂ ಬಳಕೆಯಾಗುತ್ತದೆ. ವ್ಯಕ್ತಿನಾಮವಾಚಿ ಸ್ಥಳನಾಮವಾಗಿದ್ದಲ್ಲಿ ಈ ವಿಶೇಷಣವು ವ್ಯಕ್ತಿನಾಮದ ಜೊತೆಯಲ್ಲಿಯೇ ಸೇರಿಕೊಂಡು, ಅದು ಸ್ಥಳನಾಮವಾಚಿಯಲ್ಲಿ ಮುಂದುವರೆದಿರುತ್ತದೆ.

ಭೌತಿಕ ವಸ್ತುಗಳಿಗೆ ನಿರ್ದಿಷ್ಟವಾದ ಬಣ್ಣವಿರುವುದು ಸಹಜ. ಎಲ್ಲಾ ಸಂದರ್ಭಗಳಲ್ಲಿಯೂ ಈ ವರ್ಣಸೂಚಕ ಅಂಶವನ್ನು ವ್ಯವಹಾರದಲ್ಲಿ ಬಳಸುವುದಿಲ್ಲ. ವಿಶೇಷ ಸಂದರ್ಭದಲ್ಲಿ ಈ ವರ್ಣಗಳನ್ನು ಬಳಸಲಾಗುತ್ತದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವರ್ಣ ಆಧಾರಿತ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ ಇವುಗಳಲ್ಲಿ ಕಪ್ಪು ಹಾಗೂ ಕೆಂಪು ಬಣ್ಣ ಸೂಚಕ ಸ್ಥಳನಾಮಗಳು ಅಧಿಕ ಸಂಖ್ಯೆಯಲ್ಲಿವೆ. ಉಳಿದಂತೆ ಬಿಳಿ, ಹಳದಿ (ಅರಿಶಿನ) ಹಸುರು ವರ್ಣವನ್ನು ಹೊಂದಿರುವ ಸ್ಥಳನಾಮವನ್ನು ಗುರುತಿಸಬಹುದು.

ಉದಾ :

ಕೆಂಗಲ್ (ಚ) : (ಕೆಂಪು + ಕಲ್ಲು) ಕೆಂಪನೆಯ + ಕಲ್ = ಕೆಂಗಲ್ ಕೆಂಪು - ವಿಶಿಷ್ಟ ಕಲ್ಲು - ವಾರ್ಗಿಕ. ಕೆಂಪು ಕಲ್ಲಿನ ಮುತ್ತುರಾಯಸ್ವಾಮಿ ವಿಗ್ರಹವಿದೆ.

ಬಿಳಿಕಲ್ ಅರಣ್ಯ (ಕ) : ಬಿಳಿಕಲ್ = ವರ್ಣ ಸೂಚಕ ಶಿಲಾವಾಚಿ ಸ್ಥಳನಾಮ.
ಅರಣ್ಯ - ಪ್ರಾಕೃತಿಕ ಲಕ್ಷಣ ಸೂಚಿಸುವ ವಾರ್ಗಿಕವಾಗಿದೆ.
ಬಿಳಿಕಲ್ - ವಿಶೇಷಣ ವಿರುವ ಶಿಲಾಸೂಚಿ ಬಿಳಿಯ ಬಣ್ಣದ ಕಲ್ಲು ಗುಡ್ಡವಿರುವ ಪ್ರದೇಶ ಕಾಡಿಗೆ ಹೊಂದಿಕೊಂಡಿದೆ.

ಹಸುರುವಳ್ಳಿ (ನೆ) : ಹಸುರು > ಇಲ್ಲಿ ವಿಶಿಷ್ಟ ವಾಗಿದ್ದು, ಹಸಿರು > ಹಸುರು ಆಗಿದೆ. ಬಳ್ಳಿ > ಹಳ್ಳಿ 'ಬ' ಕಾರ 'ಹ'ಕಾರ ಆಗಿದ್ದು ವಾರ್ಗಿಕವಾಗಿದೆ.

ಕೆಂಪಾಪುರ (ಮಾ) : ಕೆಂಪು - ವರ್ಣವಾಚಿ ವಿಶೇಷಣ, ಕೆಂಪನೆಯ ಪುರ = ಕೆಂಪಾಪುರ ಕೆಂಪ - ವ್ಯಕ್ತಿವಾಚಿ ಪುರ - ವಾರ್ಗಿಕ ಆಗಿರುವ ಸಾಧ್ಯತೆಯೂ ಇದೆ.

ಬಿಳಿದಾಳೆ (ಕ) : ಬಿಳಿಯ + ತಾಳೆ = ಬಿಳಿದಾಳೆ (ಕ. ಸಮಾಸ) ಬಿಳಿಯ ವಿಶಿಷ್ಟ, ತಾಳೆ - ವಾರ್ಗಿಕ ಬಿಳಿಯ ಬಣ್ಣದ ತಾಳೆಯ ಕಾಯಿ ಬಿಡುವ ಮರದ ಪ್ರದೇಶ. ವೃಕ್ಷ ಸೂಚಿ ಸ್ಥಳನಾಮವಾಗುತ್ತದೆ.

## ೭.೩ ಪ್ರತಿಕರಣ ಸ್ಥಳನಾಮಗಳು

ಸ್ಥಳನಾಮನಿರ್ದೇಶನದಲ್ಲಿ ಅನೇಕ ಅಂಶಗಳನ್ನು ವಿಶಿಷ್ಟವಾಗಿ ಬಳಸಿಕೊಂಡಿದ್ದು ಅನೇಕ ಪ್ರದೇಶಗಳಲ್ಲಿನ ಹೆಸರುಗಳು ಒಂದೇ ರೀತಿ ಇರುವುದನ್ನು ಗುರುತಿಸಬಹುದಾಗಿದೆ. ಬೇರೆ ಬೇರೆ ಭೂಪ್ರದೇಶದಲ್ಲಿ ಒಂದೇ ರೀತಿಯ ವಿಶಿಷ್ಟ ಹಾಗೂ ವಾರ್ಗಿಕವನ್ನು ಹೊಂದಿರುವ ಸ್ಥಳನಾಮಗಳನ್ನು 'ಪ್ರತಿಕರಣ ಸ್ಥಳನಾಮ'ಗಳೆಂದು ಕರೆಯಬಹುದು.* ಇವು ಒಂದೇ ಹೆಸರಿನ ಸ್ಥಳನಾಮಗಳಾಗಿರುತ್ತವೆ. ಈ ರೀತಿಯ ಸಮರೂಪತೆಯನ್ನು 'ಅನುಕರಣೆ' ಎಂದು ಕರೆಯಬಹುದು. ಇವು ಉದ್ದೇಶಪೂರ್ವರಕವಾಗಿ ನಡೆದಿದ್ದರೆ 'ಅನುಕರಣೆ' ಎಂದು ಕರೆಯಬಹುದಾಗಿದ್ದು ಆಕಸ್ಮಿಕವಾಗಿದ್ದರೆ ಈ ರೀತಿ ಕರೆಯದೆ, 'ಪ್ರತಿಕರಣ' ಎಂದು ಗುರುತಿಸಬೇಕಾಗುತ್ತದೆ. ಒಂದು ಸ್ಥಳದಿಂದ ವಲಸೆ ಬಂದು ಹೊಸ ವಾಸ್ತವ್ಯದಲ್ಲಿ ನೆಲೆಸಿದ ಜನರು ತಮ್ಮ ಊರಿನ ಮೇಲಿನ ಅಭಿಮಾನದಿಂದ, ಹಿಂದಿನ ಊರಿನ ಸ್ಥಳನಾಮವನ್ನೇ ನಾಮಕರಣ ಮಾಡಿದ್ದಲ್ಲಿ, ಅಂತಹ ಸಂದರ್ಭದಲ್ಲಿ 'ಅನುಕರಣೆ' ಎಂದು ಕರೆಯಬಹುದು.

ಒಂದೇ ಭಾಷೆಯ ಬಳಕೆ, ಭೌಗೋಳಿಕ ಲಕ್ಷಣ, ಜನಜೀವನ ಮಾನವನ ಆಲೋಚನೆಗಳಲ್ಲಿ ಇರುವ ಸಾಮ್ಯತೆಗಳು, ಸಾಂಸ್ಕೃತಿಕ ಅಂಶಗಳು ಪ್ರತಿಕರಣ ಸ್ಥಳನಾಮಗಳಿಗೆ ಕಾರಣವಾಗಿದೆ. ಭೌಗೋಳಿಕವಾಗಿ ಭಿನ್ನ ಪ್ರದೇಶಗಳನ್ನು ಹೊಂದಿದ್ದರೂ, ಉಳಿದ ಅಂಶಗಳಲ್ಲಿ ಇರುವ ಸಮಾನಾಂತರಗಳು ಪ್ರತಿಕರಣ ಸ್ಥಳನಾಮ ಸೃಷ್ಟಿಗೆ ಕಾರಣವಾಗಿದೆ. ಈ ಸ್ಥಳನಾಮಗಳು ಸಹಜ ಸೃಷ್ಟಿಯಾಗಿವೆ.

ಪ್ರತಿಕರಣ ಸ್ಥಳನಾಮಗಳನ್ನು ಸೂಕ್ಷ್ಮ ಅಧ್ಯಯನಕ್ಕೆ ಒಳಗು ಮಾಡಿದರೆ, ಒಂದು ಜನಾಂಗ ಮತ್ತೊಂದು ಸ್ಥಳಕ್ಕೆ ವಲಸೆ ಬಂದು ನೆಲೆಸಿರುವಿಕೆಯನ್ನು ಅದರ ವ್ಯಾಪ್ತಿ, ಸ್ವರೂಪವನ್ನು ಭೌಗೋಳಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಅರಿಯಬಹುದು.[೬]

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕೆಲವು ಪ್ರತಿಕರಣ ಸ್ಥಳನಾಮಗಳು ಎರಡರಿಂದ ನಾಲ್ಕು ತಾಲ್ಲೂಕುಗಳವರೆಗೆ ವ್ಯಾಪಿಸಿದೆ

| ಉದಾ : ಪ್ರತಿಕರಣ ಸ್ಥಳನಾಮಗಳು | | ತಾಲ್ಲೂಕುಗಳು |
|---|---|---|
| ಕುರುಬರಹಳ್ಳಿ | – | ಕ, ದೇ, ದೊ, ಹೊ |
| ಬೊಮ್ಮನಹಳ್ಳಿ | – | ದೇ, ದೊ, ನೆ , |
| ಗೊಲ್ಲಹಳ್ಳಿ | – | ದೇ, ದೊ, ನೆ |
| ಲಕ್ಷ್ಮೀಪುರ | – | ದೇ, ನೆ, ರಾ |
| ದಾಸರಹಳ್ಳಿ | – | ರಾ, ಹೊ, ದೇ |
| ಹೊಸಹಳ್ಳಿ | – | ದೇ, ಮಾ, ಕ, ರಾ |
| ರಾಮಪುರ | – | ಕ, ಚ, ದೊ |
| ಹಾರೋಹಳ್ಳಿ | – | ದೇ, ಕ |
| ನಾರಾಯಣಪುರ | – | ದೇ, ಮಾ |
| ಚಿಕ್ಕನಹಳ್ಳಿ | – | ದೇ, ದೊ, ನೆ, ಹೊ |

**ಕುರುಬರಹಳ್ಳಿ** : ಹೊಸಕೋಟೆ, ಕನಕಪುರ, ದೊಡ್ಡಬಳ್ಳಾಪುರ, ದೇವನಹಳ್ಳಿ ತಾಲ್ಲೂಕು. ಕುರುಬರು ವಾಸಿಸುವ – ಜಾತಿ ಹಾಗೂ ವೃತ್ತಿವಾಚಿ ಸ್ಥಳನಾಮ. ಕುರಿಕಾಯುವ, ಉಣ್ಣೆ ಕಂಬಳಿನೇಯುವ ವೃತ್ತಿಯ ಜನಾಂಗ

ಕುರುಬ + ಅ + ಹಳ್ಳಿ =ಕುರುಬರಹಳ್ಳಿ ಆಗಿದೆ. ಷಷ್ಠಿ ಸಂಬಂಧಕಾರಕ ಪ್ರತ್ಯಯ ಬಳಕೆಯಾಗಿದೆ

**ಬೊಮ್ಮನಹಳ್ಳಿ** : ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ ತಾಲ್ಲೂಕು ಬೊಮ್ಮ – ಬ್ರಹ್ಮ ಪದದ ತದ್ಭವರೂಪ. ಬ್ರಾಹ್ಮಣರು ವಾಸಿಸುವ ಜಾತಿವಾಚಿ ಸ್ಥಳನಾಮ. ಬೊಮ್ಮ + ಅ + ಹಳ್ಳಿ = ಬೊಮ್ಮನಹಳ್ಳಿ ಬೊಮ್ಮ – ವ್ಯಕ್ತಿವಾಚಿಯಾಗಿಯೂ ಬಳಕೆಯಾಗಿರಬಹುದು, 'ಬೊಮ್ಮ' ಆರಂಭದಲ್ಲಿ ಬರುವ ಊರುಗಳು ಅಗ್ರಹಾರ ಸೂಚಕಗಳಾಗಿವೆ.[೭]

| | | |
|---|---|---|
| ಗೊಲ್ಲಹಳ್ಳಿ | : | ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ ತಾಲ್ಲೂಕು<br>ಗೊಲ್ಲರ ವಾಸಸ್ಥಳ - ಜಾತಿ ಸೂಚಿ ಸ್ಥಳನಾಮ ಪಶುಪಾಲನೆ ಮುಖ್ಯವೃತ್ತಿಯಾಗಿರುವವರು. ಗೊಲ್ಲ + ಹಳ್ಳಿ = ಗೊಲ್ಲಹಳ್ಳಿ |
| ದಾಸರಹಳ್ಳಿ | : | ರಾಮನಗರ, ಹೊಸಕೋಟೆ, ದೇವನಹಳ್ಳಿ ತಾಲ್ಲೂಕು.<br>ವೈಷ್ಣವ ಪಂಥದ, ಪೂಜೆಯಕಾರ್ಯಮಾಡುವ, ಭಿಕ್ಷಾವೃತ್ತಿ ಆಚರಣೆಯಾಗುಳ್ಳ ಜನಾಂಗ (ಕೆಲವು ಜನಾಂಗ).<br>ದಾಸರು + ಹಳ್ಳಿ = ದಾಸರಹಳ್ಳಿ<br>ದಾಸ - ಸೇವಕ ಎಂಬ ಅರ್ಥವಿದೆ. ದೇವರ ಸೇವೆ ಕೈಂಕರ್ಯ ಮಾಡುವವರು. |
| ಹಾರೋಹಳ್ಳಿ | : | ದೇವನಹಳ್ಳಿ, ಕನಕಪುರ ತಾಲ್ಲೂಕು<br>ಹಾರುವ + ಹಳ್ಳಿ ಹಾರುವಹಳ್ಳಿ ಹಾರೋಹಳ್ಳಿ ಬ್ರಾಹ್ಮಣನೆಲೆಯನ್ನು ಸೂಚಿಸುವ ಸ್ಥಳನಾಮ ಹಾರು(ವ) - ಆರಂಭದಲ್ಲಿ ಬರುವ ಊರುಗಳು ಅಗ್ರಹಾರ ಸೂಚಕಗಳಾಗಿವೆ.[5]<br>ಮೇಲಿನ ಪ್ರತಿಕರಣ ಸ್ಥಳನಾಮಗಳು ಜಾತಿವಾಚಿ ಹಾಗೂ ವೃತ್ತಿವಾಚಿಗಳಾಗಿವೆ, ವೃತ್ತಿ ಆಧಾರಿತ ಜನಾಂಗಗಳು ಎಲ್ಲಾ ಪ್ರದೇಶಗಳಲ್ಲಿಯೂ ಇದ್ದದರಿಂದ, ಈ ಪ್ರತಿಕರಣ ಸ್ಥಳನಾಮಗಳು ನಿಷ್ಪನ್ನವಾಗಿರಬಹುದು, ಇಂತಹ ಸಂದರ್ಭದಲ್ಲಿ ಇವುಗಳನ್ನು 'ಅನುಕರಣೆ' ಎಂದು ಕರೆಯಲು ಸಾಧ್ಯವಿಲ್ಲ.<br>ಸಮಾಜದಲ್ಲಿ ಜನರ ಅವಶ್ಯಕತೆಗನುಗುಣವಾಗಿ ಈ ಕಸುಬುಗಳು ಪ್ರಾರಂಭವಾಗಿದ್ದು, ವೃತ್ತಿ ಮತ್ತು ಜಾತಿಗಳು ಒಂದಕ್ಕೊಂದು ಸಂಬಂಧವಿದೆ. |
| ಲಕ್ಷ್ಮೀಪುರ | : | ದೇವನಹಳ್ಳಿ, ನೆಲಮಂಗಲ, ರಾಮನಗರ ತಾಲ್ಲೂಕು<br>ಲಕ್ಷ್ಮೀ + ಪುರ - ಲಕ್ಷ್ಮೀಪುರ - ದೈವವಾಚಿ ಅಥವಾ ವ್ಯಕ್ತಿನಾಮವಾಚಿ ಸ್ಥಳನಾಮವಾಗಿದೆ. (ವ್ಯಕ್ತಿನಾಮಗಳಲ್ಲಿ ಹೆಚ್ಚಾಗಿ ದೈವನಾಮಸೂಚಕ ಅಂಶಗಳನ್ನು ಗುರುತಿಸಬಹುದಾದ್ದರಿಂದ. ಕೆಲವೊಮ್ಮೆ ವಿಶಿಷ್ಟವನ್ನು ಯಾವ ಗುಂಪಿಗೆ ಸೇರಿಸಬೇಕು ಎನ್ನುವುದರಲ್ಲಿ ಗೊಂದಲ ಸಹಜವಾಗಿದ್ದು, ಊರಿನ ದೇವಾಲಯದಲ್ಲಿರುವ ದೇವರ ಮೇಲೆ ನಿರ್ಧರಿಸಬಹುದು) |

ರಾಮಪುರ : ಕನಕಪುರ, ಚನ್ನಪಟ್ಟಣ, ದೊಡ್ಡಬಳ್ಳಾಪುರ ತಾಲ್ಲೂಕು
ರಾಮ + ಪುರ = ರಾಮಪುರ ರಾಮ - ದೈವವಾಚಿ, (ವ್ಯಕ್ತಿವಾಚಿಯಾಗಿರುವ ಸಾಧ್ಯತೆಯೂ ಇದೆ) ಸ್ಥಳನಾಮವಾಗಿದೆ. ಶ್ರೀರಾಮ ಬಂದು ಹೋಗಿದ್ದನೆಂಬ ಐತಿಹ್ಯವಿದೆ ರಾಮನಂತಹ ಗುಣವುಳ್ಳ ವ್ಯಕ್ತಿ ನೆಲೆಸಿದ್ದ ಎಂಬ ಪ್ರತೀತಿಯಿದೆ.

ನಾರಾಯಣಪುರ : ದೇವನಹಳ್ಳಿ, ಮಾಗಡಿ ತಾಲ್ಲೂಕು
'ನಾರಾಯಣ' - ವಿಶಿಷ್ಟ ವೂ 'ಪುರ' ವಾರ್ಗಿಕವಾಗಿದ್ದು
ನಾರಾಯಣ + ಪುರ - ನಾರಾಯಣಪುರ - ವ್ಯಕ್ತಿವಾಚಿಯಾಗಿದೆ.

ಚಿಕ್ಕನಹಳ್ಳಿ : ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ, ಹೊಸಕೋಟೆ
'ಚಿಕ್ಕ' 'ವಿಶಿಷ್ಟ' - ವ್ಯಕ್ತಿವಾಚಿ, ಪರಿಮಾಣವಾಚಿ 'ಹಳ್ಳಿ' ಸಾಮಾನ್ಯವಾರ್ಗಿಕ ಚಿಕ್ಕ +ಅ + ಹಳ್ಳಿ = ಚಿಕ್ಕನ ಹಳ್ಳಿ ಆಗಿದೆ.

ಸ್ಥಳನಾಮಗಳಲ್ಲಿ ವಿಶಿಷ್ಟವಾಗಿ ಬಳಕೆಯಾಗಿರುವ ಅಂಶಗಳು ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ, ಪ್ರಾಕೃತಿಕ, ಭಾಷಿಕ ಅಂಶಗಳು - ಒಂದೇ ರೀತಿಯಲ್ಲಿ ಬಳಕೆಯಲ್ಲಿದ್ದರಿಂದ ಪ್ರತಿಕರಣ ಸ್ಥಳನಾಮಗಳ ನಿಷ್ಪತ್ತಿಗೆ ಕಾರಣವಾಗಿದೆ.

## ೭.೪ ವಸತಿ; ನಿರ್ವಸತಿ; ನಿರ್ವಸಿತ ಸ್ಥಳನಾಮಗಳು

ಸ್ಥಳನಾಮಗಳ ವಿಶಿಷ್ಟಗಳಲ್ಲಿನ ಲಕ್ಷಣಗಳು ಹಾಗೂ ಅವುಗಳ ವಾಸ್ತವ ಸ್ಥಿತಿಗನುಗುಣವಾಗಿ ಅವುಗಳನ್ನು ವಸತಿ ನಿರ್ವಸತಿ ಹಾಗೂ ನಿರ್ವಸಿತಿ ಸ್ಥಳನಾಮಗಳೆಂದು ಮೂರು ರೀತಿಯಲ್ಲಿ ವರ್ಗೀಕರಿಸಬಹುದು.

### ೭.೪.೧ ವಸತಿ ಸ್ಥಳನಾಮಗಳು

ವಸತಿ ಸ್ಥಳನಾಮಗಳು ಜನರ ವಾಸ್ತವ್ಯವನ್ನು ಸೂಚಿಸುತ್ತವೆ. ಈ ವಸತಿ ಸೂಚಕ ಸ್ಥಳನಾಮಗಳು ಅತ್ಯಂತ ಪ್ರಾಚೀನವಾಗಿರಬಹುದು ಅಥವಾ ಅರ್ವಾಚೀನವಾಗಿರಬಹುದು. ಇಂತಹ ಜನವಾಸ್ತವ್ಯ ನೆಲೆಗಳಿಗೆ ಅಕ್ಕಪಕ್ಕದ ಊರಿನಲ್ಲಿ ವಾಸಿಸುವ ಜನರು ಹೆಸರು ನೀಡಿರಬಹುದು. ಆಧುನಿಕ ನೆಲೆಗಳಿಗೆ ತಾವೇ ಹೆಸರು ನೀಡಿಕೊಳ್ಳುವ ರೂಢಿಯನ್ನು ಗುರುತಿಸಬಹುದು. ಇಂತಹ ಹೆಸರು ನೀಡುವಿಕೆ ಯಾದೃಚ್ಛಿಕವಾಗಿದ್ದಲ್ಲಿ, ಆಯಾ ಪ್ರದೇಶದ ಯಾವುದೇ ಲಕ್ಷಣಗಳನ್ನು ಈ ಹೆಸರುಗಳಲ್ಲಿ ಗುರುತಿಸಲು ಸಾಧ್ಯವಿಲ್ಲ ತಮ್ಮ ಊರಿನ ಹೆಸರಿನ ಬಗ್ಗೆ ಜನರಿಗೆ ವಿಶೇಷ ಆತ್ಮೀಯತೆ, ಅಭಿಮಾನ ಇರುತ್ತದೆ. ಈ ಹೆಸರುಗಳು ರಾಜಕೀಯ, ಸಾಂಸ್ಕೃತಿಕ, ಭಾಷಿಕ, ಪೌರಾಣಿಕ ಕಾರಣಗಳಿಂದಾಗಿ ಸ್ಥಿತ್ಯಂತರವಾಗುವ ಸಾಧ್ಯತೆಯೂ ಇರುತ್ತದೆ. ಈ ರೀತಿ ಸ್ಥಿತ್ಯಂತರಗೊಂಡರೆ ಪೂರ್ವದ ಹೆಸರು ಸಂಪೂರ್ಣ ಬದಲಾಗುವ ಸಾಧ್ಯತೆ ಇರುತ್ತವೆ ವಸತಿ ಸ್ಥಳನಾಮಗಳು ಚಲನಶೀಲತೆಯನ್ನು ಹೊಂದಿರುತ್ತದೆಯಾದ್ದರಿಂದ, ನಿರಂತರ ಬದಲಾವಣೆಯನ್ನು ಹೊಂದುತ್ತಿರುತ್ತದೆ. ಜನಸಂಖ್ಯೆ ಹೆಚ್ಚಾದಂತೆ ಊರು ವಿಸ್ತಾರವಾಗುವುದರಿಂದ, ಊರಿಗೆ ಹೊಂದಿಕೊಂಡಂತೆ ಹೊಸ ಬಡಾವಣೆಗಳ ನಿರ್ಮಾಣವಾಗುತ್ತವೆ. ಈ ರೀತಿಯ ಬಡಾವಣೆಗಳನ್ನು ಗುರುತಿಸಿಕೊಳ್ಳಬ

ಮತ್ತೆ ಹೊಸ ಹೆಸರುಗಳನ್ನು ನೀಡುವ ಸಾಧ್ಯತೆ ಗುರುತಿಸಬಹುದು. ಇಂತಹ ನಾಮನಿರ್ದೇಶನಗಳಲ್ಲಿಯೂ ಯಾದೃಚ್ಛಿಕತೆ ಹೆಚ್ಚಾಗಿರುತ್ತದೆ.

| ಸ್ಥಳನಾಮಗಳು | | ಪೂರ್ವದ ಹೆಸರು |
|---|---|---|
| ರಾಮನಗರ (ರಾ) | - | ಕ್ಲೋಸ್ ಪೇಟೆ |
| ಲಕ್ಷ್ಮೀದೇವಿಪುರ (ದೊ) | - | ತಿಪ್ಪೇನಹಳ್ಳಿ |
| ಕೂಡ್ಲೂರು (ಚ) | - | ರಾಜರಾಜ ಚತುರ್ವೇದಿ ಮಂಗಲಂ |
| ವಿಜಯಪುರ (ದೇ) | - | ವಡಿಗೇನಹಳ್ಳಿ |
| ಮಜ್ಜಿಗೆ ಹೊಸಹಳ್ಳಿ (ದೇ) | - | ಕೆಂಪತಿಮ್ಮನಹಳ್ಳಿ |
| ಜ್ಯೋತಿಪುರ (ದೇ) | - | ಬೋಕಿಪುರ |

### ೭.೪.೨ ನಿರ್ವಸತಿ ಸ್ಥಳನಾಮಗಳು

ಒಂದು ಕಾಲದಲ್ಲ ವಸತಿ ಸ್ಥಳನಾಮವಾಗಿದ್ದು, ಕಾಲಾನಂತರದಲ್ಲಿ, ಆ ಸ್ಥಳದಲ್ಲಿ ಜನರ ವಾಸ್ತವ್ಯ ಇಲ್ಲದಿರುವುದೇ "ನಿರ್ವಸತಿ" ಸ್ಥಳನಾಮಗಳು, ಈ ರೀತಿಯ ನಿರ್ವಸತಿಗೆ ಸಾಮೂಹಿಕ ಸಮಸ್ಯೆಗಳೇ ಕಾರಣವಾಗಿರುತ್ತದೆ. ಸಾಂಕ್ರಾಮಿಕ ರೋಗಗಳು, ಅಣೆಕಟ್ಟು, ಆಧುನಿಕ ಕೈಗಾರಿಕೆಗಳು, ಹೊಸ ನಿರ್ಮಾಣಗಳು ನಿರಂತರವಾದ ಪ್ರಕೃತಿ ವಿಕೋಪಗಳು ಇಡೀ ಊರಿನ ಅಸ್ತಿತ್ವವನ್ನೇ ನಾಶಮಾಡುವ ಸಾಧ್ಯತೆ ಇರುತ್ತದೆ. ಈ ರೀತಿಯಲ್ಲಿ ಸೃಷ್ಟಿಯಾದ ನಿರ್ವಸತಿ ನೆಲೆಗಳು ತನ್ನ ಹೆಸರನ್ನು ಉಳಿಸಿಕೊಂಡಿರುತ್ತವೆಯಾದರೂ ಜನರ ವಾಸ್ತವ್ಯವಿರುವುದಿಲ್ಲ. ಇಂತಹ ಸ್ಥಳನಾಮಗಳು ಬೇರೆ ಸ್ಥಳಕ್ಕೆ ಸ್ಥಳಾಂತರ ಗೊಂಡಿರುವ ಸಾಧ್ಯತೆ ಇರುತ್ತದೆ. ನಿರ್ವಸಿತ ಸ್ಥಳನಾಮಗಳೇ ಸಾಮಾನ್ಯವಾಗಿ ಬೇಚರಾಕ್ ಗ್ರಾಮಗಳಾಗಿರುತ್ತವೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕೆಲವು ನಿರ್ವಸಿತ ಸ್ಥಳನಾಮಗಳನ್ನು ಗುರುತಿಸಬಹುದು.

| | | |
|---|---|---|
| ಉದಾ : | ಗಂಗಮುತ್ತನಹಳ್ಳಿ - ದೇ | ಅರಸಿನಕುಂಟೆ - ದೇ |
| | ರಾಮಗಿರಿ - ರಾ | ಗಂಗ ಮುತ್ತನಹಳ್ಳಿ - ದೇ |
| | ಕಲಾವತಿ - ಮಾ | ಕತ್ತಿಪುರ - ರಾ |
| | ಹೊಸಹಳ್ಳಿ - ಚ | |

ಇವುಗಳಲ್ಲಿ ಅರಸಿನಕುಂಟೆ, ಗಂಗಮುತ್ತನಹಳ್ಳಿ, ಗ್ರಾಮಗಳು ಪ್ರಾಚೀನವಾದುವಾದರೂ, ದೇವನಹಳ್ಳಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ನಿರ್ಮಾಣಕ್ಕೆ ಬೇಕಾದ ಭೂಮಿಯನ್ನು ವಶಪಡಿಸಿಕೊಂಡಾಗ, ಈ ಊರುಗಳ ಸಮೇತ ಜನರನ್ನು ಸ್ಥಳಾಂತರಿಸಲಾಯಿತು. ಈ ರೀತಿಯ ಸ್ಥಳಾಂತರದಿಂದ ಜನರು ಬೇರೆಡೆಗೆ ವಲಸೆ ಹೋಗಿ ನೆಲೆಸಿರುತ್ತಾರೆ.

### ೭.೪.೩ ನಿರ್ವಸಿತ ಸ್ಥಳನಾಮಗಳು

ಯಾವುದೇ ಭೌಗೋಳಿಕ ಪರಿಸರದಲ್ಲಿರುವ ನಿರ್ದಿಷ್ಟ ಭೂಭಾಗವನ್ನು ಗುರುತಿಸುವ ಉದ್ದೇಶದಿಂದ ಹೆಸರುಗಳನ್ನು ನೀಡಲಾಗುತ್ತದೆ. ಆದರೆ ಈ ಪ್ರದೇಶಗಳಲ್ಲಿ ಜನರ ವಾಸ್ತವ್ಯವಿರುವುದಿಲ್ಲ. ಅಂತಹ ಹೆಸರುಗಳನ್ನು

'ನಿರ್ವಸಿತ ಸ್ಥಳನಾಮ'ಗಳೆಂದು ಕರೆಯಬಹುದು. ಜನವಾಸ್ತವ್ಯಕ್ಕೆ ಹೊಂದಿಕೊಂಡಂತೆ ಬಯಲು ಪ್ರದೇಶಗಳು, ಬೆಟ್ಟ - ಗುಡ್ಡಗಳು, ಕಾಡು, ನದಿ, ಕೆರೆ -ಕುಂಟೆ, ವ್ಯವಸಾಯದ ಭೂಪ್ರದೇಶ ಹಾಗೂ ಇತರೆ ಭೂಭಾಗವನ್ನು ಗುರುತಿಸಿಕೊಳ್ಳುವ ಉದ್ದೇಶದಿಂದ ಈ ರೀತಿಯ ಹೆಸರುಗಳನ್ನು ನೀಡಲಾಗುತ್ತದೆ. ಈ ಹೆಸರುಗಳು ಪ್ರಾಕೃತಿಕ ಲಕ್ಷಣಗಳನ್ನು ಸೂಚಿಸುತ್ತವೆ. ಪೂರ್ವದಲ್ಲಿ ನೀಡಲಾಗಿರುವ ಹೆಸರುಗಳಲ್ಲಿ ರಾಮಾಯಣ, ಮಹಾಭಾರತ ಅಥವಾ ಇತರೆ ಪೌರಾಣಿಕ ಕಥೆಗಳಿಂದ ಪ್ರಭಾವಿತಗೊಂಡ ಹೆಸರುಗಳನ್ನು ಗುರುತಿಸಬಹುದು. ಕೆಲವೊಮ್ಮೆ ಆ ಪ್ರದೇಶದಲ್ಲಿರುವ ದೇವಾಲಯಗಳಿಂದ ಈ ಹೆಸರು ಬಂದಿರುವ ಸಾಧ್ಯತೆ ಇರುತ್ತದೆ. ಇವುಗಳಲ್ಲಿ ಸ್ಥಳೀಯ ಸಂಸ್ಕೃತಿಯ ಪ್ರಭಾವವಿದ್ದು, ಸಂಸ್ಕೃತೀಕರಣದ ಅಥವಾ ಇತರೆ ಭಾಷೆಗಳ ಪ್ರಭಾವವಿರುವುದಿಲ್ಲ. ಆಧುನಿಕತೆಯ ಪ್ರಭಾವದಿಂದ ಈ ಹೆಸರುಗಳು ಸ್ಥಿತ್ಯಂತರಗೊಂಡು ಯಾದೃಚ್ಛಿಕ ಹೆಸರುಗಳು ಬಂದಿರುವ ಸಾಧ್ಯತೆ ಇರುತ್ತದೆ.

"ಸ್ಥಳನಾಮಗಳ ಸಾಮಾಜಿಕ ಅಧ್ಯಯನದಿಂದ ಒಂದು ನಿರ್ದಿಷ್ಟ ಕಾಲದ ಜನ ಜೀವನ ತಿಳಿಯಲು ಸಹಾಯಕ ವಾಗಿದೆ. ಸ್ಥಳನಾಮಗಳು ನಮ್ಮ ಸಂಸ್ಕೃತಿಯ ಪಳೆಯುಳಿಕೆಯಂಥ ಅವಶೇಷಗಳಾಗಿರುವುದರಿಂದ, ಅವು ಪರೋಕ್ಷವಾಗಿಯಾದರೂ, ಜನತೆ ಮತ್ತು ನಿರ್ದಿಷ್ಟ ಕಾಲದ ಸಮಾಜದ ಕುರಿತು ಅತ್ಯಂತ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ"[6]

**ಬಟ್ಟಲು ಗುಂಡೇಶ್ವರ (ಕ)** - ಇದು ನಿರ್ವಸಿತ ಪ್ರದೇಶವಾಗಿದ್ದು ಕನಕಪುರದಿಂದ ೭ ಕಿ. ಮೀ ದೂರದಲ್ಲಿದೆ. ಈ ಹೆಸರಿಗೆ ಸಂಬಂಧಿಸಿದಂತೆ ಐತಿಹ್ಯವೊಂದಿದೆ 'ನಾಗಲಿಂಗ ಮಹಾಸ್ವಾಮಿ' ಎಂಬ ತಪಸ್ವಿಗಳು ತಪಸ್ಸಿಗೆ ಕುಳಿತ ಸ್ಥಳದಲ್ಲಿನ ಬಂಡೆಯೊಂದರಲ್ಲಿ ಬಟ್ಟಲಾಕಾರದ ಹಳ್ಳವಿದ್ದಿತು. ಕಾಮಧೇನು ಅಲ್ಲಿಗೆ ಬಂದು ಹಾಲು ಸುರಿಸುತ್ತಿತ್ತು. ಹಳ್ಳದಲ್ಲಿ ತುಂಬಿದ ಹಾಲನ್ನು ಅವರು ಉಪಯೋಗಿಸುತ್ತಿದ್ದರು. ಈ ಸ್ವಾಮಿಗಳು ಶಿವೈಕ್ಯರಾದ ನಂತರ ಲಿಂಗದ ರೂಪದಲ್ಲಿ ಇಲೇ ನೆಲೆಸಿರುವರೆಂದೂ, ಆದ್ದರಿಂದಲೇ 'ಬಟ್ಟಲು ಗುಂಡೇಶ್ವರ' ಎಂಬ ಹೆಸರು ಬಂದಿದೆಯೆಂಬ ಐತಿಹ್ಯವಿದೆ.

ಸಂಗಮಕ್ಷೇತ್ರ (ಕ) - ಕಾವೇರಿ ಮತ್ತು ಅರ್ಕಾವತಿ ನದಿಗಳು ಸೇರುವ ಸ್ಥಳ ಇದಾಗಿದ್ದು ಇವೆರಡೂ ಸೇರುವ ಸ್ಥಳವನ್ನೇ 'ಸಂಗಮ' ಎಂದು ಬಳಸಲಾಗಿದೆ. ಇಲ್ಲಿ 'ಸಂಗಮೇಶ್ವರ' ದೇವಾಲಯವೂ ಇದೆ. ಪ್ರಾಕೃತಿಕ ಲಕ್ಷಣವನ್ನು ಸೂಚಿಸುವ ನಿರ್ವಸಿತ ಸ್ಥಳವಾಗಿದೆ.

ಗೌತಮಗಿರಿಕ್ಷೇತ್ರ (ದೇ) - ಯಾಜ್ಞವಲ್ಕ್ಯ ಮಹರ್ಷಿಗಳು ಈ ಗುಡ್ಡದಲ್ಲಿ ನೆಲೆಸಿ ತಪಸ್ಸು ಮಾಡಿದರೆಂಬ ಐತಿಹ್ಯವಿದ್ದು, ಈ ಕಾರಣದಿಂದಲೇ ಈ ಬೆಟ್ಟಕ್ಕೆ ಗೌತಮಗಿರಿಕ್ಷೇತ್ರ ಎಂಬ ಹೆಸರಿದೆ. 'ತಿಮ್ಮರಾಯಸ್ವಾಮಿ ಬೆಟ್ಟ' ಎಂಬ ಹೆಸರೂ ಇದೇ ಗುಡ್ಡಕ್ಕಿದ್ದು, ಇಲ್ಲಿ ವೆಂಕಟರಾಮಣಸ್ವಾಮಿ ದೇವಾಲಯ ಇರುವುದರಿಂದ ಈ ಹೆಸರು ಬಂದಿದೆ.

ಚಪ್ಪರಕಲ್ಲು (ದೇ) - ಬಂಡೆಯೊಂದರ ಮೇಲೆ ಶಿಲಾಮಂಟಪವಿದ್ದು, ಈ ಮಂಟಪದ ಕಂಬಗಳು ಯಾವುದೇ ಆಧಾರಗಳು ಇಲ್ಲದೆ ನಿಂತಿದ್ದು, ಇದರ ಮೇಲೆ ಕಲ್ಲಿನ ಛಾವಣಿಯೂ ಇದೆ. ಚಪ್ಪರದಂತೆ ಇರುವ ಕಲ್ಲು-ಚಪ್ಪರಕಲ್ಲು ಆಗಿದ್ದು, ನಿರ್ವಚಿತ ಸ್ಥಳನಾಮವಾಗಿದೆ. ಇದೇ ಹೆಸರಿನಿಂದ ಚಪ್ಪರಕಲ್ ದಿಣ್ಣೆ, ಚಪ್ಪರಕಲ್ ಕ್ರಾಸ್ ಎಂಬ ಹೆಸರನ್ನು ಈ ಪ್ರದೇಶಕ್ಕೆ ಬಳಸಲಾಗುತ್ತಿದೆ.

**ವಾಣಿಜ್ಯ ಕೇಂದ್ರ ಸೂಚಕ ಸ್ಥಳನಾಮಗಳು**

ಮಂಗಳವಾರ ಪೇಟೆ -ಚ
ಶುಕ್ರವಾರ ಪೇಟೆ -ಚ
ಸಂತೆ ಮೊಗೇನ ಹಳ್ಳಿ -ಚ
ಅಕ್ಕು ಪೇಟೆ -ದೇ
ವಣಿಗರ ಹಳ್ಳಿ -ದೊ
ವರದನ ಹಳ್ಳಿ -ದೊ
ವರದ ನಾಯಕನ ಹಳ್ಳಿ -ನೆ
ವರದೇನ ಹಳ್ಳಿ -ಮಾ
ವರದೋ ಹಳ್ಳಿ -ಮಾ
ರಾಮ ನಗರ -ರಾ
ವರದಾ ಪುರ -ಹೊ

**ಆಡಳಿತಕ್ಕೆ ಸಂಬಂಧ ಪಟ್ಟ ಸ್ಥಳನಾಮಗಳು**

ಕೋಟೆ ಕೊಪ್ಪ -ಕ
ಪುರುಷ ಗೌಡನ ಹಳ್ಳಿ -ಕ
ಬಾಲಗೌಡನಹಳ್ಳಿ -ಕ
ಪಾಳ್ಯ -ದೇ
ಬೆಟ್ಟ ಕೋಟೆ -ದೇ
ವಂಕಟಗಿರಿ ಕೋಟೆ -ದೇ
ಕನ್ನಮಂಗಲ ಪಾಳ್ಯ -ದೇ
ಕಲ್ಲುಕೋಟೆ -ದೊ
ಗೆದ್ದಲಪಾಳ್ಯ -ದೊ
ಹೊಸಕೋಟೆ -ದೊ
ಕೊರಟಗೆರೆಪಾಳ್ಯ -ನೆ
ಗಂಗಾಧರನಪಾಳ್ಯ -ನೆ
ನರಸಿಂಹಪಾಳ್ಯ -ನೆ
ನಾರಾಯಣಪ್ಪನ ಪಾಳ್ಯ -ನೆ
ಬಾಲಗರುವನ ಪಾಳ್ಯ -ನೆ
ಬಿಲ್ಲನ ಕೋಟೆ -ನೆ
ಮೊದಲ ಕೋಟೆ -ನೆ
ಶ್ಯಾಮಭಟ್ಟರಪಾಳ್ಯ -ನೆ
ಸೈದಮಿಯ ಪಾಳ್ಯ -ನೆ
ಹಾಜೀ ಪಾಳ್ಯ -ನೆ
ಹೊಸಹಳ್ಳಿಪಾಳ್ಯ -ನೆ
ಅಣ್ಣಯ್ಯಶಾಸ್ತ್ರಿಪಾಳ್ಯ -ಮಾ
ಕಲ್ಲಹಟ್ಟಿಪಾಳ್ಯ -ಮಾ
ತೂಬರಪಾಳ್ಯ -ಮಾ
ಯರೆಪಾಳ್ಯ -ಮಾ
ನಾಡಗೌಡನ ಗೊಲ್ಲಹಳ್ಳಿ -ಹೊ
ದೊಡ್ಡಗೌಡನಹಳ್ಳಿ -ಹೊ

ಮೇಲಿನ ಪಟ್ಟಿಯಲ್ಲಿರುವ ಕೋಟೆ, ಗೌಡ, ಪಾಳ್ಯ ಮುಂತಾದ ಪದಗಳು ಆಡಳಿತಕ್ಕೆ ಸ್ಥಳದ ಬಗ್ಗೆ ಸಂಬಂಧಿಸಿದ ಅಂಶವನ್ನು ಸೂಚಿಸುತ್ತವೆ.

## ೭.೫ ಪೇಟೆ, ಪುರ, ಪಟ್ಟಣ ಹಾಗೂ ನಗರ ವಾರ್ಗಿಕ ಸ್ಥಳನಾಮಗಳು

ಜನವಾಸ್ತವ್ಯದ ಪ್ರಮಾಣ ಊರಿನಲ್ಲಿ ನಡೆಯುವ ವಾಣಿಜ್ಯ ವಹಿವಾಟು, ಹೊರ ಊರುಗಳಿಂದ ಬಂದು ಹೋಗುವ ಜನರ ಸಂಖ್ಯೆಗೆ ತಕ್ಕಂತೆ ಊರಿನ ಹೆಸರಿನಲ್ಲಿರುವ ವಾರ್ಗಿಕಗಳು ಬಳಕೆಯಾಗಿವೆ. ಪೇಟೆ, ಪುರ, ಪಟ್ಟಣ, ಸಂತೆ ಹಾಗೂ ನಗರ ಮುಂತಾದ ವಾರ್ಗಿಕಗಳು ಹಟ್ಟಿ, ಹಳ್ಳಿ ಊರು ಮುಂತಾದ ವಾರ್ಗಿಕಗಳನ್ನೊಳಗೊಂಡಿರುವ ಊರುಗಳಿಗಿಂತಲೂ ಹೆಚ್ಚಿನ ವಸತಿ ಹಾಗೂ ವಾಸ್ತವ್ಯವನ್ನು ಒಳಗೊಂಡಿರುವ ಸಾಧ್ಯತೆ ಹೆಚ್ಚಿರುತ್ತದೆ. ಇದು ಸಾಮಾನ್ಯವಾದ ಅಭಿಪ್ರಾಯವಾಗಿದ್ದು ಎಲ್ಲಾ ಸಂದರ್ಭಗಳಲ್ಲಿಯೂ ಅನ್ವಯವಾಗುವುದಿಲ್ಲ. ಒಂದು ಕಾಲದಲ್ಲಿ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿರುವ ಊರು, ಕಾಲಾಂತರದಲ್ಲಿ ಮಹತ್ವ ಕಳೆದುಕೊಂಡಿರುವ ಸಾಧ್ಯತೆ ಇರುತ್ತದೆ. ಊರಿನ ಹೆಸರಿನಲ್ಲಿ ಯಾವುದೇ ಬದಲಾವಣೆಯೂ ಆಗಿರುವುದಿಲ್ಲ, ಸಾಮಾನ್ಯ ಊರೊಂದು ಅತ್ಯಂತ ಪ್ರಾಮುಖ್ಯತೆ ಪಡೆದು ಬೃಹತ್ ಪ್ರಮಾಣದಲ್ಲಿ ಬೆಳೆಯುವ ಸಾಧ್ಯತೆಯನ್ನು ಗಮನಿಸಬೇಕಾಗುತ್ತದೆ. ಆದುದರಿಂದ ವಾರ್ಗಿಕಗಳಿಂದ ಊರಿನ ಪ್ರಮಾಣವನ್ನಾಗಲೀ, ವಾಣಿಜ್ಯ ಸ್ಥಿತಿಯನ್ನಾಗಲೀ ಅರಿಯಲು ಸಾಧ್ಯವಿಲ್ಲ ಸಾಮಾನ್ಯ ವಾರ್ಗಿಕಗಳನ್ನು ಒಂದು ಊರನ್ನು ಅಳೆಯುವ ಸಾಧನವನ್ನಾಗಿ ಬಳಸಿಕೊಳ್ಳಲು ಸಾಧ್ಯವಿಲ್ಲ. ದೊಡ್ಡದಾಗಿ ಬೆಳೆದಿರುವ ಊರುಗಳೂ ಹಳ್ಳಿ, ಕೆರೆ, ಮಂಗಲ, ಮುಂತಾದ ವಾರ್ಗಿಕಗಳನ್ನೇ ಹೊಂದಿರುವುದನ್ನು ಗುರುತಿಸಬಹುದು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳಲ್ಲಿ ಪುರ, ಹಳ್ಳಿ, ಊರು – ವಾರ್ಗಿಕಗಳು ಹೆಚ್ಚಾಗಿ ಕಂಡುಬರುತ್ತದೆ. 'ನಗರ' ವಾರ್ಗಿಕವು 'ರಾಮನಗರ' ಸ್ಥಳನಾಮದ ಹೊರತಾಗಿ ಬೇರೆ ಯಾವ ತಾಲ್ಲೂಕಿನಲ್ಲಿಯೂ ಕಂಡುಬರುವುದಿಲ್ಲ, 'ಪೇಟೆ' ವಾರ್ಗಿಕವು ನಾಲ್ಕು ಸ್ಥಳನಾಮಗಳಲ್ಲಿ 'ಪಟ್ಟಣ' – ವಾರ್ಗಿಕವು ಏಳು ಸ್ಥಳನಾಮಗಳಲ್ಲಿ ಕಂಡುಬರುತ್ತದೆ. 'ಪುರ' ವಾರ್ಗಿಕವನ್ನು ಹೆಚ್ಚು ಗುರುತಿಸಬಹುದು.

| ನಗರ | ಪೇಟೆ | ಪಟ್ಟಣ |
|---|---|---|
| ರಾಮನಗರ | ಮಂಗಳವಾರಪೇಟೆ-ಚ | ಚನ್ನಪಟ್ಟಣ-ವ |
| | ಶುಕ್ರವಾರ ಪೇಟೆ-ಚ | ದ್ಯಾವಾಪಟ್ಟಣ-ಚ |
| | ಅಕ್ಕುಪೇಟೆ -ದೇ | ಬಳ್ಳಾಪಟ್ಟಣ-ಚ |
| | ದಾಬಸ್ ಪೇಟೆ-ನೆ | ಮಳೂರುಪಟ್ಟಣ-ಚ |
| | | ಚನ್ನರಾಯಪಟ್ಟಣ-ದೇ |
| | | ಬಸವಾಪಟ್ಟಣ-ನೆ |
| | | ಮಾದಾಪಟ್ಟಣ-ಮಾ |

ಮೇಲಿನ ವಾರ್ಗಿಕಗಳ ಪಟ್ಟಿಯನ್ನು ಗಮನಿಸಿದಾಗ ಪೇಟೆ, ಪಟ್ಟಣ, ನಗರ ಎಂಬ ವಾರ್ಗಿಕಗಳು, ನಗರ ಪ್ರದೇಶದ ಹೊರತಾಗಿ ಗ್ರಾಮಾಂತರ ಭಾಗಗಳಲ್ಲಿ ಬಳಕೆಯಲ್ಲಿರಲಿಲ್ಲವೆಂಬುದು ತಿಳಿದುಬರುತ್ತದೆ. ಇತ್ತೀಚಿಗೆ ಆಧುನಿಕ

ಬಡಾವಣೆಗಳು, ನಿರ್ಮಾಣವಾಗುತ್ತಿದ್ದು ಈ ರೀತಿಯ ಹೊಸ ಬಡಾವಣೆಗಳಿಗೆ 'ನಗರ' ಎಂಬ ವಾರ್ಗಿಕಗಳನ್ನು ನಿರ್ದಿಷ್ಟಗಳ ಜೊತೆ ಸೇರಿಸುತ್ತಿರುವುದನ್ನು ಗುರುತಿಸಬಹುದು. ಈ ರೀತಿಯ ಬಡಾವಣೆಗಳು ಮೂಲ ಊರಿನ ಜೊತೆಯಲ್ಲಿಯೇ ಸೇರಿಕೊಂಡಿರುವುದರಿಂದ ಇವುಗಳನ್ನು ಪ್ರತ್ಯೇಕ ಊರುಗಳೆಂದು ಬೇರ್ಪಡಿಸಿಲ್ಲ. ಆದುದರಿಂದ ಆಧುನಿಕ ಬಡಾವಣೆಗಳ ಹೆಸರುಗಳು ಸ್ಥಳೀಯ ಬಳಕೆಗೆ ಮಾತ್ರ ಸೀಮಿತವಾಗಿ ಬಳಕೆಯಾಗುತ್ತಿವೆ. ಈ ಬಡಾವಣೆಗಳಿಗೆ ಆಗಿರುವ ನಾಮನಿರ್ದೇಶನಗಳು ಸ್ಥಳೀಯ ಕಂದಾಯ ಇಲಾಖೆಯ ದಾಖಲೆಗಳಲ್ಲಿ ಬಳಕೆಯಲ್ಲಿರುತ್ತವೆ. ಆದರೆ ಪ್ರತ್ಯೇಕ ಊರುಗಳಾಗಿ ದಾಖಲಾಗುತ್ತಿಲ್ಲವಾದ್ದರಿಂದ, ಈ ಸ್ಥಳನಾಮಗಳನ್ನು ಪ್ರತ್ಯೇಕ ಊರೆಂದು ಪರಿಗಣಿಸಲು ಸಾಧ್ಯವಿಲ್ಲ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 'ಪುರ' ಎಂಬ ವಾರ್ಗಿಕಗಳನ್ನು ಬಳಸಿಕೊಂಡಿರುವ ಸ್ಥಳನಾಮಗಳ ಸಂಖ್ಯೆ ಅಧಿಕವಾಗಿವೆ. ಅತ್ಯಂತ ಸಣ್ಣ ಊರುಗಳಿಂದ ದೊಡ್ಡ ಊರುಗಳವರೆಗೆ 'ಪುರ' ಎಂಬ ವಾರ್ಗಿಕಗಳನ್ನು ಹೊಂದಿರುವುದನ್ನು ಗುರುತಿಸಬಹುದು. ಜನಸಾಂದ್ರತೆ ಹಾಗೂ ವಾಣಿಜ್ಯ ವ್ಯವಹಾರ ನಡೆಯುವ ದೃಷ್ಟಿಯಿಂದ, ಅತ್ಯಂತ ದೊಡ್ಡ ಊರುಗಳಾಗಿದ್ದರೂ, ಈ ರೀತಿಯ ವಾರ್ಗಿಕಗಳನ್ನು ಹೊಂದಿಲ್ಲದಿರುವುದು ವಿಶೇಷವಾಗಿ ಕಂಡುಬರುತ್ತದೆ.

## ೭.೬ 'ಪುರ' ವಾರ್ಗಿಕಗಳನ್ನು ಹೊಂದಿರುವ ಸ್ಥಳನಾಮಗಳು

| | |
|---|---|
| ನಾರಾಯಣ ಪುರ –ಕ | ಓಬಳಾಪುರ – ನೆ |
| ಬಾಳೇಪುರ – ಕ | ಕೃಷ್ಣರಾಜಪುರ – ನೆ |
| ಮಲ್ಲಪುರ – ಕ | ಕೆಂಪಾಪುರ – ನೆ |
| ಸಾಂಬಪುರ – ಕ | ಗೋಪಾಲಪುರ – ನೆ |
| ಅರ್ಕಾಪುರ – ಕ | ನರಸೀಪುರ – ನೆ |
| ಮೈಲನಾಥಪುರ – ಚ | ಕರಿಗಿರಿಪುರ – ಮಾ |
| ವಿರುಪಾಕ್ಷಪುರ – ಚ | ಕೆಂಚಯ್ಯನ ಪುರ – ಮಾ |
| ರಾಮಪುರ – ಚ | ಗೌರಾಪುರ – ಮಾ |
| ಕೃಷ್ಣಾಪುರ – ಚ | ಚಿನ್ನಾಪುರ – ಮಾ |
| ಬೈರಾಪುರ – ದೇ | ವೀರಾಪುರ – ಮಾ |
| ಬೈಚಾಪುರ – ದೇ | ಕುಂಭಾಪುರ – ರಾ |
| ವೆಂಕಟಾಪುರ – ದೇ | ಜಯಪುರ – ರಾ |
| ಲಕ್ಷ್ಮೀಪುರ – ದೇ | ಕ್ಯಾಸಾಪುರ – ರಾ |

ಕಾಚೀಪುರ - ದೇ

ಗಂಗಲಾಪುರ - ದೊ

ಜ್ಯೋತಿಪುರ - ದೊ

ತಿಪ್ಪಾಪುರ - ದೊ

ಅನಂತಪುರ - ದೊ

ಗಂಗಾಧರಪುರ - ದೊ

ಚಂದ್ರಾಪುರ - ಹೊ

ಕೋತಿಪುರ - ರಾ

ಮಾದಾಪುರ - ರಾ

ಕದಿರನಪುರ - ಹೊ

ಕೋಡಿಪುರ - ಹೊ

ಅಪ್ಪಾಜಿಪುರ - ಹೊ

ಚನ್ನಪುರ - ಹೊ

## ೭.೭ -ಆಲ್ - ಆಲ - ಜಲವಾಚಿ ಸ್ಥಳನಾಮಗಳು

ಆಲನತ್ತ - ಕ

ಆಲೂರು - ಕ, ನೆ

ದೊಡ್ಡಾಲಹಳ್ಳಿ - ಕ

ಆಲದ ಹಳ್ಳಿ - ನೆ

ಆಲದಕಟ್ಟೆ - ಮಾ

ಆಲ ಸೆಟ್ಟಿ ಹಳ್ಳಿ - ಮಾ

ಆಲಪ್ಪನ ಹಳ್ಳಿ - ಹೊ

ಆಲಹಳ್ಳಿ - ಕ, ದೊ

ಚಿಕ್ಕಆಲಹಳ್ಳಿ - ಕ

ಆಲೂರು ದುದ್ದನ ಹಳ್ಳಿ - ದೇ

ಆಲನಾಯಕನಹಳ್ಳಿ - ನೆ

ಆಲದುಟ್ಟೆ - ಮಾ

ಆಲೂರು - ಮಾ

ಆಲ ಗೊಂಡನ ಹಳ್ಳಿ - ಹೂ

## ೭.೮ ಅಗರ, ಅಗ್ರಹಾರ, ಮಂಗಲ ಸೂಚಕ ಸ್ಥಳನಾಮಗಳು.

ಅಗರ - ಕ

ಅಗ್ರಹಾರವಾಳ ಗೆರೆಹಳ್ಳಿ - ಚ

ನವರತ್ನ ಅಗ್ರಹಾರ - ದೇ

ಜೋಯಿಸ ಅಗ್ರಹಾರ - ದೊ

ಪುಟ್ಟಯ್ಯನ ಅಗ್ರಹಾರ - ದೊ

ಅಗ್ರಹಾರ ವಡ್ಡರ ಹಳ್ಳಿ - ಹೊ

ಕುಂಬೇನ ಅಗ್ರಹಾರ - ಹೊ

ಬಿದರ ಅಗ್ರಹಾರ -ಹೊ

ಅಗ್ರಹಾರ - ಕ

ತೇನೋಹಳ್ಳಿ ಅಗ್ರಹಾರ - ದೇ

ಕಾಮನ ಅಗ್ರಹಾರ - ದೊ

ನರಸಯ್ಯನ ಹಳ್ಳಿ ಅಗ್ರಹಾರ - ದೊ

ಅಗ್ರಹಾರ ಪಾಳ್ಯ - ದೊ

ಕಲ್ಲುಕುಂಟೆ ಅಗ್ರಹಾರ - ಹೊ

ಪೂಜೇನ ಅಗ್ರಹಾರ -ಹೊ

ವಗಟಾಅಗ್ರಹಾರ -ಹೊ

## ೭.೯ 'ಕಟ್ಟೆ', 'ಏರಿ' ಸೂಚಕ ಸ್ಥಳನಾಮಗಳು

ಕಣಿವೇ ಕಟ್ಟೆ - ಕ
ಹೊದಿಕೆ ಕಟ್ಟೆ - ಕ
ನೀರೇರಿ - ದೇ
ದೊಡ್ಡೇರಿ - ನೆ
ಆಲದ ಕಟ್ಟೆ - ಮಾ
ಆಲದ ಕಟ್ಟೆ ಪಾಳ್ಯ-ಮಾ
ದೊಮ್ಮನ ಕಟ್ಟೆ - ಮಾ
ನಸುರು ಮಾವಿನ ಕಟ್ಟೆ - ಮಾ
ಬಾಳೇ ಕಟ್ಟೆ - ಮಾ
ಹುಲಿ ಕಟ್ಟೆ - ಮಾ

## ೭.೧೦ 'ಊರು' ಪ್ರಾರ್ಗಿಕ ಒಳಗೊಂಡಿರುವ ಸ್ಥಳನಾಮಗಳು

ಆಲೂರು-ಕ
ಕಾನೂರು-ಕ
ಚೀಲೂರು - ಕ
ತಾಯಲೂರು ಅರಣ್ಯ - ಕ
ತಿಪ್ಪೂರು - ಕ
ದೊಂತೂರು - ಕ
ಬೇಲೂರು - ಕ
ಮಾವತ್ತೂರು - ಕ
ಮುಗ್ಗೂರು - ಕ
ಸಾತನೂರು - ಕ
ಹಣಕೆಡಬೂರು - ಕ
ಹಲಸೂರು - ಕ
ಅಕ್ಕೂರು - ಚ
ಅಬ್ಬೂರು - ಚ
ಇಗ್ಗಲೂರು - ಚ
ಕುಕ್ಕೂರು -ಚ
ಕೋಳೂರು - ಚ
ಚಿಕ್ಕಲೂರು - ಚ
ಚಿಕ್ಕಮಾಲೂರು -ಚ
ತೊರೆ ಹೊಸೂರು-ಚ
ನುಣ್ಣೂರು-ಚ
ನೆರಳೂರು -ಚ
ಬೇವೂರು-ಚ
ಮಳೂರು-ಚ
ಯಲಿಯೂರು-ಚ
ಸರಗೂರು-ಚ
ಹನಿಯೂರು-ಚ
ಹೊಂಗಾನೂರು-ಚ
ಉಣ ಚೂರು-ದೇ
ಎಲಿಯೂರು-ದೇ
ಗೋಣರು-ದೇ
ದುಮ್ಮನೂರು-ದೇ
ನಲ್ಲೂರು -ದೇ
ಬಾಗಲೂರು -ದೇ
ಬೆಟ್ಟಹಲಸೂರು - ದೇ
ಬೇಗೂರು - ದೇ
ಸಾತನೂರು - ದೇ
ಸೋಲೂರು - ದೇ

ಹರಳೂರು - ದೇ

ಕಾಡನೂರು - ದೊ

ಕೆಸ್ತೂರು - ದೊ

ತಿಪ್ಪೂರು - ದೊ

ಹುಸ್ಕೂರು - ದೊ

ಕೆರೆಕಟ್ಟೆಗನೂರು - ನೆ

ಬರಗೂರು - ನೆ

ಬೇಗೂರು - ನೆ

ಹಳ್ಳೂರು - ನೆ

ಕೂಡೂರು - ಮಾ

ಕೋಳೂರು - ಮಾ

ಗೋಳೂರು - ಮಾ

ಬಿಸಕೂರು - ಮಾ

ಮಾರೂರು - ಮಾ

ಸೋಲೂರು - ಮಾ

ಹುಲತೂರು - ರಾ

ಈಸ್ತೂರು - ಹೊ

ಕಾಟಮನಲ್ಲೂರು - ಹೊ

ಕೊರಳೂರು - ಹೊ

ಗಣಗಲೂರು -ಹೊ

ತಟ್ಟನೂರು - ಹೊ

ಮಾಲಿಮಾಕನೂರು - ಹೊ

ಸಾಕರನೂರು - ಹೊ

ಹರಳೂರು - ಹೊ

ಕಾಡು ತಿಪ್ಪೂರು - ದೊ

ಕೂಳೂರು - ದೊ

ಗುಂಜೂರು - ದೊ

ಶ್ರವಣೂರು - ದೊ

ಆಲೂರು - ನೆ

ನಾಗರೂರು - ನೆ

ಬಿದಲೂರು - ನೆ

ಲಕ್ಕೂರು - ನೆ

ಕಣ್ಣನೂರು - ಮಾ

ಕೂಡ್ಲೂರು - ಮಾ

ಗೂರೂರು - ಮಾ

ಚಿಕ್ಕ ಸೋಲೂರು - ಮಾ

ಮಲ್ಲೂರು - ಮಾ

ವರ್ತೂರು - ಮಾ

ಈಜೂರು - ರಾ

ಹುಲಿಕೆರೆಗನ್ನೂರು - ರಾ

ಕನ್ನೂರು ಹಳ್ಳಿ - ಹೊ

ಕಿತಗನೂರು - ಹೊ

ಕೊಳತೂರು - ಹೊ

ಗುಂಡೂರು - ಹೊ

ಚೆಳತೂರು - ಹೊ

ಮುತ್ತಕೂರು - ಹೊ

ಹನಿಯೂರು - ಹೊ

ಹುಸ್ಕೂರು - ಹೊ

## ೭.೧೧ -ಕಲ್, -ಕಲ್ಲು ಸೂಚಕ ಸ್ಥಳನಾಮಗಳು

ಕಲ್ಲನ ಕುಪ್ಪೆ - ಕ
ಕಲ್ಲಹಳ್ಳಿ - ಕ
ಕಗ್ಗಲ ಹಳ್ಳಿ - ಕ
ಕೋಟಗಲ್ಲು - ಕ
ಚಿಕ್ಕಕಲ್ ಬಾಳು - ಕ
ಚಿಕ್ಕಲ ಹಳ್ಳಿ - ಕ
ದೊಡ್ಡಕಲ್ಲ ಬಳ್ಳಿ - ಕ
ನಿಡಗಲ್ಲು - ಕ
ಬಿಳಿಕಲ್ ಅರಣ್ಯ - ಕ
ಕಲ್ಲಾಪುರ - ಚ
ಕಂಗಲ್ಲು - ಚ
ಚಿಕ್ಕಲೂರು - ಚ
ಕಗ್ಗಲ ಹಳ್ಳಿ - ದೇ
ಚಪ್ಪರ ಕಲ್ - ದೇ
ಕಲ್ಲು ಕೋಟೆ - ದೊ
ಕಲ್ಲು ದೇವನ ಹಳ್ಳಿ - ದೊ, ಮಾ
ಕಲ್ಲೋಡು - ದೊ
ಕಲ್ಲನಾಯಕನ ಹಳ್ಳಿ - ನೆ
ನಿಜಗಲ್ಲು - ನೆ
ಕಲ್ಲ ಹಟ್ಟಿ ಪಾಳ್ಯ - ಮಾ
ಕಲ್ಕೆರೆ - ಮಾ
ಗಾಣಕಲ್ಲು - ಮಾ
ಚಿಕ್ಕಮಸಕಲ್ಲು - ಮಾ
ದೊಡ್ಡಮಸಕಲ್ಲು - ಮಾ
ಪವನಕನ ಕಲ್ಲು - ಮಾ
ಮಾನಗಲ್ಲು - ಮಾ
ಶಂಕನ ಕಲ್ಲು - ಮಾ
ಹುಲ್ಲಿ ಕಲ್ಲು - ಮಾ
ಕುಣಿಗಲ್ಲು - ರಾ
ಕುತಗಲ್ಲು - ರಾ
ಗಣಕಲ್ಲು - ರಾ
ತೆಂಗಿನ ಕಲ್ಲು - ರಾ
ಸಿದ್ದ ಕಲ್ಲು - ರಾ
ಕಲ್ಲ ಹಳ್ಳಿ - ಹೊ
ಕಲ್ಲುಕುಂಟೆ ಅಗ್ರಹಾರ - ಹೊ

## ೭.೧೨ 'ಕೆರೆ' ಜಲಸೂಚಕ ವಾರ್ಗಿಕ ಹೊಂದಿರುವ ಸ್ಥಳನಾಮಗಳು

ಅರಕೆರೆ - ಕ
ಕೀರನಗೆರೆ - ಕ
ಚೀಲನಕೆರೆಕಾವಲು - ಕ
ತಟ್ಟೇಕೆರೆ - ಕ
ತಟ್ಟೇಕೆರೆ - ಕ,ಚ,ನೆ, ಮಾ
ಪಡುವನಗೆರೆ - ಕ
ಪಿಚ್ಚನಕೆರೆ - ಕ
ಬಳ್ಳಗೆರೆ - ಕ
ಮರಳಗೆರೆ - ಕ
ಯರಮಗೆರೆ - ಕ
ಕೆರೆಕಾವಲ್ -ಕ
ಸೋಲಿಗ್ಗೆರೆ - ಕ

ಅಣಗೆರೆ - ಕ

ಕೆಳಗೆರೆ - ಚ

ಚಿಕ್ಕೆರೆ -ಚ

ತಗಡಿಗೆರೆ - ಚ

ಬೆಳಕೆರೆ -ಚ

ಮಲ್ಲನಗೆರೆ - ಚ

ಸಂಕಲಗೆರೆ - ಚ

ಬೂದಿಗೆರೆ - ದೇ

ಕೋಳಿಗೆರೆ - ದೊ

ತೂಬುಗೆರೆ - ದೊ

ಬೀದಿಕೆರೆ -ದೊ

ಗೊತ್ತಿಗೆರೆ - ನೆ

ತಾಳೆಕೆರೆ - ನೆ,ಮಾ

ಬಳ್ಳಕೆರೆ - ನೆ

ಬೇತನಗೆರೆ - ನೆ

ಯಲಚಗೆರೆ - ನೆ

ಉಡುವಗೆರೆ - ಮಾ

ಕೆಂಕೆರೆ - ಮಾ

ಜಾನಿಗೆರೆ - ಮಾ

ನೇರಳಕೆರೆ - ಮಾ

ಮತಿಗೆರೆ - ಮಾ

ಚಿಕ್ಕಸೂಳಿಕೆರೆ - ರಾ

ಸಬ್ಬಕೆರೆ -ರಾ

ಗೊರವೀಗೆರೆ - ಹೊ

ಬೆಳ್ಳಿಕೆರೆ -ಹೊ

ವಳಗೆರೆ ಪುರ - ಹೊ

ಕೂರ್ಣಗೆರೆ - ಚ

ಗೌಡನಗೆರೆ - ಚ

ಝುತ್ತೇಕೆರೆ -ಚ

ತೂಬಿನಕೆರೆ -ಚ

ಮುತ್ತೀಕೆರೆ -ಚ

ಮೂಡಿಗೆರೆ - ಚ

ಕುದುರೆಗೆರೆ - ದೇ

ಸೆಟ್ಟಿಗೆರೆ - ದೇ

ಚಿಕ್ಕವಡಿಗೆರೆ - ದೊ

ದೊಡ್ಡವಡಿಗೆರೆ - ದೊ

ಕಡಬಗೆರೆ - ನೆ

ತಾವರೆಕೆರೆ -ನೆ

ತೋಟಗೆರೆ - ನೆ

ಬೆಣ್ಣೆಗೆರೆ - ನೆ

ಭಾವಿಕೆರೆ - ನೆ

ಅತ್ತಿಂಗೆರೆ - ಮಾ

ಕಲ್ಕೆರೆ - ಮಾ

ಗುಂಡಿಗೆರೆ - ಮಾ

ದೊಡ್ಡಮೂಡಿಗೆರೆ - ಮಾ

ಬಗನಿಗೆರೆ - ಮಾ

ಆವಾರಗೆರೆ - ರಾ

ಬನ್ನೀಗೆರೆ -ರಾ

ಹುಲಿಕೆರೆಗನ್ನೂರು - ರಾ

ಚಿಕ್ಕಅರಳೀಗೆರೆ - ಹೊ

ಮಾರನಗೆರೆ - ಹೊ

### ೭.೧೩ 'ಕುಂಟೆ' ಜಲಸೂಚಕ ವಾರ್ಗಿಕ ಹೊಂದಿರುವ ಸ್ಥಳನಾಮಗಳು

ಅರಸಿನಕುಂಟೆ - ದೇ, ಮಾ

ಗೊಬ್ಬರಕುಂಟೆ - ದೇ

ನೆಲ್ಲುಕುಂಟೆ - ದೇ

ಮೀನಕುಂಟೆ - ದೇ

ಗೌಡನಕುಂಟೆ - ದೊ

ನೆಲ್ಲುಕುಂಟೆ - ದೊ

ಹುಲ್ಲುಕುಂಟೆ - ದೊ

ಮಾವಿನಕುಂಟೆ - ನೆ

ಉಂಬತನಕುಂಟೆ - ಮಾ

ಕ್ಲಲುಕುಂಟೆ ಅಗ್ರಹಾರ - ಹೊ

ರಾಳ್ಳಕುಂಟೆ - ಹೊ

ಕುರುಬರಕುಂಟೆ - ದೇ

ಚಲಮುಕುಂಟೆ - ದೇ

ಮರಳುಕುಂಟೆ - ದೇ

ಕಾಂತನಕುಂಟೆ - ದೊ

ತೂಬುಕುಂಟೆ - ದೊ

ಸೂಳಿಕುಂಟೆ - ದೊ,ನೆ

ಅರಶಿನಕುಂಟೆ - ನೆ

ಉದಕುಂಟೆ - ಮಾ

ಮಲ್ಲಿಕುಂಟೆ - ಮಾ

ದಬ್ಬಗುಂಟೆ - ಹೊ

### ೭.೧೪ 'ಕುಪ್ಪೆ' ವಾರ್ಗಿಕ ಸೂಚಿಸುವ ಸ್ಥಳನಾಮಗಳು

ಅತ್ತಿಗುಪ್ಪೆ -ಕ,ಚ

ತಟ್ಟೇಗುಪ್ಪೆ -ಕ

ಬೇಕುಪ್ಪೆ - ಕ

ಮೂಡಲಸ್ವಾಮಿಕುಪ್ಪೆ -ಕ

ಅಗಲಗುಪ್ಪೆ -ನೆ

ತೋಣಚನಕುಪ್ಪೆ -ನೆ

ಗೆಜ್ಜಗಾರಕುಪ್ಪೆ - ಮಾ

ತಗಚುಗುಪ್ಪೆ - ಮಾ

ಬೈಚುಕುಪ್ಪೆ - ಮಾ

ಯಲಚಕುಪ್ಪೆ - ಮಾ

ಅಬ್ಬನಕುಪ್ಪೆ - ರಾ

ಕಲ್ಲನಕುಪ್ಪೆ - ಕ

ಬನ್ನಿಕುಪ್ಪೆ - ಕ,ರಾ

ಬೀರನಗುಪ್ಪೆ -ಕ

ಗಜ್ಜಗುಪ್ಪೆ --ದೇ

ಆವಲಕುಪ್ಪೆ -ನೆ

ಮಾಕನಕುಪ್ಪೆ -ನೆ

ಚುಂಚನಕುಪ್ಪೆ - ಮಾ

ತಗ್ಗೀಕುಪ್ಪೆ - ಮಾ

ಮಾರಿಕುಪ್ಪೆ - ಮಾ

ಸೀಗೆಕುಪ್ಪೆ - ಮಾ

ತಾಳಗುಪ್ಪೆ - ರಾ

### ೭.೧೫ 'ಕೊಪ್ಪ' ವಾರ್ಗಿಕ ಸೂಚಕ ಸ್ಥಳನಾಮಗಳು

ಅರೆಕೊಪ್ಪ - ಕ

ಚಿಕ್ಕೊಪ್ಪ - ಕೆ

ಕೆರೆಕೊಪ್ಪ - ಚ

ಕೋಟೆಕೊಪ್ಪ - ಕ

ದೊಡ್ಡಕೊಪ್ಪ - ಕೆ

ಹಾರೋಕೊಪ್ಪ - ಚ

## ೭.೧೬ 'ಕೋಡಿ' ಘಟಕ ಸೂಚಿಸುವ ಸ್ಥಳನಾಮಗಳು

ಕೋಡಿಹಳ್ಳಿ -ಕ, ನೆ, ಮಾ, ಹೊ

ಕೋಡಿಹೊಸಹಳ್ಳಿ - ಚ

ಕೋಡಿಪಾಳ್ಯ - ನೆ, ಮಾ

ಹೆಬ್ಬಾರ ಕೋಡಿ - ರಾ

ಕೋಡಿಪುರ - ಚ, ಹೊ

ಕೋಡಿಮಂಚೇನಹಳ್ಳಿ - ದೇ

ಕೋಡಿಯಾಲ ಕರೇನಹಳ್ಳಿ - ರಾ

## ೭.೧೭ 'ಸಂದ್ರ' ವಾರ್ಗಿಕ ಸೂಚಕ ಸ್ಥಳನಾಮಗಳು

ಕೂಡುಜಕ್ಕಸಂದ್ರ - ಕ

ಚನ್ನಸಂದ್ರ - ಕ

ತಮ್ಮಸಂದ್ರ - ಕ

ದ್ಯಾವಸಂದ್ರ - ಕ

ಬೊಮ್ಮಸಂದ್ರ - ಕ

ರಾಯಸಂದ್ರ - ಕ

ಸಿಂಗಸಂದ್ರ - ಕ

ಅರಳಾಳುಸಂದ್ರ - ಚ

ಕಮ್ಮಸಂದ್ರ - ನೆ,ಹೊ

ನಾಗಸಂದ್ರ - ನೆ

ಲಕ್ಕಸಂದ್ರ - ನೆ

ಕನ್ನಸಂದ್ರ - ಮಾ

ತಿಪ್ಪಸಂದ್ರ - ಮಾ

ತಿಮ್ಮಸಂದ್ರ - ಚ,ದೇ,ಹೊ

ಚನ್ನಸಂದ್ರ - ದೇ

ಮಂಗಸಂದ್ರ - ದೇ

ರಾಯಸಂದ್ರ - ದೇ

ಜುನ್ನಸಂದ್ರ - ದೊ

ನಾಗಸಂದ್ರ - ದೊ

ಮಾರಸಂದ್ರ - ದೊ

ಬಿಟ್ಟಸಂದ್ರ - ಮಾ

ಕೆರಳಾಳುಸಂದ್ರ - ಕ

ಕೋಣಸಂದ್ರ - ಕ

ತೋಕಸಂದ್ರ - ಕ

ವೀರಸಂದ್ರ - ಕ

ಮಾರಸಂದ್ರ - ಕ

ವಿರೂಪಸಂದ್ರ - ಕ

ಅರಳಸಂದ್ರ - ಚ

ಅರಳಸಂದ್ರ - ನೆ

ಜಕ್ಕಸಂದ್ರ - ನೆ

ಮಲ್ಲಸಂದ್ರ - ನೆ,ಮಾ,ಹೊ

ಹರಿವೇಸಂದ್ರ - ನೆ

ಗುಮ್ಮಸಂದ್ರ - ಮಾ

ಕನ್ನಸಂದ್ರ - ಚ

ವಿರುಪಸಂದ್ರ - ಚ,ರಾ

ವೀರಸಂದ್ರ - ದೇ

ಮಾಯಸಂದ್ರ - ದೇ

ಗುಂಡಸಂದ್ರ - ದೊ

ಜಕ್ಕಸಂದ್ರ - ದೊ

ಬೈರಸಂದ್ರ - ದೊ

ಲಕ್ಕಸಂದ್ರ - ದೊ

ಮಲ್ಲಸಂದ್ರ - ಮಾ,ಹೊ

ಲಕ್ಕಸಂದ್ರ - ಮಾ,ರಾ
ಶಿವನಸಂದ್ರ - ಮಾ
ಅಲಾಳಸಂದ್ರ - ರಾ
ಅರಳಾಸಂದ್ರ - ರಾ
ಹರಿಸಂದ್ರ - ರಾ
ಆಪ್ಪಸಂದ್ರ - ಹೊ
ಇಟ್ಟಸಂದ್ರ - ಹೊ
ಚನ್ನಸಂದ್ರ - ಹೊ
ಚಿಕ್ಕಸಂದ್ರ - ಹೊ
ಚೌಡಸಂದ್ರ - ಹೊ
ದ್ಯಾವಸಂದ್ರ - ಹೊ
ದೊಡ್ಡದುಮ್ಮಸಂದ್ರ - ಹೊ
ದೊಮ್ಮಸಂದ್ರ - ಹೊ
ಮುತ್ತಸಂದ್ರ - ಹೊ
ವಾಬಸಂದ್ರ - ಹೊ

## ೭.೧೮ 'ಹಟ್ಟಿ' ವಾರ್ಗಿಕ ಸೂಚಿಸುವ ಸ್ಥಳನಾಮಗಳು

ಗುಳ್ಳಹಟ್ಟಿಕಾವಲು - ಕ
ಬಾಚೇನಹಟ್ಟಿ - ಮಾ
ಬನವಟ್ಟಿ - ದೊ

## ೭.೧೯ 'ಹಳ್ಳಿ' ವಾರ್ಗಿಕ ಸೂಚಿಸುವ ಸ್ಥಳನಾಮಗಳು

**ಕನಕಪುರ ತಾಲ್ಲೂಕು**

ಅಜ್ಜ ಬಸವನಹಳ್ಳಿ
ಅತ್ತಿಹಳ್ಳಿ
ಅನುಮನಹಳ್ಳಿ (ಹ)
ಅನುವನಹಳ್ಳಿ (ಸಾ.ಹೋ.)
ಅರೆಹೊಸಹಳ್ಳಿ
ಅಲ್ಲಿಮಾರನಹಳ್ಳಿ
ಆನೆಹೊಸಹಳ್ಳಿ
ಆಲಹಳ್ಳಿ
ಉದಾರಹಳ್ಳಿ
ಉಯ್ಯಂಬಳ್ಳಿ
ಕಗ್ಗಲಹಳ್ಳಿ
ಕಚುವನಹಳ್ಳಿ
ಕಲ್ಲಹಳ್ಳಿ
ಕಾಡಹಳ್ಳಿ
ಕಾಂಚನಹಳ್ಳಿ
ಕುರುಬರಹಳ್ಳಿ
ಕೂತಹಳ್ಳಿ
ಕೂತುಗೊಂಡನಹಳ್ಳಿ
ಕೆಂಗಲುನತ್ತಹಳ್ಳಿ (ಕೆಂಗಲುನತ್ತ ಗೊಲ್ಲಹಳ್ಳಿ)
ಕೊಕ್ಕರೆಹೊಸಹಳ್ಳಿ
ಕೊಳ್ಳಿಗಾನಹಳ್ಳಿ
ಕೋಡಿಹಳ್ಳಿ
ಗಣಗನಹಳ್ಳಿ
ಗಧಾರಹಳ್ಳಿ
ಗುಡ್ಡೇವೀರನ ಹೊಸಹಳ್ಳಿ
ಗೇರಹಳ್ಳಿ

ಗೊಟ್ಟಗೇಹಳ್ಳಿ

ಗೊಲ್ಲಹಳ್ಳಿ (ಉ.ಹೋ.)

ಗೊಲ್ಲಹಳ್ಳಿ (ಹಾ.ಹೋ.)

ಚಾಕಹಳ್ಳಿ

ಚಿಕ್ಕದೇವರಹಳ್ಳಿ

ಚಿಕ್ಕಬೆಟ್ಟನಹಳ್ಳಿ

ಚಿಕ್ಕಸಾದೇನಹಳ್ಳಿ

ಚಿಕ್ಕಲಹಳ್ಳಿ

ತಿಗಳರಹಳ್ಳಿ

ತಿಗಳರಹೊಸಹಳ್ಳಿ

ತಿಟ್ಟಮೇಲನಗೊಲ್ಲಹಳ್ಳಿ

ತುರುಕರಹೊಸಹಳ್ಳಿ (ಟಿ.ಹೊಸಹಳ್ಳಿ)

ತೆಂಗನಾಯಕನಹಳ್ಳಿ

ತೋಟಹಳ್ಳಿ

ದೇವರಕಗ್ಗಲಹಳ್ಳಿ

ದೇವರಹಳ್ಳಿ

ದೇಶವಳ್ಳಿ

ದೊಡ್ಡಕಬ್ಬಹಳ್ಳಿ

ದೊಡ್ಡಕಲ್ಲಬಳ್ಳಿ

ದೊಡ್ಡಸಾದೇನಹಳ್ಳಿ

ದೊಲ್ಲಹಳ್ಳಿ

ನಲ್ಲಹಳ್ಳಿ

ನಾಯಕನಹಳ್ಳಿ

ಪುರುಷಗೌಡನಹಳ್ಳಿ

ಬರದಾನಹಳ್ಳಿ

ಬಸವನಹಳ್ಳಿ

ಬಾಚೆಹಳ್ಳಿ

ಬಾಲಗೌಡನಹಳ್ಳಿ

ಬಿಜ್ಜಹಳ್ಳಿ

ಬೆಟ್ಟಹಳ್ಳಿ ಕಾವಲು

ಬೊಮ್ಮನಹಳ್ಳಿ

ಭಂಡಿಗಾನಹಳ್ಳಿ

ಭೂಹಳ್ಳಿ

ಮಲ್ಲಪ್ಪನಹೊಸಹಳ್ಳಿ

ಮಹಿಮನಹಳ್ಳಿ

ಮಾದನಹಳ್ಳಿ

ಮಾದರಹಳ್ಳಿ

ಮಾರದೇವನಹಳ್ಳಿ

ಮಾಹಳ್ಳಿ

ಮುದೇಹಳ್ಳಿ

ಮುರಡಿಹೊಸಹಳ್ಳಿ

ಮುಳ್ಳಹಳ್ಳಿ

ಮೇದಮಾರನಹಳ್ಳಿ

ಮೊರಸರಹಳ್ಳಿ (ಮರಸರಹಳ್ಳಿ)

ಯಡೆಮಾರನಹಳ್ಳಿ

ಯರಹಳ್ಳಿ (ಯರೇಹಳ್ಳಿ)

ಯಲಚಹಳ್ಳಿ

ಯದುಗೌಡನಹಳ್ಳಿ

ಯೆರೆಹಳ್ಳಿ

ರಾಗೀಹಳ್ಳಿ (ರಾಜ್ಯ ಅರಣ್ಯ)

ರಾಮನಹಳ್ಳಿ

ವಡೇರಹಳ್ಳಿ

ಶಿವನಹಳ್ಳಿ

ಸೂರನಹಳ್ಳಿ

ಸೋಮೇದ್ಯಾಪನಹಳ್ಳಿ

ಹನುಮನಹಳ್ಳಿ

ಹಲಸಿನಮರದಹಳ್ಳಿ

ಹಾರೋಶಿವನಹಳ್ಳಿ

ಹುಣಸನಕೋಡಿಹಳ್ಳಿ

ಹುಣಸನಹಳ್ಳಿ

ಹುಯಲಪ್ಪನಹಳ್ಳಿ

ಹುಲಗೊಂಡನಹಳ್ಳಿ

ಹೇರಂದ್ಯಾಪನಹಳ್ಳಿ

ಹೇಳಿಗೆಹಳ್ಳಿ

ಹೊನ್ನಹಳ್ಳಿ

ಹೊನ್ನಗಾನಹಳ್ಳಿ (ಹೊನ್ನಿಗನಹಳ್ಳಿ)

ಹೊನ್ನಿಗನಹಳ್ಳಿ

ಹೊಸಹಳ್ಳಿ (ಮ.ಹೋ.)

ಹೊಸಹಳ್ಳಿ (ಸಾ.ಹೋ.)

ಹೊಸಹಳ್ಳಿ ಟಿ.

## ಚನ್ನಪಟ್ಟಣ ತಾಲ್ಲೂಕು

ಅಗ್ರಹಾರವಾಳ ಗೆರೆಹಳ್ಳಿ

ಅಜ್ಜನಹಳ್ಳಿ

ಅಂಕುಶನಹಳ್ಳಿ

ಅಂಬಾಡಹಳ್ಳಿ

ಉಜ್ಜನಹಳ್ಳಿ

ಎಲೇತೋಟದಹಳ್ಳಿ

ಕಾಡುಕೊತ್ತನಹಳ್ಳಿ (ತೋಟ)

ಕಾಡುಕೊತ್ತನಹಳ್ಳಿ

ಕೋಡಂಬಳ್ಳಿ

ಕೋಡಿಹೊಸಹಳ್ಳಿ

ಕೋತನಹಳ್ಳಿ

ಕೋಮನಹಳ್ಳಿ

ಗರಕಹಳ್ಳಿ

ಗುಡ್ಡೇಹೊಸಹಳ್ಳಿ

ಗೋವಿಂದನಹಳ್ಳಿ

ಚಿಕ್ಕೇನಹಳ್ಳಿ

ಚೋಳಮಾರನಹಳ್ಳಿ

ತವಾತನಹಳ್ಳಿ

ತವಾತನಹಳ್ಳಿ ದೊಡ್ಡಿ

ತೆಂಕನಹಳ್ಳಿ

ದೇವರಹಳ್ಳಿ

ದೇವರಹೊಸಹಳ್ಳಿ

ದೊಡ್ಡನಹಳ್ಳಿ ಅಥವಾ ಅತ್ತಿಗುಪ್ಪೆ

ನೀಲಕಂಠನಹಳ್ಳಿ

ನೆಲಮಾಕನಹಳ್ಳಿ

ಬಸಂತನಹಳ್ಳಿ

ಬಂದೂರುವಳಗೆರೆಹಳ್ಳಿ

ಬಾಚೆಹಳ್ಳಿ ಬಾಣಗಹಳ್ಳಿ

ಬ್ಯಾಡರಹಳ್ಳಿ (ಮಾ.ಹೋ.)

ಬ್ಯಾಡರಹಳ್ಳಿ (ವಿ.ಹೋ.)

ಬೂಹಳ್ಳಿ

ಭೈರನಾಯಕನಹಳ್ಳಿ

ಭೈರಸಟ್ಟಹಳ್ಳಿ
ಬೊಮ್ಮನಹಳ್ಳಿ
ಮಂಡ್ಯಬೊಮ್ಮ
ನಾಯಕನಹಳ್ಳಿ
ಮಾರ್ಚನ್ನಹಳ್ಳಿ
ಮೆಣಸಿಗನಹಳ್ಳಿ (ಮನಸಿಗಾನಹಳ್ಳಿ)
ಮೈಲನಾಯಕನಹಳ್ಳಿ
ಮೊಗೇನಹಳ್ಳಿ
ಯಲೆಹೊಸಹಳ್ಳಿ
ವಡೇಹಳ್ಳಿ ಕೆ.
ವಿಟ್ಟಲೇಶಹಳ್ಳಿ
ಶಾನುಬೋಗನಹಳ್ಳಿ
ಸಣಬನಹಳ್ಳಿ
ಸಂತೆಮೊಗೇನಹಳ್ಳಿ
ಸಾದಹಳ್ಳಿ
ಸಿದ್ದನಹಳ್ಳಿ
ಸೀಬಹಳ್ಳಿ
ಸುಣ್ಣಘಟ್ಟ
ಸೆಟ್ಟಹಳ್ಳಿ
ಸೌದಾಹಳ್ಳಿ
ಹಳೇಹಳ್ಳಿ
ಹುಣಸನಹಳ್ಳಿ
ಹೊಟ್ಟಿಗಾನ ಹೊಸಹಳ್ಳಿ
ಹೊನ್ನಾಯಕನಹಳ್ಳಿ
ಹೊನ್ನಿಗನಹಳ್ಳಿ
ಹೊನ್ನಿಗನಹಳ್ಳಿ
ಹೊಸಹಳ್ಳಿ

## ದೇವನಹಳ್ಳಿ ತಾಲ್ಲೂಕು

ಅಕ್ಕಲೇನಹಳ್ಳಿ (ಮಲ್ಲೇನಹಳ್ಳಿ)
ಅಪ್ಪಾರಹಳ್ಳಿ
ಅಬ್ಬಚಿಕ್ಕನಹಳ್ಳಿ
ಅರದೇಶಹಳ್ಳಿ
ಅರಸನಹಳ್ಳಿ
ಅರುವನಹಳ್ಳಿ
ಆಲೂರುದುದ್ದನಹಳ್ಳಿ
ಇರಗೇನಹಳ್ಳಿ (ಇರಿಗಾನಹಳ್ಳಿ)
ಉಪ್ಪಾರಹಳ್ಳಿ
ಎರ್ರಪ್ಪನಹಳ್ಳಿ (ಯೆರ್ರಪ್ಪನಹಳ್ಳಿ)
ಕಗ್ಗಲಹಳ್ಳಿ
ಕಟ್ಟಿಗನಹಳ್ಳಿ (ಕಟ್ಟಿಗೇನಹಳ್ಳಿ)
ಕದಿಗನಹಳ್ಳಿ (ಕೊಡಿಗೇನಹಳ್ಳಿ)
ಕವಡದಾಸನಹಳ್ಳಿ
ಕಾಮೇನಹಳ್ಳಿ
ಕಾರಹಳ್ಳಿ
ಕಾರಹಳ್ಳಿ ಅಮಾನಿಕೆರೆ
ಕೆಂಪತಿಮ್ಮನಹಳ್ಳಿ (ಕ.ಹೋ.)
ಕೆಂಪತಿಮ್ಮನಹಳ್ಳಿ (ಕು.ಹೋ.)
ಕೊಟ್ಟಿಗೆತಿಮ್ಮನಹಳ್ಳಿ
ಕೊಡಿಗೇನಹಳ್ಳಿ
ಕೊಂಡೇನಹಳ್ಳಿ (ಜ.ಹೊ.)

ಕೊಂಡೇನಹಳ್ಳಿ (ವಿ.ಹೊ.)
ಕೋಡಿಮಂಚೇನಹಳ್ಳಿ (ಕೋಡಿಮಂಚನಹಳ್ಳಿ)
ಗಡ್ಡದನಾಗೇನಹಳ್ಳಿ
ಗಡೇನಹಳ್ಳಿ
ಗಂಗಮುತ್ತನಹಳ್ಳಿ
ಚೌಡಪ್ಪನಹಳ್ಳಿ
ಗುಟ್ಟಹಳ್ಳಿ
ಗುಡುವನಹಳ್ಳಿ
ಗುಮ್ಮನಹಳ್ಳಿ
ಗುಳೋಬನಹಳ್ಳಿ
ಗುಂಡಲಹಳ್ಳಿ
ಗೂಡ್ಲುಮುದ್ದೇನಹಳ್ಳಿ
ಗೊಲ್ಲಹಳ್ಳಿ (ಬಾ.ಹೊ.)
ಗೊಲ್ಲಹಳ್ಳಿ (ವಿ.ಹೊ.)
ಗೋಕರೆಬಾಚೇಹಳ್ಳಿ (ಗೋಕರೆಬಾಚೇನಹಳ್ಳಿ)
ಚನ್ನಹಳ್ಳಿ ೧
ಚನ್ನಹಳ್ಳಿ ೨
ಚಿಕ್ಕಗೊಲ್ಲಹಳ್ಳಿ
ಚಿಕ್ಕಚನ್ನಹಳ್ಳಿ
ಚಿಕ್ಕಚೇಮನಹಳ್ಳಿ
ಚಿಕ್ಕನಹಳ್ಳಿ
ಚಿಕ್ಕನಹೊಸಹಳ್ಳಿ
ಚಿಕ್ಕರಾಮನಹಳ್ಳಿ
ಚಿಕ್ಕವಾಬನಹಳ್ಳಿ
ಚಿಕ್ಕಸನ್ನೆ ಚಿಕ್ಕಹಳ್ಳಿ (ಚಿಕ್ಕನಹಳ್ಳಿ)
ಚಿನ್ನಕೆಂಪನಹಳ್ಳಿ
ಚಿನುವಂದಹಳ್ಳಿ
ಚಿಮಾಚನಹಳ್ಳಿ
ಚಂದೇನಹಳ್ಳಿ
ಚೊಕ್ಕನಹಳ್ಳಿ
ಚೌಡಪ್ಪನಹಳ್ಳಿ (ಚೌಡನಹಳ್ಳಿ)
ಜನ್ನಹಳ್ಳಿ
ಜುಟ್ಟನಹಳ್ಳಿ
ಜೋಗಹಳ್ಳಿ
ತಟ್ಟಮಾಚನಹಳ್ಳಿ ಅಮಾನಿಕೆರೆ
ತಮ್ಮೇನಹಳ್ಳಿ
ತಿಮ್ಮನಹಳ್ಳಿ ೧
ತಿಮ್ಮನಹಳ್ಳಿ ೨ (ತಿಮ್ಮೇನಹಳ್ಳಿ)
ಹೊಸಹಳ್ಳಿ
ತೇನೋಹಳ್ಳಿ ಅಗ್ರಹಾರ
ತಲ್ಲೋಹಳ್ಳಿ
ದಂಡಿಗಾನಹಳ್ಳಿ
ದಾಸನಾಯಕನಹಳ್ಳಿ
ದಾಸರಹಳ್ಳಿ
ದ್ಯಾವರಹಳ್ಳಿ
ದೇವಗಾನಹಳ್ಳಿ
ದೇವನಹಳ್ಳಿ
ದೇವನಾಯಕನಹಳ್ಳಿ
ದೇವಸ್ಥಾನದಹಳ್ಳಿ
ದೊಡ್ಡಕುರುಬರಹಳ್ಳಿ
ದೊಡ್ಡಗೊಲ್ಲಹಳ್ಳಿ
ದೊಡ್ಡಪ್ಪನಹಳ್ಳಿ

| | |
|---|---|
| ದೊಡ್ಡಸಾಗರಹಳ್ಳಿ | ನರಗಹಳ್ಳಿ (ನರಗಾನಹಳ್ಳಿ) |
| ನಲ್ಲಪ್ಪನಹಳ್ಳಿ | ನಾಗನಾಯಕನಹಳ್ಳಿ |
| ಪ್ರಸನ್ನಹಳ್ಳಿ | ಪಾಪನಹಳ್ಳಿ (ಚ.ಹೊ.) |
| ಪೂಜನಹಳ್ಳಿ | ಪೋಲನಹಳ್ಳಿ |
| ಬೆತ್ತರೇನಹಳ್ಳಿ | ಬಂಡಿಕೋಗೇನಹಳ್ಳಿ |
| ಬಂಡಿಕೊಡಿಗೇನಹಳ್ಳಿ | ಬಂದರಮಾನಹಳ್ಳಿ |
| ಬಯ್ಯನಹಳ್ಳಿ | ಬಾಚಹಳ್ಳಿ |
| ಬಾಲನಿಮ್ಮನಹಳ್ಳಿ | ಬ್ಯಾಡರಹಳ್ಳಿ ೧ |
| ಬ್ಯಾಡರಹಳ್ಳಿ ೨ (ಬೈಯ್ಯಪ್ಪನಹಳ್ಳಿ) | ಬಿಲಮಾರನಹಳ್ಳಿ |
| ಬೀದಿಗನಹಳ್ಳಿ | ಬೀರಸಂದ್ರ |
| ಬುಳ್ಳಹಳ್ಳಿ | ಬೆಟ್ಟನಹಳ್ಳಿ |
| ಬೈರದೇನಹಳ್ಳಿ | ಬೈರಪ್ಪನಹಳ್ಳಿ |
| ಬೊಮ್ಮನಹಳ್ಳಿ | ಬೋಯಲಹಳ್ಳಿ |
| ಭಟ್ರಮಾರೇನಹಳ್ಳಿ | ಭುವನಹಳ್ಳಿ |
| ಮಲ್ಲಿಗೇನಹಳ್ಳಿ | ಮಲ್ಲೇನಹಳ್ಳಿ |
| ಕೊಡಿಗೇನಹಳ್ಳಿ | ಮಂಚಪ್ಪನಹೊಸಹಳ್ಳಿ |
| ಮಾನಗೊಂಡನಹಳ್ಳಿ (ಮಾನಗೊಂಡಹಳ್ಳಿ) | ಮಾರೇಗೊಂಡನಹಳ್ಳಿ |
| ಮಾರನಾಯಕನಹಳ್ಳಿ | ಮಾರೇನಹಳ್ಳಿ |
| ಮೀಸಗೇನಹಳ್ಳಿ | ಮೀಸಿಗನಹಳ್ಳಿ |
| ಮೀಸಿಗಹಳ್ಳಿ | ಮುತ್ತುಗದಹಳ್ಳಿ |
| ಮುದ್ದನಾಯಕನಹಳ್ಳಿ | ಮುದ್ದೇನಹಳ್ಳಿ |
| ಮುಳ್ಳಿಅಮಾನಿಕೆರೆ | ಮೂಡಿಗಾನಹಳ್ಳಿ |
| ಮೈಲನಹಳ್ಳಿ | ಯಳುವಹಳ್ಳಿ |
| ಯರ್ತಿಗಾನಹಳ್ಳಿ | ಯಂಬ್ರಹಳ್ಳಿ |
| ರೆಡ್ಡಿಹಳ್ಳಿ | ರುಬ್ಬನಹಳ್ಳಿ |
| ಲಾಲಗೊಂಡಹಳ್ಳಿ | ಲಿಂಗದೀರಗೊಲ್ಲಹಳ್ಳಿ |

ವಡಿಗೇನಹಳ್ಳಿ ಅಮಾನಿಕೆರೆ
ವಡೇರಹಳ್ಳಿ
ವರದೇಹಳ್ಳಿ
ವಾಜರಹಳ್ಳಿ
ವೆಂಕಟೇಶನಹಳ್ಳಿ
ಶ್ಯಾನಪ್ಪನಹಳ್ಳಿ
ಶ್ಯಾತಕುಂಟನಹಳ್ಳಿ
ಶ್ರೋತ್ರಿಯತೆಲ್ಲೋಹಳ್ಳಿ
ಸವಕನಹಳ್ಳಿ
ಸಾದಹಳ್ಳಿ
ಸಿಂಗಹಳ್ಳಿ
ಸೆಟ್ಟರಹಳ್ಳಿ
ಸೆಟ್ಟಿಹಳ್ಳಿ (ಸೆಟ್ಟರಹಳ್ಳಿ)
ಸೌತೇಗೌಡನಹಳ್ಳಿ
ಸೋಮತನಹಳ್ಳಿ
ಹರಳೂರು ನಾಗೇನಹಳ್ಳಿ
ಹಂದರಹಳ್ಳಿ
ಹಿರೇಗಾನಹಳ್ಳಿ
ಹುಣಸೆಮಾರನಹಳ್ಳಿ
ಹುಲ್ಲಹಳ್ಳಿ
ಹುತ್ತನಹಳ್ಳಿ (ವಿದ್ಯಾನಗರ)
ಹೂವಿನಾಯಕನಹಳ್ಳಿ
ಹೆಗ್ಗನಹಳ್ಳಿ
ಹೊಸಳ್ಳಿ
ಹೊಸಹಳ್ಳಿ (ಚ.ಹೊ.)
ಹೊಸಹಳ್ಳಿ (ಜಾ.ಹೊ.)
ಹೊಲೇರಹಳ್ಳಿ

## ದೊಡ್ಡಬಳ್ಳಾಪುರ ತಾಲ್ಲೂಕು

ಅಕ್ಕತಮ್ಮನಹಳ್ಳಿ
ಅಪ್ಪಕಾರೇನಹಳ್ಳಿ
ಅಮಾನಿಪಾಲನಕೆರೆ
ಅರೇಹಳ್ಳಿ
ಗುಡ್ಡದಹಳ್ಳಿ
ಅಲಪನಹಳ್ಳಿ
ಅಂಕೋನಹಳ್ಳಿ
ಅಂತರಹಳ್ಳಿ
ಆಚಾರ್ಲಹಳ್ಳಿ
ಹೊಸಹಳ್ಳಿ
ಆಲಹಳ್ಳಿ
ಉದ್ದೀಚಿಕ್ಕನಹಳ್ಳಿ
ಉದಾನಹಳ್ಳಿ
ಎರ್ರೆಯ್ಯನಗುಡ್ಡಹಳ್ಳಿ
ಓಜೇನಹಳ್ಳಿ
ಓಬದೇನಹಳ್ಳಿ
ಕಕ್ಕೇಹಳ್ಳಿ
ಕಟ್ಟೆಹೊಸಹಳ್ಳಿ
ಕನಕೇನಹಳ್ಳಿ
ಕರಿಯಿನಹಳ್ಳಿ
ಕರಿಪೋಣ್ಣೇನಹಳ್ಳಿ
ಕರೇನಹಳ್ಳಿ

| | |
|---|---|
| ಕರೇಪುರ | ಕಲ್ಲುದೇವನಹಳ್ಳಿ (ಸೂ.ಹೊ.) |
| ಕಲ್ಲುದೇವನಹಳ್ಳಿ (ದೊ.ಹೊ.) | ಕಸುವನಹಳ್ಳಿ |
| ಕಂಬೇನಹಳ್ಳಿ | ಕಾಚಹಳ್ಳಿ |
| ಕಾಡತಿಪ್ಪೇನಹಳ್ಳಿ | ಕಾಡಬ್ಯಾಡರಹಳ್ಳಿ |
| ಕಾಡಲವನಹಳ್ಳಿ (ಕಾಡಲಪನಹಳ್ಳಿ) | ಕಾಡಿಗೆಹಳ್ಳಿ (ಕೊಡಿಗೇಹಳ್ಳಿ) |
| ಕಾಮಾಕ್ಷಿಹಳ್ಳಿ | ಕಾವಲಹಳ್ಳಿ |
| ಕಾಳೇನಹಳ್ಳಿ | ಕೀಲಾರ್ಲಹಳ್ಳಿ |
| ಕುಕ್ಕನಹಳ್ಳಿ | ಕುಕ್ಕಲಹಳ್ಳಿ |
| ಕುಕ್ಕಲಹಳ್ಳಿಪಾಳ್ಯ | ಕುರುಬರಹಳ್ಳಿ (ಕ.ಹೋ.) |
| ಕುರುಬರಹಳ್ಳಿ (ಕೂ.ಹೋ.) | ಕುಂಟನಹಳ್ಳಿ ೧ |
| ಕುಂಟನಹಳ್ಳಿ ೨ | ಕೂಗೋನಹಳ್ಳಿ |
| ಕೆಳಗಿನಜೂಗನಹಳ್ಳಿ | ಕೆಳಗಿನನಾಯಕರಹಳ್ಳಿ |
| ಕೆಂಜಿಗನಹಳ್ಳಿ | ಕೊಟಿಗಮಾಚನಹಳ್ಳಿ |
| ಕೋನೇನಹಳ್ಳಿ | ಗಂಟಿಗಾನಹಳ್ಳಿ |
| ಗುಮ್ಮನಹಳ್ಳಿ | ಗುಂಡಲಹಳ್ಳಿ |
| ಗೆಜ್ಜಿಗದಹಳ್ಳಿ | ಗೊಲ್ಲಹಳ್ಳಿ (ಕ.ಹೊ.) |
| ಗೊಲ್ಲಹಳ್ಳಿ (ದೊ.ಹೊ.) | ಗೌಡಹಳ್ಳಿ |
| ಚನ್ನವೀರನಹಳ್ಳಿ | ಜಾವಗೊಂಡನಹಳ್ಳಿ |
| ಚಿಕ್ಕಕಾಳೇನಹಳ್ಳಿ | ಚಿಕ್ಕನಹಳ್ಳಿ |
| ಚಿಕ್ಕಮುದ್ದೇನಹಳ್ಳಿ | ಚಿಕ್ಕರಾಯಪ್ಪನಹಳ್ಳಿ |
| ಚಿಗರನಹಳ್ಳಿ | ಚಿಲೇನಹಳ್ಳಿ |
| ಚುಂಚೇಗೌಡನಹೊಸಹಳ್ಳಿ | ಚೊಕ್ಕನಹಳ್ಳಿ |
| ಜಕ್ಕೇನಹಳ್ಳಿ | ತಪಸೀಹಳ್ಳಿ |
| ತಮ್ಮಗಾನಹಳ್ಳಿ | ತಮ್ಮಶೆಟ್ಟಿಹಳ್ಳಿ |
| ತರಬನಹಳ್ಳಿ | ತಂಬೇನಹಳ್ಳಿ |
| ತಿಮ್ಮಾರಗೊಂಡಹಳ್ಳಿ (ತಿರುಮಗೊಂಡಹಳ್ಳಿ) | ತೇಕಲಹಳ್ಳಿ |

ದರ್ಗಾಜೋಗಿಹಳ್ಳಿ

ದಂಡುದಾಸಕೊಡಿಗೇಹಳ್ಳಿ

ದಾಸಗೊಂಡಹಳ್ಳಿ

ದಿನ್ನೇನಹಳ್ಳಿ

ದುರ್ಗೇನಹಳ್ಳಿ

ದೊಡ್ಡರಾಮಪ್ಪನಹಳ್ಳಿ

ನರಗನಹಳ್ಳಿ

ನರನಹಳ್ಳಿ

ನರಸಯ್ಯನಹಳ್ಳಿಅಗ್ರಹಾರ

ನಲ್ಲೇನಹಳ್ಳಿ

ನಾಗದೇವನಹಳ್ಳಿ (ನಾಗದೇನಹಳ್ಳಿ)

ನಾಗೇನಹಳ್ಳಿ

ಪಾರ್ಲಜೋಗಿಹಳ್ಳಿ (ಪಾಲನಜೋಗಿಹಳ್ಳಿ)

ಪುಟ್ಟೇನಹಳ್ಳಿ

ಪುರಸನಹಳ್ಳಿ (ಪುರುಸನಹಳ್ಳಿ)

ಬಸೆಟ್ಟಿಹಳ್ಳಿ

ಬಂಕೇನಹಳ್ಳಿ

ಬಾಚಹಳ್ಳಿ (ಕ.ಹೋ.)

ಬಾಚಹಳ್ಳಿ (ತು.ಹೋ.)

ಬ್ಯಾಡರಹಳ್ಳಿ

ಬ್ಯಾಡರಜಕ್ಕಹಳ್ಳಿ

ಬಿಸವನಹಳ್ಳಿ

ಬೂಚನಹಳ್ಳಿ

ಬೈಯಪ್ಪನಹಳ್ಳಿ

ಬೊಮ್ಮನಹಳ್ಳಿ (ತೊ.ಹೋ.)

ಬೊಮ್ಮನಹಳ್ಳಿ (ದೊ.ಹೋ.)

ಬೊಮ್ಮನಹಳ್ಳಿ (ಸಾ.ಹೋ.)

ಭಕ್ತರಹಳ್ಳಿ (ದೊ.ಹೋ.)

ಭಕ್ತರಹಳ್ಳಿ (ಸಾ.ಹೋ.)

ಭೀಮರಾವುತನಹಳ್ಳಿ

ಮಜರಾಹೊಸಹಳ್ಳಿ

ಮಜರೆಹೊಸಹಳ್ಳಿ

ಮಧುರನಹೊಸಹಳ್ಳಿ

ಮರಳೇನಹಳ್ಳಿ

ಮಲ್ಲತನಹಳ್ಳಿ

ಮಲ್ಲನಾಯಕನಹಳ್ಳಿ

ಮಲ್ಲೇಗೌಡನಹಳ್ಳಿ

ಮುದಬ್ಯಾಡರಹಳ್ಳಿ

ಮಾಚಗೊಂಡನಹಳ್ಳಿ

ಮಾಚೇನಹಳ್ಳಿ (ಮಂಚೇನಹಳ್ಳಿ)

ಮಾದಗೊಂಡನಹಳ್ಳಿ

ಮಾರಹಳ್ಳಿ

ಮಾಲೋಹಳ್ಳಿ

ಮಾಸ್ತಮ್ಮನಹಳ್ಳಿ

ಮ್ಯಾಕಲಹಳ್ಳಿ

ಮ್ಯಾಕನತಿಮ್ಮನಹಳ್ಳಿ

ಮುತ್ತಕಾಡಹಳ್ಳಿ

ಮುತ್ತುಗದಹಳ್ಳಿ

ಮುತ್ತುಗದಹಳ್ಳಿ

ಮೂಗಚಿನ್ನೇನಹಳ್ಳಿ

ಮೂಗೇನಹಳ್ಳಿ

ಮೂಡಲಕಾಳೇನಹಳ್ಳಿ

ಮೇಲಿನಜೂಗನಹಳ್ಳಿ
ಮೇಲಿನ್ನಾಯಕರಹಳ್ಳಿ
ಮೋದಿಹಳ್ಳಿ (ಮೇದಿಹಳ್ಳಿ)
ಯದ್ಲಹಳ್ಳಿ (ಯದ್ದಲಹಳ್ಳಿ)
ಯರ್‍ರಮುದ್ದೇನಹಳ್ಳಿ
ರಾಮದೇವನಹಳ್ಳಿ
ಲಕ್ಕೇನಹಳ್ಳಿ
ಲಗುಮೇನಹಳ್ಳಿ
ಲಿಂಗನಹಳ್ಳಿ (ಕ.ಹೋ.)
ಲಿಂಗವೀರನಹಳ್ಳಿ
ವಜ್ರಹೊಸಹಳ್ಳಿ
ವಡ್ಡರಹಳ್ಳಿ
ವಣಿಗರಹಳ್ಳಿ
ವೆರದನಹಳ್ಳಿ
ಶಿರಗೊಂಡಹಳ್ಳಿ
ಶಿಂಗೇಹಳ್ಳಿ
ಶ್ರೀರಾಮನಹಳ್ಳಿ
ಸಂಕರಸನಹಳ್ಳಿ (ಸಂಕರ್ಷಣಹಳ್ಳಿ)
ಸಿದ್ದೇನಾಯಕನಹಳ್ಳಿ
ಸುಟ್ಟಹಳ್ಳಿ (ಸುಟಹಳ್ಳಿ)
ಸುಬ್ಬಯ್ಯನಾಗೇಹಳ್ಳಿ (ಸುಬ್ರಾಯನಾಗೇನಹಳ್ಳಿ)
ಸೊನ್ನೇಹಳ್ಳಿ (ಸೊಣ್ಣೇನಹಳ್ಳಿ)
ಸೊಣ್ಣೇನಹಳ್ಳಿ
ಸೊನ್ನಪ್ಪನಹಳ್ಳಿ
ಸೊನ್ನಮಾರನಹಳ್ಳಿ
ಸೋತೇನಹಳ್ಳಿ
ಸೋಮಸೆಟ್ಟಿಹಳ್ಳಿ
ಹಾದೋನಹಳ್ಳಿ
ಹಾರೋಹಳ್ಳಿ
ಹಾಲೇನಹಳ್ಳಿ
ಹಿರಿಯನಗುಡ್ಡದಹಳ್ಳಿ
ಹಿರೇಮುದ್ದೇನಹಳ್ಳಿ
ಹೆಗ್ಗಡಿಹಳ್ಳಿ
ಹೊಸನಾಗೇನಹಳ್ಳಿ
ಹೊಸಹಳ್ಳಿ

## ನೆಲಮಂಗಲ ತಾಲ್ಲೂಕು

ಅಗುಸರಹಳ್ಳಿ (ಅರಸರಹಳ್ಳಿ)
ಅರ್ಜುನಬೆಟ್ಟಹಳ್ಳಿ
ಅಪ್ಪಗೊಂಡನಹಳ್ಳಿ
ಅರೆಬೊಮ್ಮನಹಳ್ಳಿ
ಅವ್ವೇರಹಳ್ಳಿ
ಅವ್ವೇರಹಳ್ಳಿ
ಆಲದಹಳ್ಳಿ
ಆಲನಾಯಕನಹಳ್ಳಿ
ಇಮಾಚೇನಹಳ್ಳಿ
ಇರ್‍ರಿಚೇನಹಳ್ಳಿ
ಇಸುವನಹಳ್ಳಿ
ಎಡೇಹಳ್ಳಿ (ಯಡೆಹಳ್ಳಿ)
ಓಬನಾಯಕನಹಳ್ಳಿ
ಕಣವನಹಳ್ಳಿ
ಕದರನಹಳ್ಳಿ
ಕನಗೊಂಡ್ಲಹಳ್ಳಿ

ಕನ್ನೋಹಳ್ಳಿ
ಕದಿಮರನಹಳ್ಳಿ
ಕರೇನಹಳ್ಳಿ
ಕರೇಹಳ್ಳಿ
ಕಲ್ಲನಾಯಕನಹಳ್ಳಿ
ಕಾಚನಹಳ್ಳಿ
ಕಾಚೋಹಳ್ಳಿ
ಕಾಡುಕರೇನಹಳ್ಳಿ
ಕೀತನಹಳ್ಳಿ
ಕುಕ್ಕನಹಳ್ಳಿ
ಕುರುವೆಲ್ ತಿಮ್ಮನಹಳ್ಳಿ
ಕುಲುದನಹಳ್ಳಿ
ಕುಂಟಬೊಮ್ಮನಹಳ್ಳಿ
ಕೆಂಗನಹಳ್ಳಿ
ಕೆಂಗಾಲ್‌ಕೆಂಪೋಹಳ್ಳಿ
ಕೆಂಚನಹಳ್ಳಿ
ಕೆಂಪಲಿಂಗನಹಳ್ಳಿ (ಕೆಂಪಲಿಂಗನಹಳ್ಳಿ ಹೆಚ್.)
ಕೆಂಪಲಿಂಗನಹಳ್ಳಿ ಕೆ.
ಕೆಂಪೋಹಳ್ಳಿ
ಕೊಟ್ಟನಹಳ್ಳಿ
ಕೊಡಗಿಬೊಮ್ಮನಹಳ್ಳಿ
ಕೊಡಿಗೇಹಳ್ಳಿ
ಕೋಡಪ್ಪನಹಳ್ಳಿ
ಕೋಡಿಹಳ್ಳಿ
ಗಟ್ಟಿಸಿದ್ದೇನಹಳ್ಳಿ
ಗಂಗೊಂಡನಹಳ್ಳಿ
ಗಿಡ್ಡೇನಹಳ್ಳಿ
ಗ್ರೀಗೇನಹಳ್ಳಿ
ಗುಡ್ಡೇಗೌಡನ ಚನ್ನೋಹಳ್ಳಿ
ಗುರುವನಹಳ್ಳಿ
ಗುಂಡೇನಹಳ್ಳಿ
ಗುಂಡೇನಹಳ್ಳಿ
ಗೆಜ್ಜಗದಹಳ್ಳಿ
ಗೆದ್ದಲಹಳ್ಳಿ (ನೆ.ಹೋ.)
ಗೊರವನಹಳ್ಳಿ
ಗೊಲ್ಲಹಳ್ಳಿ
ಗೋವೇನಹಳ್ಳಿ
ಗೌಡಹಳ್ಳಿ
ಘಂಟೆಹೊಸಹಳ್ಳಿ
ಚನ್ನೋಹಳ್ಳಿ
ಚಂದನಹೊಸಹಳ್ಳಿ
ಚಿಕ್ಕಣ್ಣನಹಳ್ಳಿ (ಚಿಕ್ಕನಹಳ್ಳಿ)
ಚಿಕ್ಕನಹಳ್ಳಿ
ಚಿಕ್ಕಮಾರನಹಳ್ಳಿ
ಜಕ್ಕನಹಳ್ಳಿ
ತಮ್ಮೇನಹಳ್ಳಿ
ತ್ಯಾಗದಹಳ್ಳಿ
ತಿಪ್ಪಗೊಂಡನಹಳ್ಳಿ
ತಿಪ್ಪಸೆಟ್ಟಿಹಳ್ಳಿ
ತಿಮ್ಮನಾಯಕನಹಳ್ಳಿ
ತೋಟನಹಳ್ಳಿ
ತೋಟದಗುಡ್ಡಹಳ್ಳಿ
ದಾಸೇನಹಳ್ಳಿ
ದೇಗನಹಳ್ಳಿ

ದೇವರಹೊಸಹಳ್ಳಿ
ದೊಡ್ಡಕರೇನಹಳ್ಳಿ
ದೊಡ್ಡಚನ್ನೋಹಳ್ಳಿ
ದೊಂಬರಹಳ್ಳಿ
ನಿಜಗಲ್ಲುಕೆಂಪೋಹಳ್ಳಿ
ನಿಂಬೇನಹಳ್ಳಿ

## ನೆಲಮಂಗಲ

ಪಲ್ಲರಹಳ್ಳಿ
ಪಿಲ್ಲಹಳ್ಳಿ
ಪೆಮ್ಮನಹಳ್ಳಿ
ಬರಗೇನಹಳ್ಳಿ
ಬಳವನಹಳ್ಳಿ
ಬೀರಗೊಂಡನಹಳ್ಳಿ (ತ್ಯಾ.ಹೋ.)
ಬೀರಗೊಂಡನಹಳ್ಳಿ (ದೊ.ಹೋ.)
ಬುಗಡಿಹಳ್ಳಿ
ಬೆಟ್ಟದಹೊಸಹಳ್ಳಿ
ಬೆಟ್ಟದಹಳ್ಳಿ (ದಾ.ಹೋ.)
ಬೆಟ್ಟದಹಳ್ಳಿ (ನೆ.ಹೋ.)
ಬೆಣಚನಹಳ್ಳಿ
ಬೈರನಹಳ್ಳಿ
ಬೈರನಾಯಕನಹಳ್ಳಿ
ಬೈಲಕೊನೇನಹಳ್ಳಿ
ಬೈಂದಹಳ್ಳಿ
ಬೈರೇಗೌಡನಹಳ್ಳಿ
ಬೊಮ್ಮನಹಳ್ಳಿ
ಬೊಮ್ಮಸೆಟ್ಟಿಹಳ್ಳಿ
ಬೋಲಮಾರನಹಳ್ಳಿ ೧
ಬೋಲಮಾರನಹಳ್ಳಿ ೨
ಭಟ್ಟರಹಳ್ಳಿ
ಮಟ್ಟಹಳ್ಳಿ
ಮುದ್ದೇನಹಳ್ಳಿ
ಮಂಚೇನಹಳ್ಳಿ
ಮಾಕೇನಹಳ್ಳಿ
ಮಾಚೋನಾಯಕನಹಳ್ಳಿ
ಮಾದನಾಯಕನಹಟ್ಟಿ (ಮಾದನಾಯಕನಹಳ್ಳಿ)
ಮಾದೇನಹಳ್ಳಿ
ಮಾರಗೊಂಡನಹಳ್ಳಿ
ಮಾರೋಹಳ್ಳಿ
ಮಾವಿನಕೊಮ್ಮನಹಳ್ಳಿ
ಮುದಲಿಂಗನಹಳ್ಳಿ
ಮೈಲಸಹಳ್ಳಿ
ಮೈಲನಹಳ್ಳಿ (ಬಿಹಾರತ್)
ಮೊಲೋಗನಹಳ್ಳಿ (ಮಲೋನಾಗತಿಹಳ್ಳಿ)
ಯರಮಂಚನಹಳ್ಳಿ
ಯಲಕ್ಯಾತನಹಳ್ಳಿ
ಯಂತಗಾನಹಳ್ಳಿ (ಯಂತಿಗನಹಳ್ಳಿ)
ರಾಮನಹಳ್ಳಿ
ರಾವತನಹಳ್ಳಿ
ಲಕ್ಕಪ್ಪನಹಳ್ಳಿ
ಲಕ್ಕೇನಹಳ್ಳಿ ೧
ಲಕ್ಕೇನಹಳ್ಳಿ ೨
ಲಕ್ಕೇನಹಳ್ಳಿ
ಲಿಂಗೇನಹಳ್ಳಿ

| | |
|---|---|
| ವಜ್ರಹಳ್ಳಿ | ವಡಕುಂಟೆ |
| ವಡ್ಡರಹಳ್ಳಿ | ವರದನಾಯಕನಹಳ್ಳಿ |
| ವಾಡೇಹಳ್ಳಿ (ವಡೇರಹಳ್ಳಿ) | ವಾಚನಾಯಕನಹಳ್ಳಿ ಎಸ್.ಎಂ. |
| ಶ್ರೀಪತಿಹಳ್ಳಿ | ಶ್ರೀರಂಗನಹಳ್ಳಿ |
| ಸಿದ್ದನಹೊಸಹಳ್ಳಿ | ಸೋಲದೇವನಹಳ್ಳಿ |
| ಹಸುರುವಳ್ಳಿ | ಹಳೇನಹಳ್ಳಿ |
| ಹಾದಿಹೊಳಹಳ್ಳಿ | ಹಾರೋಕ್ಯಾತನಹಳ್ಳಿ |
| ಹುರಳೀಹಳ್ಳಿ | ಹುಲಿಗೇಗೌಡನಹಳ್ಳಿ (ಹುಲ್ಲೇಗೌಡನಹಳ್ಳಿ) |
| ಹೊನ್ನರಾಯನಹಳ್ಳಿ (ತ್ಯಾ.ಹೋ.) | ಹೊನ್ನರಾಯನಹಳ್ಳಿ |
| ಹೊನ್ನೇನಹಳ್ಳಿ | ಹೊಸಹಳ್ಳಿ (ಕ.ಹೋ.) |
| ಹೊಸಹಳ್ಳಿ (ದಾ.ಹೋ.) | ಹೊಸಹಳ್ಳಿ ಪಾಳ್ಯ |

## ಮಾಗಡಿ ತಾಲ್ಲೂಕು

| | |
|---|---|
| ಅಜ್ಜನಹಳ್ಳಿ (ಕು.ಹೋ.) (ಅಜ್ಜಹಳ್ಳಿ) | ಅಜ್ಜನಹಳ್ಳಿ (ತ.ಹೋ.) |
| ಅಜ್ಜನಹಳ್ಳಿ (ಮ.ಹೋ.) | ಅಡಕಮಾರನಹಳ್ಳಿ |
| ಅಣ್ಣೇಕಾರನಹಳ್ಳಿ | ಅಣ್ಣೇಕಾಲನಹಳ್ಳಿ |
| ಅಯ್ಯಂದಹಳ್ಳಿ (ಇಯಂದಹಳ್ಳಿ) | ಅವ್ವೇರಹಳ್ಳಿ |
| ಆಂಗಜನಹಳ್ಳಿ | ಆಲಸೆಟ್ಟಿಹಳ್ಳಿ |
| ಉದ್ದಂಡಹಳ್ಳಿ | ಕದುರಮನಹಳ್ಳಿ |
| ಕನಕೇನಹಳ್ಳಿ | ಕರಗದಹಳ್ಳಿ |
| ಕಲ್ಲದೇವನಹಳ್ಳಿ | ಕಂಚುಗಾರನಹಳ್ಳಿ |
| ಕಾರ್ಲಹಳ್ಳಿ | ಕುರುಬರಹಳ್ಳಿ |
| ಕೆಂಗೊಂಡನಹಳ್ಳಿ | ಕೆಂಚನಹಳ್ಳಿ ೧ |
| ಕೆಂಚನಹಳ್ಳಿ ೨ | ಕೆಂಪಹಳ್ಳಿ (ಕೆಂಪ್ರೋಹಳ್ಳಿ) |
| ಕೆಂಪ್ರುಗೊಂಡನಹಳ್ಳಿ | ಕೇತೋಹಳ್ಳಿ |
| ಕೇತೋಹಳ್ಳಿ ನರಸಿಂಹಪುರ | ಕೇತೋಹಳ್ಳಿ ರಾಮಪುರ |
| ಕೊತ್ತಗೊಂಡನಹಳ್ಳಿ | ಕೊಂಡಹಳ್ಳಿ |
| ಕೋಟಗಾರನಹಳ್ಳಿ | ಕೋಡಿಹಳ್ಳಿ (ಸೊ.ಹೊ.) |

| | |
|---|---|
| ಗಣಪತಿಹಳ್ಳಿ | ಗಂಗಪ್ಪನಹಳ್ಳಿ |
| ಗಂಗೇನಹಳ್ಳಿ | ಗಂಗೋನಹಳ್ಳಿ |
| ಗುಡ್ಡಲಹಳ್ಳಿ | ಗುಡ್ಡಹಳ್ಳಿ |
| ಗುಡೇಮಾರನಹಳ್ಳಿ | ಗೇರಹಳ್ಳಿ |
| ಗೊಲ್ಲಹಳ್ಳಿ (ಕೂ.ಹೊ.) | ಗೊಲ್ಲಹಳ್ಳಿ ಸೊ.ಹೊ.) |
| ಚನ್ನಹಳ್ಳಿ (ಚಿನ್ನೋಹಳ್ಳಿ) | ಚಿನ್ನೇನಹಳ್ಳಿ |
| ಚಂದೋರಾಯನಹಳ್ಳಿ | ಚಿಕ್ಕನಹಳ್ಳಿ (ತಾ.ಹೋ.) |
| ಚಿಕ್ಕನಹಳ್ಳಿ (ತೊ.ಹೊ.) | ಚಿಕ್ಕಹಳ್ಳಿ |
| ಚೋಳನಾಯಕನಹಳ್ಳಿ | ಜುಟ್ಟನಹಳ್ಳಿ |
| ಜೋಗೇರಹಳ್ಳಿ | ಡೊಳ್ಳೇನಹಳ್ಳಿ |
| ತಗಚಕುಪ್ಪೆ | ತಮ್ಮೇನಹಳ್ಳಿ |
| ತವಕದಹಳ್ಳಿ | ತೊರೆಚಿನ್ನೋಹಳ್ಳಿ |
| ತೊರೆರಾಮನಹಳ್ಳಿ | ದಬ್ಬಗುಳ್ಳಿ |
| ದಂಡೇನಹಳ್ಳಿ | ದೇವಮಾಚೋಹಳ್ಳಿ |
| ದೇವಮಾಚೋಹಳ್ಳಿ | ದೊಡ್ಡಮಾರನಹಳ್ಳಿ |
| ದೊಡ್ಡಸೋಮನಹಳ್ಳಿ | ದೊಡ್ಡಹಳ್ಳಿ |
| ದೊಣ್ಣೇನಹಳ್ಳಿ | ನಾಗನಹಳ್ಳಿ (ಕು.ಹೋ.) |
| ನಾಗನಹಳ್ಳಿ (ತಾ.ಹೊ.) | ನಾಗನಹಳ್ಳಿ (ಸು.ಹೊ.) |
| ನಾಗಶೆಟ್ಟಹಳ್ಳಿ | ಪಾಳ್ಯದಹಳ್ಳಿ |
| ಪುನಗುಮಾರನಹಳ್ಳಿ | ಪೆಮ್ಮನಹಳ್ಳಿ |
| ಬಸವೇನಹಳ್ಳಿ (ಸೋ.ಹೊ.) | ಬಸವೇನಹಳ್ಳಿ (ಮ.ಹೊ.) |
| ಬಾಳೇನಹಳ್ಳಿ (ಬೊಳೇನಹಳ್ಳಿ) | ಬ್ಯಾಡರಹಳ್ಳಿ (ಕ.ಹೊ.) |
| ಬ್ಯಾಡರಹಳ್ಳಿ (ಸಾ.ಹೊ.) | ಬಿಸಲಹಳ್ಳಿ |
| ಬೀಚನಹಳ್ಳಿ | ಬೀಚನಹಳ್ಳಿ |
| ಬೆಟ್ಟಹಳ್ಳಿ | ಬೆಳಗವಾಡಿ |
| ಬೊಮ್ಮೇನಹಳ್ಳಿ (ಬೊಮ್ಮನಹಳ್ಳಿ) | ಬೋಳೇನಹಳ್ಳಿ (ಬಾಳೇನಹಳ್ಳಿ) |
| ಮಡಿಗೊಂಡನಹಳ್ಳಿ | ಮಲ್ಲಪ್ಪನಹಳ್ಳಿ |

ಮಲ್ಲೇನಹಳ್ಳಿ
ಮಾಚೋಹಳ್ಳಿ
ಮಾಣಿಗನಹಳ್ಳಿ (ಮಣ್ಣಿಗನಹಳ್ಳಿ)
ಮಾಯನಾಯಕನಹಳ್ಳಿ
ಮಾರದೇವನಹಳ್ಳಿ
ಮಾರಯ್ಯನಹಳ್ಳಿ
ಮಾರಿಸೋಮನಹಳ್ಳಿ
ಮಾರೇನಹಳ್ಳಿ
ಮಾರೇನಹಳ್ಳಿ
ಮುತ್ತುಗದಹಳ್ಳಿ
ಮುದ್ದಯ್ಯನಹಳ್ಳಿ
ಮುಪ್ಪೇನಹಳ್ಳಿ
ಮುಮ್ಮೇನಹಳ್ಳಿ
ಮೂಗನಹಳ್ಳಿ
ಮೇಲನಹಳ್ಳಿ
ಮೈಲನಹಳ್ಳಿ
ಮೋಟಗೊಂಡನಹಳ್ಳಿ
ಯಲಗದಹಳ್ಳಿ
ರಂಗೇನಹಳ್ಳಿ (ಕ.ಹೊ.)
ರಂಗೇನಹಳ್ಳಿ (ಸ.ಹೊ.)
ರಾಮನಹಳ್ಳಿ (ಕು.ಹೋ.)
ರಾಮನಹಳ್ಳಿ (ಸೋ.ಹೋ.)
ಲಕ್ಕೇನಹಳ್ಳಿ (ಕು.ಹೋ.)
ಲಕ್ಕೇನಹಳ್ಳಿ (ಸೊ.ಹೋ.)
ಲಿಂಗೇನಹಳ್ಳಿ
ವಡ್ಡರಹಳ್ಳಿ
ವರದೇನಹಳ್ಳಿ
ವರದೋಹಳ್ಳಿ
ವಾಜರಹಳ್ಳಿ
ವಾಡಹಳ್ಳಿ
ವೆಂಗಳಪ್ಪನಹಳ್ಳಿ
ಶಂಭುದೇವನಹಳ್ಳಿ
ಶಾನುಭೋಗನಹಳ್ಳಿ
ಶಿರಗನಹಳ್ಳಿ
ಶಿಂಗದಾಸನಹಳ್ಳಿ
ಶ್ರೀಪತಿಹಳ್ಳಿ
ಶೆಟ್ಟರಹಳ್ಳಿ
ಸಾದಮಾರನಹಳ್ಳಿ
ಸಿದಗನಹಳ್ಳಿ
ಸುಗ್ಗನಹಳ್ಳಿ
ಸುಬ್ರಾಯಬ್ಯಾಡರಹಳ್ಳಿ
ಸೂರಪ್ಪನಹಳ್ಳಿ
ಸೊಣ್ಣೇನಹಳ್ಳಿ
ಸೋಮದೇವನಹಳ್ಳಿ
ಹಲಿಗೇನಹಳ್ಳಿ
ಹಳಸಿಂಗನಹಳ್ಳಿ
ಹಳಿಶೆಟ್ಟಿಹಳ್ಳಿ
ಹಾರೋಹಳ್ಳಿ
ಹ್ಯಾಗನಹಳ್ಳಿ
ಹುಲಿಕಟ್ಟೆ
ಹುಲುವೇನಹಳ್ಳಿ (ತಾ.ಹೋ.)
ಹುಲುವೇನಹಳ್ಳಿ (ಮ.ಹೋ.)
ಹುಲ್ಲೇನಹಳ್ಳಿ
ಹೊಸಹಳ್ಳಿ (ಸೊ.ಹೋ.)
ಹೊಸಹಳ್ಳಿ (ಸೊ.ಹೋ.)

## ರಾಮನಗರ ತಾಲ್ಲೂಕು

ಅರ್ಚಕರಹಳ್ಳಿ
ಅನುಮನಹಳ್ಳಿ
ಅಂಕನಹಳ್ಳಿ (ಕು.ಹೋ.)
ಉರಗನಹಳ್ಳಿ
ಕಂಚುಗಾರನಹಳ್ಳಿ
ಕಾಕರಾಮನಹಳ್ಳಿ
ಕುರುಬರಹಳ್ಳಿ
ಕೆಂಪದ್ಯಾಪನಹಳ್ಳಿ
ಕೆಂಪಯ್ಯನಪಾಳ್ಯ
ಕೇತಹಳ್ಳಿ
ಕೇತಿಗಾರನಹಳ್ಳಿ
ಗೋಪಹಳ್ಳಿ
ಚಾಮನಹಳ್ಳಿ
ಚಿಕ್ಕೇನಹಳ್ಳಿ
ಜಕ್ಕನಹಳ್ಳಿ
ತಮ್ಮನಾಯಕನಹಳ್ಳಿ
ದೊಡ್ಡಕುಂಟನಹಳ್ಳಿ
ಬಣ್ಣಹಳ್ಳಿ
ಬಾಲಪ್ಪನಹಳ್ಳಿಕೆರೆ
ಬಿಳಿಕೆಂಪನಹಳ್ಳಿ
ಬೊಮ್ಮಚಾನಹಳ್ಳಿ
ಬೋಳಪ್ಪನಹಳ್ಳಿ
ಮಂಚನಾಯಕನಹಳ್ಳಿ
ಮುಂಡಲಹಳ್ಳಿ
ಮಾಯಿಗನಹಳ್ಳಿ

ಅಣ್ಣಹಳ್ಳಿ
ಅರೇಹಳ್ಳಿ
ಅಂಕನಹಳ್ಳಿ (ಕೈ.ಹೋ.)
ಕಲ್ಲುಗೋಪನಹಳ್ಳಿ
ಕಂಚುಗಾರನಹಳ್ಳಿಕಾವಲು
ಕುರುಬರಕಾರೇನಹಳ್ಳಿ
ಕೆಂಚಿಗರಹಳ್ಳಿ
ಕೆಂಪನಹಳ್ಳಿ
ಕೆಂಪವಡೇರಹಳ್ಳಿ
ಕೇತಹಳ್ಳಿ ಕೆಂಚಗಾರನಹಳ್ಳಿ
ಕೋಡಿಯಾಲ ಕರೇನಹಳ್ಳಿ
ಚನ್ನಮ್ಮನಹಳ್ಳಿ
ಚಿಕ್ಕಕುಂಟನಹಳ್ಳಿ
ಚೌಡೇಶ್ವರಹಳ್ಳಿ
ಜಿಗೇನಹಳ್ಳಿ
ದಾಸರಹಳ್ಳಿ
ನಾಗೇಹಳ್ಳಿ
ಬಳೇವೀರನಹಳ್ಳಿ
(ಬೋಳಪ್ಪನಹಳ್ಳಿ ಅಮಾನಿಕೆರೆ)
ಬೈಚೋಹಳ್ಳಿ
ಬೋರೇಹಳ್ಳಿ
ಭೀಮನಹಳ್ಳಿ
ಮಂಚೇಗೌಡನಹಳ್ಳಿ
ಮಾದಿಗನಹಳ್ಳಿ
ಮುದ್ದಾಪುರ ಕಾರೇನಹಳ್ಳಿ

ಮಳೆಹಳ್ಳಿ (ಮಳೆಹಳ್ಳಿ)
ಯರೆಪಳ್ಳಿ
ರಾಮನಹಳ್ಳಿ
ಲಕ್ಕಪ್ಪನಹಳ್ಳಿ
ಲಕ್ಕೋಜನಹಳ್ಳಿ
ವಡೇರಹಳ್ಳಿ
ವಾಜರಹಳ್ಳಿ (ವಜ್ರಹಳ್ಳಿ)
ಶಾನುಭೋಗನಹಳ್ಳಿ
ಶಿವನಹಳ್ಳಿ
ಶೇಷಗಿರಿಹಳ್ಳಿ
ಸುಗ್ಗೇನಹಳ್ಳಿ
ಹಳ್ಳಿಮಾಳ
ಹಾಗಲಹಳ್ಳಿ
ಹಿರೇಹಳ್ಳಿ
ಹುಣಸನಹಳ್ಳಿ
ಹೊಸಹಳ್ಳಿ (ಹೊಸಹಳ್ಳಿ ಕೆ.ಜಿ.)

## ಹೊಸಕೋಟೆ ತಾಲ್ಲೂಕು

ಅಗಸರಹಳ್ಳಿ
ಅಗ್ರಹಾರವಡ್ಡರಹಳ್ಳಿ
ಅಜಗೊಂಡಹಳ್ಳಿ
ಅನುಗೊಂಡನಹಳ್ಳಿ
ಅನೂಪನಹಳ್ಳಿ
ಅರಸನಹಳ್ಳಿ
ಅರಳೇಮಾಕನಹಳ್ಳಿ
ಆವಲಹಳ್ಳಿ
ಅಂಕನಹಳ್ಳಿ
ಅಂಕೋನಹಳ್ಳಿ
ಅರೇಹಳ್ಳಿ (ಅ.ಹೋ.)
ಅರೇಹಳ್ಳಿ (ನ.ಹೋ.)
ಆಲಪ್ಪನಹಳ್ಳಿ
ಆಲಗೊಂಡನಹಳ್ಳಿ
ಇಯಮಾನಹಳ್ಳಿ
ಇಂಜನಹಳ್ಳಿ
ಉಪ್ಪಾರಹಳ್ಳಿ
ಓಬಲಹಳ್ಳಿ
ಓರಹಳ್ಳಿ
ಕಟ್ಟಿಗೇನಹಳ್ಳಿ
ಕಟ್ಟುಗೊಲ್ಲಹಳ್ಳಿ
ಕನ್ನೂರಹಳ್ಳಿ
ಕರಪನಹಳ್ಳಿ
ಕರಿಬೀರನಹೊಸಹಳ್ಳಿ
ಕಲ್ಲಹಳ್ಳಿ
ಕಾಚರಕನಹಳ್ಳಿ
ಕಾಡುಸೊಣ್ಣಪ್ಪನಹಳ್ಳಿ
ಕಾಮರಸನಹಳ್ಳಿ
ಕಾರಹಳ್ಳಿ
ಕಾಳಪ್ಪನಹಳ್ಳಿ
ಕುರುಡುಸೊಣ್ಣೇನಹಳ್ಳಿ
ಕುರುಬರಗೊಲ್ಲಹಳ್ಳಿ
ಕುರುಬರಹಳ್ಳಿ
ಕುಂಭಳಹಳ್ಳಿ

ಕೆಂಬಿಗನಹಳ್ಳಿ
ಕೊಂಡ್ರಹಳ್ಳಿ
ಕೋಳಲದಚನ್ನೇನಹಳ್ಳಿ (ಕೊಳಚನ್ನೇನಹಳ್ಳಿ)
ಖಾಜಿಹೊಸಹಳ್ಳಿ
ಗಿಡ್ಡಪ್ಪನಹಳ್ಳಿ
ಗುಟ್ಟಹಳ್ಳಿ
ಗುಲ್ಲಹಳ್ಳಿ
ಗುಂಡರಹಳ್ಳಿ (ನೆ.ಹೋ.)
ಗೂಗುಟ್ಟಹಳ್ಳಿ
ಗೇರಹಳ್ಳಿ
ಗೊಡ್ಡರಾಮನಹಳ್ಳಿ
ಗೊರವೇಹಳ್ಳಿ
ಚಿಕ್ಕನಹಳ್ಳಿ
ಜಕ್ಕೊಂಡಹಳ್ಳಿ
ಚಿನ್ನಂದಹಳ್ಳಿ
ಚೋಳಪ್ಪನಹಳ್ಳಿ
ತಗ್ಗಿಹೊಸಹಳ್ಳಿ
ತರಬಹಳ್ಳಿ (ಹ.ಹೋ.)
ತಾವತಹಳ್ಳಿ
ತಿಮ್ಮಪ್ಪನಹಳ್ಳಿ
ತಿರುಮಲಶೆಟ್ಟಿಹಳ್ಳಿ
ತೀರ್ಥಹಳ್ಳಿ (ತಿರತಹಳ್ಳಿ)
ದಾಸರಹಳ್ಳಿ
ದೇವರಗೊಲ್ಲಹಳ್ಳಿ
ದೊಡ್ಡಗೌನಹಳ್ಳಿ
ದೊಡ್ಡದೇನಹಳ್ಳಿ

ಕೊಡಿಗೇಹಳ್ಳಿ
ಕೋಡಿಹಳ್ಳಿ
ಬಾಜಿಹೊನ್ನೇನಹಳ್ಳಿ
ಗಂಡೇನಹಳ್ಳಿ
ಗಿಡ್ಡಪ್ಪನಹಳ್ಳಿ
ಗುಡ್ಡದಚನ್ನೇನಹಳ್ಳಿ
ಗುಳ್ಳೇನಹಳ್ಳಿ
ಗುಂಡರಹಳ್ಳಿ (ಸೂ.ಹೋ.)
ಗೆದ್ದಲಹಳ್ಳಿಪುರ
ಗೊಟ್ಟೀಪುರ
ಗೊನಕನಹಳ್ಳಿ
ಚಿಕ್ಕನಲ್ಲೂರಹಳ್ಳಿ
ಚಿಕ್ಕಬನಹಳ್ಳಿ
ಚಿನ್ನತಿಮ್ಮನಗೊಲ್ಲಹಳ್ಳಿ (ಚಿಕ್ಕತಿಮ್ಮಗೊಲ್ಲಹಳ್ಳಿ)
ಚೊಕ್ಕಹಳ್ಳಿ
ಜಡಿಗನಹಳ್ಳಿ (ಜಡೇಗನಹಳ್ಳಿ)
ತಮ್ಮರಸನಹಳ್ಳಿ
ತರಬಹಳ್ಳಿ (ನ.ಹೋ.)
ತಾವರೆಹಳ್ಳಿ
ತಿಮ್ಮಂದಹಳ್ಳಿ
ತಿರುಮಲೇನಹಳ್ಳಿ
ದಾಸರತಿಮ್ಮನಹಳ್ಳಿ
ದಿಂಬಹಳ್ಳಿ
ದೇವಶೆಟ್ಟಿಹಳ್ಳಿ
ದೊಡ್ಡದಾಸನಹಳ್ಳಿ
ನಕ್ಕನಹಳ್ಳಿ

ನಗರೇನಹಳ್ಳಿ
ನಲ್ಲನಾಗನಹಳ್ಳಿ
ನಾಡಗೌಡಗೊಲ್ಲಹಳ್ಳಿ
ಪರಮಾನಹಳ್ಳಿ
ಪೂಜಾರಾಮನಹಳ್ಳಿ
ಪೇತನಹಳ್ಳಿ
ಬನಮಾಕನಹಳ್ಳಿ
ಬನಹಳ್ಳಿ
ಬನಹಳ್ಳಿ
ಬಂಡಹಳ್ಳಿ
ಬಾತಿಗನಹಳ್ಳಿ
ಬಾನೂರಹಳ್ಳಿ (ಬಾನರಹಳ್ಳಿ)
ಬಾಸಬಾತನಹಳ್ಳಿ (ಬಾಸಭಟ್ಟನಹಳ್ಳಿ)
ಬಾಳೇನಹಳ್ಳಿ
ಬ್ಯಾಲಹಳ್ಳಿ (ಬೈಲಹಳ್ಳಿ)
ಬಿದರಹಳ್ಳಿ
ಬೀರಹಳ್ಳಿ
ಬೀಸನಹಳ್ಳಿ (ಜ.ಹೋ.)
ಬೀಸನಹಳ್ಳಿ (ನಂ.ಹೋ.)
ಬಿಟ್ಟಹಳ್ಳಿ
ಬೆಸನಹಳ್ಳಿ
ಬೆಂಡಿಗನಹಳ್ಳಿ (ಬಿ.ಹೋ.)
ಬೆಂಡಿಗನಹಳ್ಳಿ (ಸು.ಹೋ.)
ಬೇಮಂದಹಳ್ಳಿ
ಬೈಯಪ್ಪನಹಳ್ಳಿ
ಬೈರಹಳ್ಳಿ
ಬೊಂದನಹೊಸಹಳ್ಳಿ
ಭಕ್ತಗೊಂಡನಹಳ್ಳಿ
ಭಕ್ತರಹಳ್ಳಿ
ಭಟ್ಟರಹಳ್ಳಿ
ಭೀಮಕ್ಕನಹಳ್ಳಿ
ಭೂವನಹಳ್ಳಿ
ಪುರಸಂದಹಳ್ಳಿ
ಮಳಿಯಪ್ಪನಹಳ್ಳಿ
ಮಂಚಪ್ಪನಹಳ್ಳಿ
ಮಾಕನಹಳ್ಳಿ
ಮಾಗೊಂಡನಹಳ್ಳಿ (ಮಾರಗೊಂಡನಹಳ್ಳಿ)
ಮಾರಗೊಂಡನಹಳ್ಳಿ
ಮಿತ್ತಿಗನಹಳ್ಳಿ
ಮುತ್ತಕಾಡಹಳ್ಳಿ
ಮುತ್ತಕದಹಳ್ಳಿ
ಮುತ್ತಕಾಡಹಳ್ಳಿ
ಮೇದಿಹಳ್ಳಿ (ಅ.ಹೋ.)
ಮೇದಿಹಳ್ಳಿ (ಬಿ.ಹೋ.)
ಮೊತ್ತನಹಳ್ಳಿ
ಯಡಗೊಂಡಹಳ್ಳಿ
ಯರಪ್ಪನಹಳ್ಳಿ
ಯಲಚಮನಹಳ್ಳಿ
ಯಲಚಹಳ್ಳಿ
ರಘುವನಹಳ್ಳಿ
ಲಕ್ಕೊಂದಹಳ್ಳಿ
ಲಗುಮೇನಹಳ್ಳಿ

| | |
|---|---|
| ವಡಿಗೇಹಳ್ಳಿ | ವನಜನಹಳ್ಳಿ |
| ವನಮಾಪುರ (ವನಮನಹಳ್ಳಿ) | ವೀರನಹಳ್ಳಿ |
| ಶಶಿಮಾಕನಹಳ್ಳಿ | ಶಿವದೇವಹಳ್ಳಿ |
| ಸತ್ತಿಗೇಹಳ್ಳಿ (ಸತ್ತಿಗೇನಹಳ್ಳಿ) | ಸಮೇತನಹಳ್ಳಿ |
| ಸರಕಾರಗುಟ್ಟಹಳ್ಳಿ | ಸರಕಾರವಡ್ಡಹಳ್ಳಿ |
| ಸಾದಪ್ಪನಹಳ್ಳಿ | ಸಿದ್ದನಹಳ್ಳಿ |
| ಸಿದ್ದೇನಹಳ್ಳಿ | ಸೀಗೇಹಳ್ಳಿ |
| ಸೆಟ್ಟಹಳ್ಳಿ | ಸೆಟ್ಟಿಹಳ್ಳಿ ಡಿ. |
| ಸೆಟ್ಟಹಳ್ಳಿ | ಸೊಣ್ಣಕೆಂಪನಹಳ್ಳಿ |
| ಸೊನ್ನದೇವನಹಳ್ಳಿ (ಸೊನ್ನದೇವನಹಳ್ಳಿ) | ಸೊನ್ನೈಬೈಚನಹಳ್ಳಿ |
| ಹಸನಹಳ್ಳಿ | ಹಲಸನಹಳ್ಳಿ |
| ಹಳೇಹಳ್ಳಿ | ಹಂಚಾರಹಳ್ಳಿ |
| ಹಂದೇನಹಳ್ಳಿ | ಹಾರೋಹಳ್ಳಿ |
| ಹೀರಂದಹಳ್ಳಿ | ಹುಣಸೇಹಳ್ಳಿ |
| ಹುಲುವನಹಳ್ಳಿ | ಹೆಡಕನಹಳ್ಳಿ |
| ಹೆಮ್ಮುಂದಹಳ್ಳಿ | ಹೊಣಚನಹಳ್ಳಿ |
| ಹೊಸಕೋಟೆ | ಹೊಸದಿಂಬಹಳ್ಳಿ |

---

ಅಡಿ ಟಿಪ್ಪಣಿಗಳು

೧. ಕೆಮ್ತೂರು ರಘುಪತಿ ಭಟ್ಟ ಕೆಮ್ತೂರು, ತುಳುನಾಡಿನ ಸ್ಥಳನಾಮಗಳು, ಪುಟ ೨೩

೨. ಡಾ। ಅರ್ಕಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೨೨

೩. ಕನ್ನಡ ರತ್ನ ಕೋಶ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಪುಟ ೧೧೬

೪. ರಘುಪತಿ ಭಟ್ಟ ಕೆಮ್ತೂರು, ತುಳುನಾಡಿನ ಸ್ಥಳನಾಮಗಳು, ಪುಟ ೯೪

೫. ಡಾ। ಅರ್ಕಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೯

೬. ಡಾ। ಅರ್ಕಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೨೪

೭. ಡಾ। ಚಿದಾನಂದಮೂರ್ತಿ ಎಂ., ಕರ್ನಾಟಕ ಸ್ಥಳನಾಮಗಳು (ವಾಗರ್ಥ), ಪುಟ ೨೮

೮. ಡಾ। ಚಿದಾನಂದಮೂರ್ತಿ ಎಂ., ಕರ್ನಾಟಕ ಸ್ಥಳನಾಮಗಳು (ವಾಗರ್ಥ), ಪುಟ ೨೮

೯ ಡಾ। ಅರ್ಕಮಣಿಪಾಲ, ಹೆಸರಿನಲ್ಲೇನಿದೆ?, ಪುಟ ೧೫

## ೮

# ಸ್ಥಳನಾಮಗಳು ಮತ್ತು ಇತಿಹಾಸ

### ೮.೧ ಸ್ಥಳನಾಮಗಳು ಮತ್ತು ಇತಿಹಾಸ

ಗತಕಾಲದ ಘಟನೆಗಳ ವಿವರಗಳನ್ನು ವಿವರಿಸುವ ಶಾಸ್ತ್ರವೆಂದರೆ ಇತಿಹಾಸ. ಇತಿಹಾಸವು ರಾಜಕೀಯ ವಿವರ ಮಾತ್ರವಲ್ಲದೆ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಭೌಗೋಳಿಕ, ಬೌದ್ಧಿಕ ಹಾಗೂ ಆಡಳಿತಾತ್ಮಕ ವಿವರಗಳನ್ನು ತಿಳಿಸುತ್ತದೆ. ಅನೇಕ ರಾಜಮನೆತನಗಳು, ಪಾಳೆಯಗಾರರು ಹಾಗೂ ಹೊರ ಪ್ರದೇಶದ ಆಕ್ರಮಣಕಾರರು ಕರ್ನಾಟಕದಲ್ಲಿ ಆಡಳಿತ ನಡೆಸಿದ್ದಾರೆ. ಇವರ ಆಡಳಿತಕ್ಕೆ ಒಳಪಟ್ಟ ಭೂಪ್ರದೇಶಗಳು ತಮ್ಮದೇ ಆದ ವೈಶಿಷ್ಟ್ಯತೆಗಳನ್ನು ಒಳಗೊಂಡಿದ್ದಿತು. ಈ ವೈವಿಧ್ಯತೆಯು ಸ್ಥಳನಾಮಗಳ ನಿಷ್ಪನ್ನದಲ್ಲಿ ಕಂಡುಬರುವ ಸಾಧ್ಯತೆ ಇರುತ್ತದೆ. ಸ್ಥಳನಾಮಗಳಲ್ಲಿರುವ ವಿಶಿಷ್ಟ ಹಾಗೂ ಸಾಮಾನ್ಯ ವಾರ್ಗಿಕಗಳು, ಆಡಳಿತ, ನಡೆಸುತ್ತಿದ್ದವರ ವಿವರವನ್ನು ಅಥವಾ ಅಂದಿನ ಚರಿತ್ರೆಯನ್ನು ನಮ್ಮ ಮುಂದಿಡುತ್ತದೆ.

ಉದಾ: ರಾಮನಗರ > ಕ್ಲೋಸ್‌ಪೇಟೆ

ವಿಜಯಪುರ > ವಡಿಗೇನಹಳ್ಳಿ

ಮಾಗಡಿ > ಮಹಾಗಡಿ

ಬೆಂಗಳೂರು > ಬೆಂದಕಾಳೂರು

ಆಡಳಿತ ನಡೆಸುತ್ತಿದ್ದ ರಾಜರುಗಳು ಹೊಸ ಊರುಗಳನ್ನು ನಿರ್ಮಾಣ ಮಾಡಿದ್ದಾರೆ. ಅಸ್ತಿತ್ವದಲ್ಲಿದ್ದ ಕೆಲವು ಊರುಗಳ ಹೆಸರುಗಳನ್ನು ತಮ್ಮಿಚ್ಛೆಯಂತೆ ಬದಲಾಯಿಸಿದ್ದಾರೆ. ಕೆಲವು ಊರುಗಳನ್ನು ದಾನವಾಗಿ ಬೇರೆಯವರಿಗೆ ಬಿಟ್ಟುಕೊಟ್ಟಿದ್ದಾರೆ. ಕೆಲವು ಊರುಗಳನ್ನು ದತ್ತಿಗ್ರಾಮಗಳಾಗಿ ಪಡೆದು ಅಭಿವೃದ್ಧಿಪಡಿಸಿದ್ದಾರೆ. ಇವುಗಳು ಐತಿಹಾಸಿಕವಾಗಿ ಮಹತ್ವವನ್ನು ಪಡೆದಿರುತ್ತವೆ. ಇತಿಹಾಸವನ್ನು ವಿವರಿಸುವ ಸ್ಥಳನಾಮಗಳಲ್ಲಿ ಕೆಲವೊಮ್ಮೆ ಕಟ್ಟುಕತೆ ಅಥವಾ ಐತಿಹ್ಯಗಳನ್ನು ಒಳಗೊಂಡಿವೆ.

ಐತಿಹಾಸಿಕ ಮಹತ್ವ ಪಡೆದಿರುವ ಹಳೆಯ ಹೆಸರಿನ ಊರುಗಳು, ಆಧುನಿಕ ಕಾಲದಲ್ಲಿ ತಮ್ಮ ಹೆಸರು ಮತ್ತು ಸ್ವರೂಪಗಳೆರಡನ್ನೂ ಬದಲಾಯಿಸಿಕೊಂಡಿವೆ. ಅನೇಕ ಸಂದರ್ಭಗಳಲ್ಲಿ ಊರಿನ ಹೆಸರನ್ನು ಬದಲಾಯಿಸುವುದಕ್ಕೆ

ಹೊಸ ಆಡಳಿತ ವ್ಯವಸ್ಥೆಯು ಕಾರಣವಾಗಿರುವುದನ್ನು ಗುರುತಿಸಬಹುದು. ಈ ರೀತಿಯ ಬದಲಾವಣೆಗಳು ಯಾದೃಚ್ಛಿಕವಾಗಿಯೂ ಇರಬಹುದು.

ಸ್ಥಳನಾಮಗಳ ವಿಶ್ಲೇಷಣೆ ಮಾಡಿದಾಗ, ಇತಿಹಾಸ ಜೊತೆಗಿರುವ ಸಂಬಂಧ ವ್ಯಕ್ತವಾಗುತ್ತದೆ. ಸ್ಥಳನಾಮಗಳು ಸ್ಥಳೀಯ ಚರಿತ್ರೆ ಅಥವಾ ಪ್ರಾದೇಶಿಕ ಇತಿಹಾಸವನ್ನು ವ್ಯಕ್ತಪಡಿಸುತ್ತದೆ. ಸ್ಥಳನಾಮ ಸೃಷ್ಟಿಯಾದ ಹಿನ್ನೆಲೆಯಲ್ಲಿನ್ನ ಪ್ರಭುತ್ವ, ಆಡಳಿತ ವಿಧಾನ, ಸಾಂಸ್ಕೃತಿಕ - ಸಾಮಾಜಿಕ, ಭಾಷಿಕ ಸ್ಥಿತಿಯನ್ನು ಅರಿಯಲು ಅಧ್ಯಯನವು ಸಹಕಾರಿಯಾಗಿದೆ. ಹಲವಾರು ಸ್ಥಳನಾಮಗಳು ತನ್ನ ಗರ್ಭದಲ್ಲಿ ಇತಿಹಾಸವನ್ನು ಅಡಗಿಸಿಕೊಂಡಿದ್ದರೂ, ಅನೇಕ ಸಂದರ್ಭದಲ್ಲಿ ವಾಸ್ತವಾಂಶ ದೊರೆಯುವುದಿಲ್ಲ. ಸಾಮಾಜಿಕ - ಸಾಂಸ್ಕೃತಿಕ ಇತಿಹಾಸವನ್ನು ಸ್ಥಳನಾಮಗಳು ವ್ಯಕ್ತಪಡಿಸುವುದರಿಂದ, ಕಾಲಾನಂತರದಲ್ಲಿ ಆಗಿರುವ ಸ್ಥಿತ್ಯಂತರಗಳನ್ನು ಗುರುತಿಸಬಹುದು. ಸಾಂಸ್ಕೃತಿಕ ಇತಿಹಾಸ ತಿಳಿಯಲು ಶಾಸನಗಳು, ಸಾಹಿತ್ಯಕೃತಿಗಳು, ಕೈಫಿಯತ್ತುಗಳು, ಬಖೈರುಗಳು ಆಕರಗಳಾಗಿವೆ. ಇವುಗಳ ಜೊತೆ ಐತಿಹಾಸಿಕ ಸ್ಮಾರಕಗಳೂ ಮುಖ್ಯ ಆಧಾರಗಳಾಗಿವೆ. ಸ್ಥಳನಾಮಗಳ ಮೂಲಕ ಎಲ್ಲಾ ವಿವರಗಳನ್ನು ಪಡೆಯಲು ಸಾಧ್ಯವಿಲ್ಲವಾದರೂ, ಮಾನವನ ಇತಿಹಾಸ ತಿಳಿಯಲು ಸ್ಥಳನಾಮಾಧ್ಯಯನವು ಪ್ರಮುಖವಾದ ಸಾಧನವಾಗಿದೆ ಎಂಬುದರಲ್ಲಿ ಸಂಶಯವಿಲ್ಲ. "ಸ್ಥಳ ನಾಮಗಳಂತಹ ಸಾಮಾನ್ಯ ವಿಷಯದಲ್ಲಿ ಅಪೂರ್ವವಾದ ಸಂಗತಿಗಳು ಹುದುಗಿಕೊಂಡಿವೆ. ಅದೆಷ್ಟು ಅಜ್ಞಾತ ವಿಷಯಗಳು ಬೆಳಕಿಗೆ ಬರಲಿವೆ. ಸೂಕ್ಷ್ಮವಾಗಿ ವಿಮರ್ಶಿಸಿದಷ್ಟೂ ಹಿಂದೆ ಆಗಿ ಹೋದ ಅನೇಕ ಪ್ರಾಚೀನ ಐತಿಹಾಸಿಕ ಘಟನೆಗಳಿಗೆ ಶಾಸನಾದಿಗಳಲ್ಲಿ ದೊರೆಯದ ಆಧಾರಗಳು ಎಡೆಗಳ ಹೆಸರಿನಲ್ಲಿ ಸಿಕ್ಕುತ್ತವೆ. ಇತಿಹಾಸವು ಯಾರ ಹೆಸರನ್ನು ಕಡೆಗಣಿಸಿ ತೀರಾ ಸಾಮಾನ್ಯವೆಂದು ಅವರನ್ನು ಉಲ್ಲೇಖಿಸುವುದಿಲ್ಲವೋ ಅಂತಹ ಅನೇಕಾನೇಕ ಅರಸರು, ನಾಯಕರು, ಗೌಡರು, ಗೌಡತಿಯರು, ಪ್ರಾದೇಶಿಕ ವೀರರು, ಕುರುಬರು, ಗೊಲ್ಲರು ಮೊದಲಾದವರು ತಮ್ಮ ಹೆಸರಿನ ಹಟ್ಟಿಯನ್ನು ಕಟ್ಟಿಕೊಂಡು ತಮ್ಮ ಮಟ್ಟಿಗೆ ಅಜರಾಮರರಾಗಿದ್ದಾರೆ. ಪುರಾಣಗಳಿಗೆ ಪೋಷಕವಾದ ಅನೇಕ ಯಾತ್ರಾಸ್ಥಳಗಳ ವಿವರಗಳು ಧರ್ಮಸಂಸ್ಕೃತಿಗಳ ಮಹಾಪ್ರವಾಹದ ಕುರುಹುಗಳನ್ನು ಎಡೆಗಳಿಂದ ತಿಳಿದುಕೊಳ್ಳಬಹುದು."[೧] ಎಂಬುದು ಶಂಬಾ ಜೋಶಿಯವರ ನಿಲುವಾಗಿದೆ.

ಇತಿಹಾಸದ ಒಂದು ಭಾಗವಾಗಿ ಸ್ಥಳನಾಮವನ್ನು ಇತಿಹಾಸಕಾರರು ಪರಿಗಣಿಸಿಲ್ಲದಿದ್ದುದರಿಂದ, ಸ್ಥಳನಾಮಗಳನ್ನು ಅಧ್ಯಯನ ಕ್ಷೇತ್ರವಾಗಿ ಪರಿಗಣಿಸಿರಲಿಲ್ಲ. ಒಂದು ಸ್ಥಳದಲ್ಲಿನ ನಿರ್ಮಾಣವಾಚಿ ಅಂಶಗಳು, ನಿರ್ದಿಷ್ಟವಾದ ರಾಜಕೀಯ ಸಾಂಸ್ಕೃತಿಕ ಅಂಶಗಳನ್ನು ಪ್ರತಿಬಿಂಬಿಸುತ್ತಿರುತ್ತವೆ. ಸ್ಥಳನಾಮಗಳ ಸೂಕ್ಷ್ಮ ಅಧ್ಯಯನವು. ಇತಿಹಾಸದ ಅನೇಕ ವಿವರಗಳನ್ನು ತಿಳಿಯಲು ಸಹಾಯಕವಾಗಿದೆ. "ಬೆಂಗಳೂರಿನ ವಿಸ್ತರಣೆ ಬಗ್ಗೆ, ಉದಾಹರಣೆಗೆ ಇಲ್ಲಿನ ಹೋಬಳಿಗಳು, ಅಗ್ರಹಾರಗಳು, ದಾನಗಳು, ಪ್ರತಿಗಾಹಿಗಳು, ಬೇರೆ ಬೇರೆ ಜಾತಿಗಳು ಬೆಂಗಳೂರಿನಲ್ಲಿ ಏಳಿಗೆಯಾದ ಬಗ್ಗೆ ಇತ್ಯಾದಿ ಆಸಕ್ತಿದಾಯಕ ಹಾಗೂ ಸತ್ವಪೂರ್ಣ ವಿವರಣೆಗಳನ್ನೊಳಗೊಂಡ ಬಖೈರುಗಳು ಬೆಂಗಳೂರಿನ ಇತಿಹಾಸದ ಅಧ್ಯಯನಕ್ಕೆ ಒಂದು ಮಹತ್ವದ ದಾಖಲೆಯಾಗಿದೆ. ಇದರಿಂದ ಈ ಕಾಲದ ಪ್ರಭುಗಳ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಸ್ಥಿತಿ-ಗತಿಗಳ ಬಗ್ಗೆ ಹೊಸ ದೃಷ್ಟಿಕೋನದಿಂದ ಪರಾಮರ್ಶೆ ನಡೆಸಲು ದಂತಕತೆಗಳನ್ನು ಬಳಸಿಕೊಂಡು ಇತಿಹಾಸವನ್ನು ರಚಿಸಲು ಸಹಾಯಕವಾಗುತ್ತದೆ."[೨] ಎಂಬುದು ಇತಿಹಾಸಕಾರರ ವಿಶ್ಲೇಷಣೆಯಾಗಿದೆ.

ಕರ್ನಾಟಕದ ಇತಿಹಾಸದಲ್ಲಿ ಅನೇಕ ರಾಜ ವಂಶಗಳು ಆಡಳಿತವನ್ನು ನಡೆಸಿವೆ. ಕರ್ನಾಟಕದ ಮೊದಲ ರಾಜವಂಶವೆಂದರೆ ಶಾತವಾಹನರದ್ದು. ಇವರು ಕ್ರಿಸ್ತಶಕ ಒಂದನೆಯ ಶತಮಾನದಿಂದ ಮೂರನೆಯ ಶತಮಾನದವರೆಗೂ

ಆಡಳಿತ ನಡೆಸಿದರು. ಉತ್ತರಕರ್ನಾಟಕದ ಭಾಗ ಇವರ ಆಡಳಿತಕ್ಕೆ ಒಳಗಾಗಿದ್ದು ಈ ಭಾಗವನ್ನು ಕುಂತಲ ನಾಡೆಂದು ಕರೆಯಲಾಗುತ್ತಿತ್ತು. ಕ್ರಿಸ್ತಶಕ ೩೪೫ ರಿಂದ ೫೬೫ ವರೆಗೆ ಬನವಾಸಿಯ ಕದಂಬರು, ಕ್ರಿ.ಶ. ೩೫೦ ರಿಂದ ೧೦೫೦ರವರೆಗೆ ತಲಕಾಡಿನ ಗಂಗರು, ಕ್ರಿ.ಶ. ೫೫೦ ರಿಂದ ೭೫೭ ರವರೆಗೆ ಬಾದಾಮಿಯ ಚಾಲುಕ್ಯರು, ಕ್ರಿ.ಶ. ೭೫೨ ರಿಂದ ೯೭೩ ರವರೆಗೆ ರಾಷ್ಟ್ರಕೂಟರು, ಕ್ರಿ.ಶ. ೯೭೩ ರಿಂದ ೧೨೦೦ ರವರೆಗೆ ಕಲ್ಯಾಣಿಯ ಚಾಲುಕ್ಯರು, ಕ್ರಿ.ಶ. ೧೧೫೬ ರಿಂದ ೧೧೮೩ರವರೆಗೆ ಕಲ್ಯಾಣಿಯ ಕಲಚೂರ್ಯರು, ಕ್ರಿ.ಶ. ೧೦೨೦ರಿಂದ ೧೩೪೨ರವರೆಗೆ ಹೊಯ್ಸಳರು, ಕ್ರಿ.ಶ. ೧೩೪೪ ರಿಂದ ೧೬೭೨ರವರೆಗೆ ವಿಜಯನಗರದ ಅರಸರು, ಕ್ರಿ.ಶ. ೧೩೪೬ ರಿಂದ ೧೫೨೮ರವರೆಗೆ ಬಹುಮನಿ ಸುಲ್ತಾನರು, ಕ್ರಿ.ಶ. ೧೪೮೯ ರಿಂದ ೧೭೦೦ರವರೆಗೆ ಬಿಜಾಪುರದ ಸುಲ್ತಾನರು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಆಡಳಿತ ನಡೆಸಿರುತ್ತಾರೆ. ಈ ರಾಜ ವಂಶಗಳಲ್ಲದೆ, ಅನೇಕ ಸಾಮಂತ ರಾಜರುಗಳು, ಪಾಳೆಯಗಾರರು, ಸ್ಥಳೀಯ ನಾಯಕರು ಕೆಲವು ಭಾಗಗಳಲ್ಲಿ ಸ್ವತಂತ್ರವಾಗಿ, ಕೆಲವು ಭಾಗಗಳಲ್ಲಿ ರಾಜರುಗಳ ಅಧೀನದಲ್ಲಿ ಆಡಳಿತ ನಿರ್ವಹಿಸಿರುತ್ತಾರೆ.

ಬೆಂಗಳೂರು ನಗರ ಹಾಗೂ ಗ್ರಾಮಾಂತರ ಪ್ರದೇಶವು ಮೇಲಿನ ಅನೇಕ ರಾಜವಂಶಗಳ ಹಾಗೂ ಸ್ಥಳೀಯ ನಾಯಕರ ಆಡಳಿತಕ್ಕೆ ಒಳಗಾಗಿರುವುದು ಕಂಡು ಬರುತ್ತದೆ. ರಾಜವಂಶದ ವಿವರಗಳನ್ನು ಸೂಚಿಸುವ ಅನೇಕ ಶಾಸನಗಳು ಇದಕ್ಕೆ ನಿದರ್ಶನವಾಗಿವೆ.

**ಐತಿಹಾಸಿಕ ವಿವರ ನೀಡುವ ಸ್ಥಳನಾಮಗಳು**

ಬೆಂಗಳೂರು : ಹೊಯ್ಸಳ ರಾಜ ವೀರಬಲ್ಲಾಳ ಬೇಟೆಯಾಡಲು ಬಂದಾಗ, ಮುದುಕಿಯೊಬ್ಬಳು 'ಬೆಂದಕಾಳು' ನೀಡಿದ್ದರಿಂದ 'ಬೆಂದಕಾಳ ಊರು' > ಬೆಂದಕಾಳೂರ > ಬೆಂಗಾಳೂರು > ಬೆಂಗಳೂರು ಆಗಿದೆ ಎಂಬ ಐತಿಹ್ಯವಿದೆ. ಈ ವೀರಬಲ್ಲಾಳನೆಂದರೆ ಕ್ರಿ.ಶ. ೧೧೭೯ ರಿಂದ ೧೨೧೯ರ ವರೆಗೆ ಆಡಳಿತ ನಡೆಸಿದ ಎರಡನೇ ಹೊಯ್ಸಳ ಬಲ್ಲಾಳ ರಾಜನಿರಬೇಕೆಂದು ಊಹಿಸಲಾಗಿದೆ.

ನಂದಗುಡಿ (ಹೊ) : 'ನಂದಗುಡಿ' ಸ್ಥಳವು ಉತ್ತುಂಗ ಭುಜನ ರಾಜಧಾನಿಯಾಗಿತ್ತು. ಇವನು ತನ್ನ ಬಂಧುಗಳಾದ ನಂದರನ್ನು ಸೆರೆಯಲ್ಲಿಟ್ಟಿದ್ದನು. ನಂತರ ಇವರು ತಪ್ಪಿಸಿಕೊಂಡು ಚಾಣುಕ್ಯನ ತಂತ್ರದಿಂದ ರಾಜ್ಯ ಆಕ್ರಮಿಸಿದರೆಂಬ ಇತಿಹಾಸವಿದೆ.

ಮಾಕುಂದ (ಮನಕುಂದ) (ಚ) : ಈ ಊರನ್ನು ಸೋಮ ವಂಶದ ವಿಜಯ ಪಾಲನು ಸ್ಥಾಪಿಸಿದ. ಕ್ರಿ.ಶ. ೭ನೆಯ ಶತಮಾನದಲ್ಲಿ ಗಂಗವಂಶದ ಭೂವಿಕ್ರಮ ಮತ್ತು ಶಿವಮಾರ ರಾಜರು ಈ 'ಮಾಕುಂದ'ವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡರೆಂಬ ಇತಿಹಾಸವಿದೆ. ಇದಕ್ಕೆ 'ಮನ ಕುಂದ' ಎಂಬ ಹೆಸರೂ ಇದೆ.

ಮಣ್ಣೆ (ನೆ) : ಕ್ರಿ.ಶ. ೮ನೆಯ ಶತಮಾನದಲ್ಲಿ ಗಂಗರ ದೊರೆ ಶ್ರೀಪುರುಷನು 'ಮಣ್ಣೆ'ಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿದ್ದನೆಂದೂ 'ಮಣ್ಣೆ'ಗೆ - 'ಮಾನ್ಯಪುರ'ವೆಂದು ಹೆಸರು ಇದ್ದಿತೆಂದು ತಿಳಿದು ಬರುತ್ತದೆ. ಶಾಸನಗಳಲ್ಲಿ 'ಮಣ್ಣೈಕಟಕಂ' ಎಂದೂ, ಈ ಪ್ರದೇಶಕ್ಕೆ 'ವಿಕ್ರಮ ಚೋಳಮಂಡಲ' ಎಂಬ ಹೆಸರಿತ್ತೆಂದೂ, ಚೋಳರ ಆಡಳಿತಕ್ಕೆ ಒಳಪಟ್ಟ ಪ್ರದೇಶವೆಂದು ತಿಳಿದುಬರುತ್ತದೆ.

ವಿರುಪಾಕ್ಷಪುರ (ಚ) : ಹೊಯ್ಸಳ ವಂಶದ ರಾಜನಾದ ಮೂರನೆಯ ಬಲ್ಲಾಳನು 'ವಿರೂಪಾಕ್ಷಪುರ'ದಲ್ಲಿ ವಾಸವಿದ್ದನೆಂಬ ಇತಿಹಾಸವಿದೆ.

ರಾಮನಾಥಪುರ (ದೇ) : ಹೊಯ್ಸಳ ರಾಜ ಮೂರನೆಯ ನರಸಿಂಹನ ಸಹೋದರ 'ರಾಮನಾಥ'ನು ಬೆಂಗಳೂರಿನ ಉತ್ತರಭಾಗದಲ್ಲಿ ಆಡಳಿತ ನಡೆಸುತ್ತಿದ್ದರಿಂದ ಅವನ ಹೆಸರಿನಲ್ಲಿಯೇ 'ರಾಮನಾಥಪುರ' ಎಂಬ ಊರು ಪ್ರಾರಂಭವಾಗಿರುವ ಸಾಧ್ಯತೆ ಇದೆ.

ಕುಂದಾಣ (ದೇ) : ಹೊಯ್ಸಳರಾಜ ಮೂರನೆಯ ನರಸಿಂಹನ ಸಹೋದರ ರಾಮನಾಥನ ಆಳ್ವಿಕೆಯಲ್ಲಿ 'ಕುಂದಾಣ'ವನ್ನು ರಾಜಧಾನಿಯನ್ನಾಗಿ ಮಾಡಿ ಕೊಂಡಿದ್ದನೆಂಬ ಇತಿಹಾಸವಿದೆ.

ನೆಲಮಂಗಲ (ನೆ) : ಕರ್ನಾಟಕ ದೇಶದ ರಾಜನಾದ ಹೇಮಚಂದ್ರನ ಮಗ ಸುಮತಿ ಯೆಂಬುವನು ತನ್ನ ತಂದೆಯ ಆಜ್ಞೆಯಂತೆ ನೆಲಮಂಗಲ ಪ್ರದೇಶದಲ್ಲಿ 'ಭೂಮಂಡನ'ವೆಂಬ ಪಟ್ಟಣ ಸ್ಥಾಪಿಸಿದನೆಂಬ ಐತಿಹ್ಯವಿದೆ. 'ಭೂಮಂಡನ'ಪಟ್ಟಣವೇ 'ನೆಲಮಂಗಲ' ಆಗಿದೆ ಎಂಬುದನ್ನು ಇತಿಹಾಸದಿಂದ ತಿಳಿಯಬಹುದು.

ಆವತಿ (ದೇ) : ಕಂಚಿಯಿಂದ ಬಂದ ಮೊರಸು ಒಕ್ಕಲಿಗ ಮನೆತನದ ಏಳು ಜನ ಸಹೋದರರಲ್ಲಿ ಒಬ್ಬನಾದ ರಣಭೈರೇಗೌಡನಿಗೆ ಕನಸು ಬಿದ್ದುದರಿಂದ, 'ಆಹುತಿ' (ಆವುತಿ > ಆವತಿ) ಎಂಬ ಊರನ್ನು ಕಟ್ಟಿದರೆಂಬ ಇತಿಹಾಸವಿದೆ

ಕನಕಪುರ (ಕ) : 'ಕಾನಕಾನಹಳ್ಳಿ' ಎಂಬುದು ಪೂರ್ವನಾಮವಾಗಿದೆ. ಕಾನಕಾನ ಎಂಬುವನು ಚಿಕ್ಕಕೋಟೆ ಕಟ್ಟಿದನೆಂದೂ, ಚನ್ನಪಟ್ಟಣದ ನಾಯಕ ಜಗದೇವರಾಯನು ಈ ಕೋಟೆಯನ್ನು ಪುನರ್ನಿರ್ಮಾಣ ಮಾಡಿದನೆಂಬ ಇತಿಹಾಸವಿದೆ. ಬ್ರಿಟಿಷರಿಗೆ ಈ ಊರಿನಿಂದ ಏನೂ

ಅನುಕೂಲವಾಗದಿರಲಿ ಎಂಬ ಕಾರಣದಿಂದ ಟಿಪ್ಪುಸುಲ್ತಾನ್ ಈ ಊರನ್ನು ಎರಡು ಬಾರಿ ಸುಟ್ಟು ಹಾಳುಮಾಡಿದನೆಂಬ ಇತಿಹಾಸವಿದೆ.

ದೇವನಹಳ್ಳಿ (ದೇ) : ಕಂಚಿಯಿಂದ ವಲಸೆ ಬಂದ ಸಹೋದರರ ವಂಶಕ್ಕೆ ಸೇರಿದ ಮಲ್ಲಭೈರೇಗೌಡನು, ೧೫೦೧ರಲ್ಲಿ ಇಲ್ಲಿ ಕೋಟೆ ನಿರ್ಮಿಸಿದ. ಕ್ರಿ.ಶ. ೧೭೪೯ರಲ್ಲಿ ಮೈಸೂರಿನ ಸೈನ್ಯವು. ಈ ಊರನ್ನು ವಶಪಡಿಸಿಕೊಂಡಿತು. ಹೈದರಾಲಿಯೂ ಊರಿನ ಕೋಟೆಯನ್ನು ಪುನರ್ನಿರ್ಮಾಣ ಮಾಡಿದನು. ೧೭೯೧ರಲ್ಲಿ ಬ್ರಿಟಿಷ್ ಸೈನ್ಯವು ಈ ಊರನ್ನು ವಶಪಡಿಸಿಕೊಂಡಿತು.

ದೊಡ್ಡಬಳ್ಳಾಪುರ (ದೊ) : ಆವತಿಯ ನಾಯಕನಾದ ಮಲ್ಲಭೈರೇಗೌಡನು ಈ ಊರನ್ನು ನಿರ್ಮಿಸಿದ. ಈ ಊರನ್ನು ಬಿಜಾಪುರದ ಸುಲ್ತಾನರು ವಶಪಡಿಸಿಕೊಂಡರು. ನಂತರ ಇದು ಮರಾಠರ ವಶವಾಯಿತು. ೧೬೮೯ರಲ್ಲಿ ಮೊಗಲ್ ಸೈನ್ಯವು ಇದನ್ನು ವಶಪಡಿಸಿಕೊಂಡಿತು. ನಂತರ ಮೈಸೂರು ರಾಜ್ಯಕ್ಕೆ ಸೇರಿತು.

ಮಾಗಡಿ (ಮಾ) : ಕ್ರಿ. ಶ. ೧೧೩೯ರಲ್ಲಿ ಚೋಳರಾಜನಿಂದ ಸ್ಥಾಪನೆಯಾಯಿತೆಂಬ ಇತಿಹಾಸವಿದೆ. ನಂತರ ಇದು ಹೊಯ್ಸಳ ರಾಜಮನೆತನದ ವಶವಾಯಿತು. ಇವರ ನಂತರ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ ಮೇಲೆ, ಅಚ್ಯುತರಾಯನ ಮಾಂಡಲಿಕನಾದ ಸಾಮಂತರಾಯನು ಈ ಊರನ್ನು ವಿಸ್ತರಿಸಿ, ಸಾವನದುರ್ಗದಲ್ಲಿ ಕೋಟೆ ನಿರ್ಮಿಸಿದರನೆಂದು ತಿಳಿದುಬರುತ್ತದೆ. ಸ್ಥಳೀಯ ನಾಯಕನಾದ ತಳಾರಿ ಗಂಗಪ್ಪನು ಈ ಪ್ರಾಂತ್ಯವನ್ನು ವಶಪಡಿಸಿಕೊಂಡನೆಂದೂ, ನಂತರ ಬೆಂಗಳೂರಿನ ಇಮ್ಮಡಿ ಕೆಂಪೇಗೌಡ 'ಸಾವನ ದುರ್ಗ'ವನ್ನು ವಶಪಡಿಸಿಕೊಂಡನೆಂಬ ಇತಿಹಾಸವಿದೆ.
ಯಲಹಂಕ ನಾಡಿನ ಮಹಾಗಡಿಯ ಭಾಗವೇ,
ಮಹಾಗಡಿ > ಮಾಗಡಿ ಆಗಿದೆಯೆಂಬ ಇತಿಹಾಸವಿದೆ.

ಮಳೂರು (ಚ) : ಚೋಳ ಕಾಲದ ದೇವಾಲಯ ಹಾಗೂ ಶಾಸನಗಳನ್ನು ಗುರುತಿಸಬಹುದು. ಇದಕ್ಕೆ 'ರಾಜೇಂದ್ರ ಸಿಂಹ ನಗರ' ಎಂಬ ಹೆಸರೂ ಇದ್ದಿತು.

ಹೊಸ ಕೋಟೆ (ಹೊ) : ಸುಗಟೂರಿನ ನಾಯಕನಾದ ತಿಮ್ಮೇಗೌಡನು ಈ ಊರಿನಲ್ಲಿ, ಕ್ರಿ.ಶ. ೧೫೯೫ರಲ್ಲಿ ಹೊಸದಾಗಿ ಕೋಟೆಯನ್ನು ಕಟ್ಟಿದ್ದರಿಂದ 'ಹೊಸಕೋಟೆ' ಎಂಬ ಹೆಸರು ಬಂದಿದೆಯೆಂಬ ಇತಿಹಾಸವಿದೆ.

| | | |
|---|---|---|
| ಚನ್ನಪಟ್ಟಣ (ಚ) | : | 'ಚಂದಾಪುರ' ಎಂದು ಕರೆಯಲ್ಪಡುತ್ತಿದ್ದ ಈ ಊರು ನಂತರ 'ಚನ್ನಪಟ್ಟಣ' ಎಂದು ಹೆಸರು ಬದಲಾಗಿದೆ. ವಿಜಯನಗರದ ಸಾಮಂತನಾಗಿದ್ದ ಜಗದೇವರಾಯನ ರಾಜಧಾನಿಯಾಗಿತ್ತು. ಕ್ರಿ.ಶ. ೧೫೮೦ ರಲ್ಲಿ ಕೋಟೆಯನ್ನು ನಿರ್ಮಿಸಿದ. ಕ್ರಿ.ಶ. ೧೬೩೦ರಲ್ಲಿ ಮೈಸೂರಿನ ಒಡೆಯರು ವಶಪಡಿಸಿಕೊಂಡರೆಂದೂ, ೧೭೫೯ರಲ್ಲಿ ಮರಾಠರ ವಶಕ್ಕೆ ಬಂದಿತೆಂದೂ, ನಂತರ ಹೈದರಾಲಿಯ ವಶಕ್ಕೆ ಸೇರಿತೆಂದೂ, ಟಿಪ್ಪುಸುಲ್ತಾನ್ ೧೭೯೦ ರಲ್ಲಿ ಕೋಟೆಯನ್ನು ನೆಲಸಮಗೊಳಿಸಿದನೆಂಬ ಇತಿಹಾಸವಿದೆ. ಚನ್ನಪಟ್ಟಣವು ಸ್ಥಳೀಯ ನಾಯಕರ ಆಡಳಿತದಲ್ಲಿಯೂ ಇದ್ದಿತು. |
| ವಿಜಯಪುರ (ದೇ) | : | 'ವಡಿಗೇನಹಳ್ಳಿ' ಎಂದು ಹೆಸರಿದ್ದ ಈ ಊರಿಗೆ ಭಾರತ ಸ್ವಾತಂತ್ರ್ಯದ ನಂತರ 'ವಿಜಯಪುರ' ಎಂದು ಪುನರ್ನಾಮಕರಣ ಮಾಡಲಾಯಿತು. ಕ್ರಿ.ಶ. ೧೫೨೫ರ ಶಾಸನದಂತೆ ವೀರಪ್ರತಾಪ ಕೃಷ್ಣರಾಯನು ಆಡಳಿತ ನಡೆಸುತ್ತಿದ್ದನೆಂದು ಇತಿಹಾಸದಿಂದ ತಿಳಿದುಬರುತ್ತದೆ. |
| ಲಕ್ಷ್ಮೀಪುರ (ಮಾ) | : | ಮಾಗಡಿಯ ಪ್ರಭುವಾಗಿದ್ದ ಕೆಂಪವೀರಪ್ಪಗೌಡನು ತನ್ನ ತಂಗಿಯಾದ ವೀರಮ್ಮಾಜಿಗೆ ನೀಡಿದ ಪುದುವಟ್ಟು ಗ್ರಾಮ ಇದು. 'ಪುದುವಟ್ಟು' ಎಂಬುದು ಇದರ ಮೂಲ ಹೆಸರಾಗಿದ್ದಿತು. 'ಮಲ್ಲಣಕಲ್ಲು' ಎಂಬುದು ಈ ಊರಿಗಿದ್ದ ಮತ್ತೊಂದು ಹೆಸರು. ೧೯೩೫ರ ನಂತರ ಇದನ್ನು 'ಲಕ್ಷ್ಮೀಪುರ' ಎಂದು ಪುನರ್ನಾಮಕರಣ ಮಾಡಲಾಗಿದೆ. ಸಂಸ್ಕೃತೀಕರಣದ ಪ್ರಭಾವದಿಂದ ಈ ಹೆಸರು ಬಂದಿದೆ. |
| ಕ್ಯಾಸಾಪುರ (ರಾ) | : | 'ಕೇಶವಪುರ' ಎಂಬುದು ಈ ಊರಿನ ಮೂಲ ಹೆಸರಾಗಿದ್ದು ಜನರ ಬಳಕೆಯಲ್ಲಿ 'ಕ್ಯಾಸಾಪುರ' ಆಗಿದೆ. ಈ ಪ್ರದೇಶದಲ್ಲಿ ದರೋಡೆಗಳು ಹೆಚ್ಚಾಗಿದ್ದುದರಿಂದ, ಮೈಸೂರು ಅರಸರಾದ ಚಿಕ್ಕದೇವರಾಜ ಒಡೆಯರು ಬಿಜಾಪುರದ ದೊರೆಗಳಲ್ಲಿ ಭಿನ್ನಹ ಮಾಡಿದರು. ಆ ಸಂದರ್ಭದಲ್ಲಿ, ಮರಾಠ ಮುಸಲ್ಮಾನ ಸೈನಿಕರು ಹಾಗೂ ರಜಪೂತ ಸರದಾರರು ಈ ಪ್ರದೇಶದಲ್ಲಿ ಬಂದು ನೆಲೆಸಿದರು. ರಜಪೂತ ಸರದಾರರಾದ ಬಹದ್ದೂರ್ ಸಿಂಗ್ ಮತ್ತು ಪ್ರಕಾಶ್ ಸಿಂಗ್ ತಮ್ಮ ಗುರು ಕೇಶವದಾಸರನ್ನು ಕರೆತಂದಿದ್ದರು. ಕೇಶವದಾಸರು ಬಿಕ್ಷೆ ಕಾಯಕದಿಂದ, ಹಣ ಸಂಪಾದಿಸಿ ಕೆರೆಯನ್ನು ನಿರ್ಮಿಸಿದರು. ಅವರ ಹೆಸರಿನಲ್ಲಿಯೇ ಊರು ಪ್ರಚಲಿತವಾಗಿ 'ಕೇಶವಪುರ' ವಾಯಿತು. ಕೇಶವಪುರ > ಕೇಸವಪುರ > ಕ್ಯಾಸಾಪುರ ಆಗಿದೆ. |

## ೮.೨ ಐತಿಹ್ಯಗಳು ಮತ್ತು ಸ್ಥಳನಾಮಗಳು

ಐತಿಹ್ಯಗಳು ಘಟನೆಯೊಂದನ್ನು ವಿವರಿಸುವ ಕಥೆಗಳಾಗಿದ್ದು ವ್ಯಕ್ತಿ ಅಥವಾ ಸ್ಥಳಕ್ಕೆ ಸಂಬಂಧಪಟ್ಟಂತೆ ಸೃಷ್ಟಿಯಾಗಿರುತ್ತದೆ. ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಊರಿಗೆ ಸಂಬಂಧಿಸಿದ ಮಾಧ್ಯಮಿಕ ವಿವರಗಳನ್ನು ಐತಿಹ್ಯಗಳು ಒಳಗೊಂಡಿರುತ್ತವೆ. ಈ ಐತಿಹ್ಯಗಳು ಕೆಲವೊಮ್ಮೆ ಸ್ಥಳನಾಮಗಳ ನಿಜ ನಿಷ್ಪತ್ತಿಗೆ ಕಾರಣವಾಗುವ ಸಾಧ್ಯತೆಯಿರುತ್ತದೆ . ''ಸ್ಥಳದ ಹೆಸರೊಂದಕ್ಕೆ ನಿಜವಾದ ನಿಷ್ಪತ್ತಿ ತಿಳಿಯದಿದ್ದಾಗ, ತಪ್ಪು ವ್ಯಾಖ್ಯಾನ ಮಾಡುವುದೇ ಇದು. ಈ ತಪ್ಪು ನಿಷ್ಪತ್ತಿ ಅಪರಿಚಿತ ಹೆಸರಿಗೆ ವಿವರಣೆ ಕೊಡಲು ಕಾರ್ಯಕಾರಣ ಕಥೆಯೊಂದನ್ನು ಸೃಜಿಸುತ್ತದೆ.''[೩]

ಐತಿಹ್ಯಗಳು ಸಂಪೂರ್ಣವಾಗಿ ಕಲ್ಪಿತವಾದ ಕಥೆಗಳಲ್ಲ. ಚಾರಿತ್ರಿಕ ಅಂಶಗಳನ್ನೊಳಗೊಂಡ ವಿಶಿಷ್ಟವಾದ ಘಟಕಗಳ ಸಮೀಕರಣವಾಗಿರುತ್ತವೆ. ಇವು ನೈಜಘಟನೆಗಳ ಚಿತ್ರಣವನ್ನು ಸಮರ್ಥನೆಗೆ ಬಳಸಿಕೊಳ್ಳುತ್ತವೆ. ಆಯಾ ಪ್ರದೇಶದ ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ವಿವರಗಳನ್ನು ತನ್ನ ನಿರೂಪಣೆಯಲ್ಲಿ ಸೇರಿಸಿಕೊಂಡು ಊರ ಹೆಸರಿನ ನಿಷ್ಪತ್ತಿಯನ್ನು ಪ್ರಚಾರಪಡಿಸುತ್ತಿರುತ್ತದೆ. '' 'ಐತಿಹ್ಯ'ವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ ಹಿಂದೆ ವಾಸ್ತವವಾಗಿ ನಡೆದದ್ದೇ ಎಂಬುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿರುವ ಘಟನೆಗಳ ಗದ್ಯ ನಿರೂಪಣೆಯಾಗಿದ್ದು, ಒಂದು ದೃಷ್ಟಿಯಿಂದ ಜನಪದ ಇತಿಹಾಸ'[೪] ಐತಿಹ್ಯಗಳ ಸೃಷ್ಟಿಯು ವಿದ್ಯಾವಂತ ಸಮುದಾಯಕ್ಕಿಂತ ಅವಿದ್ಯಾವಂತ ಜನ ಸಮುದಾಯದಲ್ಲಿ ಹೆಚ್ಚಾಗಿದೆ. ಈ ರೀತಿಯ ಐತಿಹ್ಯಗಳನ್ನು ವಿಶ್ಲೇಷಣೆಗಾಗಿಲೀ ಅಥವಾ ಪ್ರಶ್ನಿಸುವ ಪ್ರಯತ್ನವನ್ನಾಗಿಲೀ ಈ ವರ್ಗವು ಮಾಡುವುದಿಲ್ಲ. ಇವರು ಅನಕ್ಷರಸ್ಥರಾದರೂ, ಐತಿಹ್ಯಗಳ ಸೃಷ್ಟಿಯಲ್ಲಿ ಭಾಷಾ ಹಾಗೂ ಕಲಾ ಪ್ರತಿಭೆಯನ್ನು ತೋರಿರುತ್ತಾರೆ. ಸ್ಥಳನಾಮ ನಿಷ್ಪತ್ತಿ ಹೊಂದಿಕೊಳ್ಳುವಂತೆ ಐತಿಹ್ಯಗಳನ್ನು ಸೃಷ್ಟಿಸುವ ಹಾಗೂ ಸಂಯೋಜಿಸುವ ಶಕ್ತಿ ಸೃಷ್ಟಿಕರ್ತರಿಗಿರುತ್ತದೆ. ಈ ಪ್ರಕ್ರಿಯೆಯಲ್ಲಿ 'ಸೃಷ್ಟಿಕರ್ತರು-ಪ್ರಸಾರಕರು-ಕೇಳುಗರು' ಎಂಬ ಮೂರು ನೆಲೆಯನ್ನು ಗುರುತಿಸಬಹುದು.[೫]

ಐತಿಹ್ಯಗಳ ಸೃಷ್ಟಿ ಉದ್ದೇಶಪೂರ್ವಕ ವಾದದ್ದಲ್ಲ. ವಿದ್ಯಾವಂತರು ಲಿಖಿತ ಚರಿತ್ರೆಯ ಮೂಲಕ ಇತಿಹಾಸವನ್ನು ದಾಖಲಿಸಿಕೊಂಡರೆ, ಅವಿದ್ಯಾವಂತರು ಐತಿಹ್ಯಗಳನ್ನು ಮೌಖಿಕ ಪರಂಪರೆಯನ್ನು ದಾಖಲೆಗಳನ್ನಾಗಿ ಮಾಡಿ ಕೊಂಡಿರುತ್ತಾರೆ. ''ಸ್ಥಳನಾಮ ಐತಿಹ್ಯಗಳು ಜಗತ್ತಿನಲ್ಲೆಲ್ಲಾ ವ್ಯಾಪಕವಾಗಿ ಹರಡಿವೆ. ಅವು ಯಥಾರ್ಥವಾಗಿರಬಹುದು ಇಲ್ಲವೇ ಕಾಲ್ಪನಿಕವಾಗಿರಬಹುದು'' ತಮ್ಮ ಊರಿನ ಹೆಸರಿನ ನಿಷ್ಪತ್ತಿಗೆ, ಪುರಾಣದ ಸಂಬಂಧ ಕಲ್ಪಿಸುವದರಿಂದ, ತಮಗೆ ಹಾಗೂ ಊರಿಗೆ ಶ್ರೇಷ್ಠತೆ ಬರುತ್ತದೆಂಬ ಭಾವನೆ ಹಾಗೂ ಇದು ಹೆಮ್ಮೆಯ ವಿಷಯವಾಗಿರುವುದರಿಂದ ಐತಿಹ್ಯಗಳು ಹುಟ್ಟುತ್ತವೆ.[೬]

ಜನಬಳಕೆಯಲ್ಲಿ ಸ್ಥಳನಾಮಗಳು ಮೂಲ ಉಚ್ಚಾರಣೆ ಅಸ್ತಿತ್ವ ಕಳೆದುಕೊಂಡು, ಮತ್ತೊಂದು ರೂಪ ಸೃಷ್ಟಿಯಾಗುತ್ತದೆ. ಈ ರೂಪಗಳಿಗೆ ಜನರು ತಮ್ಮದೆ ಆದ ನಿರೂಪಣೆಯನ್ನು ಮಾಡುವರು. ಇವುಗಳನ್ನು ''ಜನಪದ ನಿರುಕ್ತಿ'' ಎಂದು ಕರೆಯಬಹುದು.[೭]

''ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕಟ್ಟುಕಥೆಗಳೇ ಐತಿಹ್ಯಗಳಾಗುತ್ತವೆ'' ಎಂಬುದು ಡಾ। ದೇ. ಜವರೇಗೌಡರ ಅಭಿಪ್ರಾಯವಾಗಿದೆ. ಮನರಂಜನೆ ಇದರ ಗುರಿಯಲ್ಲವಾದರೂ ತಮ್ಮ ಊರಿನ,

ದೇವರುಗಳ, ವ್ಯಕ್ತಿಗಳ ಒಗೆಗಿನ ಅಭಿಮಾನ ಇಲ್ಲಿ ಮುಖ್ಯವಾಗಿರುತ್ತದೆ. ಐತಿಹ್ಯಗಳ ಸೃಷ್ಟಿಯಲ್ಲಿ ಉತ್ಪ್ರೇಕ್ಷೆ ಇರುತ್ತದ ಯಾದರೂ, ಉದ್ದೇಶಪೂರ್ವಕವಾಗಿ ಮಾಡಿರುವುದಲ್ಲ.

"ಜಾನಪದ ನೆಲೆಗಟ್ಟಿನಲ್ಲಿ ಐತಿಹ್ಯವೂ ಕಥೆಯ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಏಕೆಂದರೆ ಐತಿಹ್ಯವು ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಪೂರ್ತಿ ಕಲ್ಪಿತ ದಂತ ಕಥೆಯೂ ಅಲ್ಲ. ಎಲ್ಲೋ ಯಾವಾಗಲೋ ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆಯು ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿರುತ್ತದೆ. ಈ ಪ್ರಭಾವವೇ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ ಆ ನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶವನ್ನು ಸೇರಿಸಿಬಿಡುತ್ತಾನೆ. ಆ ಪರಿಷ್ಕೃತ ಅಂಶವನ್ನು ಹರಡುತ್ತಾನೆ. ಹೀಗೆ ಒಂದು ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ರೂಪು ತಾಳುತ್ತದೆ."[೯] ಈ ರೀತಿಯ ಐತಿಹ್ಯಗಳಲ್ಲಿ ನೈಜ ಮತ್ತು ಕಲ್ಪನೆಯ ಮಿಶ್ರಣವಾಗಿರುವ ಸಾಧ್ಯತೆಯು ಇರುತ್ತದೆ. ಐತಿಹ್ಯಕ್ಕೆ ಬುನಾದಿಯೆಂದರೆ, ಅದರ ಸೃಷ್ಟಿಗೆ ಪೂರಕವಾದ ಅವಶೇಷಗಳು, ಭೌಗೋಳಿಕ ಸ್ಥಿತಿ, ದೊರೆಯುವ ಕೆಲವು ವಸ್ತುಗಳು, ಬೆಟ್ಟ-ಗುಡ್ಡ, ನದಿಗಳು, ಐತಿಹಾಸಿಕ ಅಂಶ ಬಿಂಬಿಸುವ ಯಾವುದೇ ಶಾಸನ ಅಥವಾ ಸ್ಮಾರಕಗಳಾಗಿವೆ. "ಪ್ರಕೃತಿಯ ಅದ್ಭುತಕ್ಕೆ ಆರೋಪಿಸಿ ಹೇಳುವ ಕಥೆಗಳೇ ಐತಿಹ್ಯಗಳು."[೧೦] ಎಂಬ ಎಚ್ಚೆಸ್ಕೆಯವರ ಮಾತು ಮೇಲಿನ ಮಾತಿಗೆ ಪೂರಕವಾಗಿದೆ.

ಕೆಲವು ಐತಿಹ್ಯಗಳು ಸ್ಥಳೀಯ ಪ್ರದೇಶದಲ್ಲಿ ಮಾತ್ರ ಪ್ರಚಲಿತವಾಗಿರುತ್ತವೆಯಾದ್ದರಿಂದ, ಇವುಗಳನ್ನು ಸ್ಥಳೀಯ ಐತಿಹ್ಯಗಳೆಂದು ಗುರುತಿಸಬಹುದು. ಇವುಗಳಿಗೆ ಸೀಮಿತವಾದ ವಲಯವಿರುತ್ತದೆ.ಕೆಲವು ಐತಿಹ್ಯಗಳು ಒಂದು ಪ್ರದೇಶದಿಂದ ಇತರೆ ಪ್ರದೇಶಗಳಿಗೆ ಹಬ್ಬುತ್ತಾ ಹೋಗುತ್ತದೆಯಾದ್ದರಿಂದ, ಇವುಗಳನ್ನು ಸಂಚಾರಿ ಅಥವಾ ವಲಸೆಯ ಐತಿಹ್ಯವೆಂದು ಕರೆಯಬಹುದು.[೧೧]

"ಐತಿಹ್ಯಗಳಿಂದ ಸ್ಥಳನಾಮಗಳ ಇತಿಹಾಸವನ್ನು ತಿಳಿಯಬಹುದು. ಐತಿಹ್ಯವು ಇತಿಹಾಸಕ್ಕೆ ಸಮೀಪವರ್ತಿಯಾದದ್ದು"[೧೨] ಕಲ್ಪನೆಯಿಂದ ಸೃಷ್ಟಿಯಾಗುವ ಐತಿಹ್ಯಗಳು, ಸಂಗತಿಗಳನ್ನು ಬೇಕಾದ ರೂಪಕ್ಕೆ ತಕ್ಕಂತೆ ಸೃಷ್ಟಿಯಾಗಿರುತ್ತವೆ. ಚಾರಿತ್ರಿಕ ಘಟನೆಗಳಿಗೆ ಸಂಬಂಧಪಟ್ಟ ಮೌಖಿಕ ವಿವರಗಳು, ತಲೆಮಾರುಗಳ ಮೂಲಕ ಹರಿದು ಬರುವಾಗ ಕಥೆಯಾಗಿ ರೂಪಾಂತರಗೊಂಡಲ್ಲಿ, ಅವುಗಳು ಐತಿಹ್ಯಗಳಾಗುತ್ತವೆ.

ಸ್ಥಳಪುರಾಣ ಹಾಗೂ ಸ್ಥಳೈತಿಹ್ಯದ ನಡುವೆ ಪರಸ್ಪರ ಸಂಬಂಧ ಇರುತ್ತದೆ. ದೈವಿಕವಾದ, ಅತಿಮಾನುಷ ಮತ್ತು ಪವಾಡಗಳಂತಹ ವಿವರವನ್ನು ಗುರುತಿಸಬಹುದಾದ್ದರಿಂದ, ಇವು ಪುರಾಣವನ್ನೆ ಮುಖ್ಯ ವಸ್ತುವಾಗಿಸಿಕೊಂಡಿರುತ್ತವೆ. ಎಲ್ಲಾ ಸಂದರ್ಭಗಳಲ್ಲಿಯೂ ಈ ಸಂಬಂಧವನ್ನು ಗುರುತಿಸುವುದು ಕಷ್ಟವಾಗಿರುತ್ತದೆ. "ವಾಸ್ತವಾಂಶ-ನೈಜಘಟನೆ-ಇತಿಹಾಸದ ಎಳೆ ಹೆಚ್ಚಿನ ಪ್ರಮಾಣದಲ್ಲಿ ಇರುವ ಗದ್ಯ ನಿರೂಪಣೆಯ ಪ್ರಕಾರವನ್ನು ನಾವು 'ಐತಿಹ್ಯ' ವೆಂದು ಗುರುತಿಸುತ್ತೇವೆ. ಅಲ್ಲಿ ಸಾಹಸಿ ಘಟನೆಯಿರಬಹುದು ಇಲ್ಲವೆ ಪವಾಡವಿರಬಹುದು. ಜನಪದ ಸಾಹಿತ್ಯಪ್ರಕಾರವೆಂದ ಮೇಲೆ ಅಲ್ಲಿನ ಪವಾಡಗಳನ್ನು ಯಥಪ್ರಕಾರ ಅಲ್ಲಿರಿಸಿಕೊಂಡೆ ಅಧ್ಯಯನ ಮಾಡಬೇಕಾಗುತ್ತಿದೆ."[೧೩]

ಐತಿಹ್ಯಗಳಲ್ಲಿ ಕಂಡುಬರುವ ಮತ್ತೊಂದು ಅಂಶವೆಂದರೆ ಮಾನವನ ಆಲೋಚನಾ ಶಕ್ತಿಯ ಕೊರತೆ. ಆಲ್ಲಿನ ಘಟನೆಯನ್ನು ತನ್ನ ಮನೋಭಾವಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವಿಕೆ. ವೈಚಾರಿಕತೆ, ವೈಜ್ಞಾನಿಕತೆ ಅಥವಾ ವಿಶ್ಲೇಷಣೆಗೆ ಘಟನೆಯನ್ನು ಒಳಗುಮಾಡದಿದ್ದರೆ, ತಪ್ಪಾಗಿ ಅರ್ಥೈಸಿಕೊಳ್ಳುವಿಕೆಯನ್ನು ಗುರುತಿಸಬಹುದು. ಆದುದರಿಂದ ಐತಿಹ್ಯಗಳ ಸೃಷ್ಟಿಯ ಹಿನ್ನೆಲೆಯನ್ನು ,ಇದೇ ಕಾರಣಕ್ಕೆ ಸೃಷ್ಟಿಯಾಗಿದೆ ಎಂದು ಖಚಿತವಾಗಿ ಗುರುತಿಸಲು ಸಾಧ್ಯವಿಲ್ಲ.

ಐತಿಹ್ಯಗಳು ಒಂದು ಕಾಲದ ಜನಜೀವನ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಅಂಶಗಳನ್ನು ಪ್ರತಿಬಿಂಬಿಸುತ್ತಿರುತ್ತವೆ. ಜನರ ಮನೋಭಾವವು ವ್ಯಕ್ತವಾಗುವುದರ ಜೊತೆಗೆ ಸಾರ್ವಕಾಲಿಕ ಮಹತ್ವವನ್ನು ಪಡೆದಿರುತ್ತವೆ. ಇವುಗಳ ಪ್ರಸಾರಕ್ಕೆ ಸಮಾಜದ ಏಕತೆಯು ಮುಖ್ಯ ಕಾರಣವಾಗಿರುತ್ತದೆ ಸ್ಥಳೈತಿಹ್ಯದ ಮೂಲಕ ಸಂಸ್ಕೃತಿಯನ್ನು ಗುರುತಿಸಬಹುದು. ''ಸಾಮಾನ್ಯವಾಗಿ ಇಂತಹ ಕಥೆಗಳ ಉದ್ದೇಶ, ಆಯಾ ವ್ಯಕ್ತಿತ್ವಗಳು, ಸ್ಥಳಗಳು ಅಸಾಮಾನ್ಯವಾದವು ಶ್ರೇಷ್ಠವಾದುದು, ವಿಶಿಷ್ಟವಾದುವು ಎಂಬುದನ್ನು ಜಗಜ್ಜಾಹೀರುಪಡಿಸುವುದು. ಅವುಗಳನ್ನು ಪೂರ್ಣವಾಗಿ ತಿರಸ್ಕರಿಸಲಾಗದು. ಏಕೆಂದರೆ ಅಷ್ಟಿಷ್ಟು ನಡೆದ ಘಟನೆಗಳನ್ನಾಧರಿಸಿ ಇನ್ನಷ್ಟು ಮತ್ತಷ್ಟು ವಿಚಾರಗಳನ್ನು ಸೇರಿಸಿ ಪ್ರಚಾರ ಮಾಡಿರುತ್ತಾರೆ. ಇಲಿ ಹೋದರೆ ಹುಲಿ ಹೋಯಿತು ಎಂದಿರುತ್ತಾರೆ, ಅಷ್ಟೆ. ಐತಿಹ್ಯಗಳನ್ನು ದಂತಕತೆಗಳನ್ನು ಪವಾಡಗಳನ್ನು ನಾವು ಈ ನೆಲೆಯಲ್ಲಿಯೇ, ಪರಿಮಿತಿಯಲ್ಲಿಯೇ ಗ್ರಹಿಸಬೇಕಾಗುತ್ತದೆ.''[೧೭] ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ, ಐತಿಹ್ಯವನ್ನು ಒಳಗೊಂಡಿರುವ ಸ್ಥಳನಾಮಗಳನ್ನು ಗುರುತಿಸಲಾಗಿದೆ.

## ಮಣಕನಕಲ್ ಬೆಟ್ಟ - ಕ

ಪ್ರಾಣಿಗಳನ್ನು ಕಳ್ಳತನ ಮಾಡುವ ಕಳ್ಳನೊಬ್ಬನು, ಒಮ್ಮೆ ಹೆಣ್ಣು ಮಣಕ (ಮೇಕೆ) ವೊಂದನ್ನು ಕದ್ದನು. ತಾನು ಕದ್ದ ಮೇಕೆಯನ್ನು ಇಲ್ಲಿನ ಬೆಟ್ಟದ ಗುಹೆಯೊಂದರಲ್ಲಿ ಬಿಟ್ಟು ಹೋದನು. ಸ್ವಲ್ಪ ಕಾಲದ ನಂತರ ಈ ಮೇಕೆಯ ಸಂತತಿ ಬೆಳೆದು ದೊಡ್ಡದಾಯ್ತು. ಈ ಮೇಕೆಯ ಗುಂಪನ್ನು ನೋಡಿದ ದನಗಾಯಿಯೊಬ್ಬ ಮನೆಗೆ ಹೊಡೆದುಕೊಂಡು ಹೋದನು. ಈ ಅಗಲವಾದ ಬಂಡೆಯ ಕೆಳಗಿದ್ದ ಗುಹೆಯೊಂದರಲ್ಲಿ ಮೇಕೆಗಳು ದೊರೆತಿದ್ದರಿಂದ ಈ ಬೆಟ್ಟಕ್ಕೆ 'ಮಣಕನಕಲ್ ಬೆಟ್ಟ' ಎಂಬ ಹೆಸರು ಬಂದಿದೆಯೆಂಬ ಐತಿಹ್ಯವಿದೆ. ಇದು ನಿರ್ಜನಿತ ಪ್ರದೇಶವಾಗಿದೆ.[೧೭]

## ಕೂಟಗಲ್ಲು - ರಾ

ಈ ಪ್ರದೇಶದಲ್ಲಿ ಎರಡು ಜೋಡಿಕಲ್ಲುಗಳನ್ನು ಗುರುತಿಸಬಹುದಾಗಿದ್ದು, ಇವುಗಳು ಜೊತೆಯಲ್ಲಿ ಇರುವುದರಿಂದ ಕೂಟಗಲ್ಲು (ಕೂಡುಗಲ್ಲು) ಆಗಿದೆ. ಇವುಗಳಿಗೆ ಸಂಬಂಧಿಸಿದಂತೆ ಐತಿಹ್ಯವೊಂದಿದೆ. ಈ ಜೋಡಿಕಲ್ಲುಗಳನ್ನು 'ಅಗಸ-ಅಗಸಗಿತ್ತಿ'ಗಳೆಂದೂ, ಇವರಿಬ್ಬರೂ ಪ್ರಣಯಿಗಳೆಂದೂ ಕರೆಯುತ್ತಾ, ಈ ಕಲ್ಲುಗಳನ್ನೇ ಅಗಸ-ಅಗಸಗಿತ್ತಿ ಬಂಡೆಗಳೆಂದೂ ಗುರುತಿಸುತ್ತಾರೆ. ಇವರಿಬ್ಬರೂ ಪ್ರೇಮಿಗಳಾಗಿದ್ದು ಊರಿನ ಜನರು ಇವರ ಮೇಲೆ ಆಕ್ರಮಣ ಮಾಡಲು ಪ್ರಯತ್ನಿಸಿದರು. ಆ ಸಂದರ್ಭದಲ್ಲಿ ಋಷಿಯೊಬ್ಬನು ಇವರನ್ನು ರಕ್ಷಿಸುವ ಉದ್ದೇಶದಿಂದ, ಈ ಪ್ರಣಯಿಗಳ ಜೋಡಿಯನ್ನು ಕಲ್ಲು ಮಾಡಿದ್ದರಿಂದ, ಇವು ಕೂಡಿಕೊಂಡು ಜೊತೆಯಾಗಿದ್ದು ಕೂಡು + ಕಲ್ಲು ಕೂಡುಕಲ್ಲು > ಕೂಟಗಲ್ಲು > ಆಗಿ ಸ್ಥಿತ್ಯಂತರಗೊಂಡಿದೆ

### ಮೀಕರಾಜನ ಬೆಟ್ಟ - ನೆ

ನೆಲಮಂಗಲದ ಶಿವಗಂಗೆಯ ಸಮೀಪ ಇರುವ ಈ ನಿರ್ವಸಿತ ಬೆಟ್ಟದಲ್ಲಿ ಮೀಕರಾಜನೆಂಬ ದೊರೆ ವಾಸವಾಗಿದ್ದನೆಂದೂ, ಆದುದರಿಂದಲೇ ಈ ಹೆಸರು ಬಂದಿದೆಯೆಂಬ ಐತಿಹ್ಯವಿದೆ. ಇವನ ರಾಣಿಗೆ ಐರಾಜಿ ಎನ್ನುವ ಹೆಸರಿದ್ದಿತೆಂದೂ, ಮೀಕರಾಜನ ಬೆಟ್ಟವನ್ನು ಹತ್ತಬೇಕಾದರೆ, ಐರಾಜಿ ಕಣಿವೆಯ ಮೂಲಕವೇ ಹೋಗಬೇಕಾಗುತ್ತದೆ.

### ಹೊಂಬಾಳಮ್ಮನ ಪೇಟೆ - ಮಾ

ಕೆಂಪೇಗೌಡನ ತಂಗಿಯಾದ ಹೊಂಬಾಳಮ್ಮ ಚೆಲುವರಾಯಪಟ್ಟಣದಲ್ಲಿ ವಾಸವಾಗಿದ್ದಾಗ, ಪ್ಲೇಗ್ ರೋಗ ಹರಡಿತು. ತನ್ನ ತಂಗಿಯನ್ನು ರಕ್ಷಿಸುವ ಉದ್ದೇಶದಿಂದ ಮಾಗಡಿಗೆ ಹೊಂದಿಕೊಂಡಂತೆ, ಹೊರಭಾಗದಲ್ಲಿ ಮನೆಯನ್ನು ಕಟ್ಟಿಸಿ, ತಂಗಿಯನ್ನು ತಂದಿರಿಸಿದ ನಂತರ ಊರಿನಲ್ಲಿದ್ದ ಇತರರೂ ಈ ಮನೆಯ ಸುತ್ತಲಿನ ಪರಿಸರದಲ್ಲಿ ನೆಲೆಸಿದರು. ಈ ನೆಲೆಗೆ ‘ಹೊಂಬಾಳಮ್ಮನಪೇಟೆ’ ಎಂದು ನಾಮಕರಣ ಮಾಡಿದನೆಂಬ ಐತಿಹ್ಯವಿದೆ.

### ಕೆಂಪಸಾಗರ - ಮಾ

ಕೆಂಪೇಗೌಡ ತನ್ನ ಹೆಸರಿನ ನೆನಪಿಗಾಗಿ ಊರೊಂದನ್ನು ನಿರ್ಮಿಸಿ ‘ಕೆಂಪಸಾಗರ’ ಎಂದು ನಾಮಕರಣ ಮಾಡಿದ. ಊರಿನ ಜನರ ನೀರಿನ ಬವಣೆ ತಪ್ಪಿಸುವ ಉದ್ದೇಶದಿಂದ ಕೆರೆಯನ್ನು ನಿರ್ಮಿಸಿದ . ಆ ಕೆರೆಗೆ ‘ಕೆಂಪಸಾಗರ ಕೆರೆ’ ಎಂದು ಹೆಸರಿದ್ದು ಕೆಂಪೇಗೌಡನ ಕನಸಿನಲ್ಲಿ ಸರ್ಪವೊಂದು, ‘ಕೆರೆಯನ್ನು ಕಟ್ಟಿಸು’ ಎಂದು ಹೇಳಿತೆಂದೂ, ಅದರಿಂದಲೇ ಈ ಕೆರೆಯನ್ನು ನಿರ್ಮಿಸಿದನೆಂದೂ ಐತಿಹ್ಯವಿದೆ.

### ಕೂತಗೊಂಡಳ್ಳಿ - ಕ

ಕನಕಪುರ ತಾಲ್ಲೂಕಿನಲ್ಲಿ ವಾಸಿಸುವ ಬುಡಕಟ್ಟು ಜನಾಂಗವಾದ ‘ಇರುಳಿಗರ’ (ಇಲ್ಲಿಗರು) ಅಧಿದೇವತೆ ‘ಬಾಣಂತಿ ಮಾರಮ್ಮ.’ ಹೊಲೆರಾವಣ ಎಂಬ ವ್ಯಕ್ತಿಯೊಬ್ಬ ಬಾಣಂತಿಯೊಬ್ಬಳ ಮಾನಭಂಗಕ್ಕೆ ಪ್ರಯತ್ನಿಸಿದ. ಆ ಸಮಯದಲ್ಲಿ ಮಾರಮ್ಮ ದೇವತೆಯು, ಆ ವ್ಯಕ್ತಿಯನ್ನು ಸಂಹಾರ ಮಾಡಿ ಬೆಟ್ಟದ ತಪ್ಪಲಿನಲ್ಲಿ ಕುಳಿತುಕೊಂಡಳು. ದೇವತೆಯು ಕುಳಿತ ಸ್ಥಳದ ಪಕ್ಕದ ಊರಿಗೆ ‘ಕೂತುಗೊಂಡ ಹಳ್ಳಿ’ ಎಂಬ ಹೆಸರು ಪ್ರಚಲಿತವಾಯಿತು ಎಂಬ ಐತಿಹ್ಯವಿದೆ.

### ಕುಂಭಗೂಳು - ಕ

‘ಜಕ್ಕಸಂದ್ರ’ ಊರಿನಲ್ಲಿ ಪ್ರತಿ ಮೂರು ವರ್ಷಗಳಿಗೊಂದು ಬಾರಿ ನಡೆಯುವ ಮಾರಮ್ಮನ ಜಾತ್ರೆಯಲ್ಲಿ ಪ್ರಾಣಿ ಬಲಿ ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಿ ಹರಕೆಗೆ ಬಿಟ್ಟ ಕೋಣವನ್ನು ಬಲಿ ನೀಡಲಾಗುತ್ತದೆ. ಬಲಿ ನೀಡಿದ ಕೋಣದ ರಕ್ತವನ್ನು ಕುಂಭದಲ್ಲಿ (ಮಡಕೆ) ಮಾಡಿದ ‘ಕೂಳ್’(ಅನ್ನ)ಗೆ ಮಿಶ್ರ ಮಾಡಿ ನೈವೇದ್ಯ ಅರ್ಪಿಸಲಾಗುತ್ತದೆ. ಈ ಕಾರಣದಿಂದ ಕುಂಭ + ಕೂಳ್ > ಕುಂಭಕೂಳ್ > ‘ಕುಂಭಗೊಳ್’ ಆಗಿದೆಯೆಂಬ ಐತಿಹ್ಯವಿದೆ.

**ಕಾಕಾಸುರ ಬೆಟ್ಟ - ರಾ**

ರಾಮನಗರ ತಾಲ್ಲೂಕಿನಲ್ಲಿ ಕಂಡುಬರುವ ನಿರ್ವಸಿತ ಬೆಟ್ಟ ಇದಾಗಿದ್ದು 'ಕಾಕಾಸುರ' ಎಂಬ 'ವಿಶಿಷ್ಟ ಸೇರಲು ಐತಿಹ್ಯವೊಂದಿದೆ. ಚಿತ್ರಕೂಟದಲ್ಲಿ ಶ್ರೀರಾಮನ ಸೀತೆಯ ತೊಡೆಯ ಮೇಲೆ ತಲೆಯಿಟ್ಟು ನಿದ್ರಿಸುತ್ತಿದ್ದಾಗ, ಕಾಗೆಯೊಂದು ಸೀತೆಯ ಎದೆ ಕುಕ್ಕಿ ರಕ್ತ ಬರುವಂತೆ ಮಾಡಿತು.ರಕ್ತದ ಹನಿಯು ರಾಮನ ಮುಖದ ಮೇಲೆ ಬಿದ್ದದ್ದರಿಂದ, ಎಚ್ಚರಗೊಂಡ ಶ್ರೀರಾಮನು ದರ್ಬೆಯೊಂದನ್ನು ತೆಗೆದುಕೊಂಡು ಬ್ರಹ್ಮಾಸ್ತ್ರದ ಮಂತ್ರೋಚ್ಚಾರ ಮಾಡಿ ಪ್ರಯೋಗಿಸಿದ. ಇಂದ್ರನ ಮಗನಾದ ಜಯಂತನು ಕಾಕಾಸುರನ ರೂಪದಲ್ಲಿ ಬಂದಿದ್ದನು. ಬ್ರಹ್ಮಾಸ್ತ್ರಕ್ಕೆ ಶರಣಾಗತನಾದ ಕಾಕಾಸುರ, ತನ್ನ ಬಲಗಣ್ಣನ್ನು ಬಲಿ ನೀಡಿದ್ದರಿಂದ 'ಕಾಕಾಸುರ ಬೆಟ್ಟ'ವೆಂಬ ಹೆಸರು ಈ ಪ್ರದೇಶಕ್ಕೆ ಬಂದಿದೆಯೆಂದು ಐತಿಹ್ಯವು ಹೇಳುತ್ತದೆ.

**ಹುಲಿಕುಂಟೆ - ದೊ**

ಹುಲಕುಂಟೆ ಗ್ರಾಮವು ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿದ್ದು, ಈ ಪ್ರದೇಶದಲ್ಲಿ ಕಾಡುಪ್ರಾಣಿಗಳು ವಾಸವಿದ್ದಿತೆಂದು ಹೇಳಲಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆಯೇ ಐತಿಹ್ಯವೂ ಸೃಷ್ಟಿಯಾಗಿದೆ. ಈ ಪ್ರದೇಶವು 'ನರಸಿಂಹ' ಎಂಬ ಸ್ಥಳೀಯ ನಾಯಕನ ಆಳ್ವಿಕೆಗೆ ಒಳಪಟ್ಟಿತ್ತು. ಇಲ್ಲಿನ ಜನಪ್ರಿಯ ಕ್ರೀಡೆ ಬೇಟೆಯಾಗಿತ್ತು. ಒಮ್ಮೆ ಈ ಪ್ರದೇಶದಲ್ಲಿದ್ದ ಕುಂಟೆಗೆ ಹುಲಿಗಳು ನೀರು ಕುಡಿಯಲು ಬಂದವು. ಆ ಸಂದರ್ಭದಲ್ಲಿ ಬೇಟೆಯಾಡಿ ಹುಲಿ ಕೊಂದನೆಂದೂ, ಆ ಕಾರಣದಿಂದಲೇ ಈ ಊರಿಗೆ 'ಹುಲಿಕುಂಟೆ' ಎಂಬ ಹೆಸರು ಬಂದಿಂತೆಂದೂ, ಐತಿಹ್ಯವಿದೆ. ಈಗಲೂ 'ಬೇಟೆ ರಂಗನಾಥ ಸ್ವಾಮಿ'ಯ ಹೆಸರಿನಲ್ಲಿ ಪ್ರತಿವರ್ಷ ಜಾತ್ರೆ ನೆಡೆಯುತ್ತಿದ್ದು, ಬೇಟೆಯ ಸಾಹಸ ಮಾಡುತ್ತಾರೆ. ಈ ಬೇಟೆಯ ಆಚರಣೆಯು ಒಂದು ವಾರದ ಕಾಲ ನಡೆಯುತ್ತದೆ.

**ಮೂಡಿಗಾನಹಳ್ಳಿ - ದೇ**

ನಂದಿಬೆಟ್ಟದ ಪಕ್ಕದಲ್ಲಿರುವ ದಿಬ್ಬಗಿರಿ ಬೆಟ್ಟದಲ್ಲಿ ವಾಸವಿರುವ ದೇವತೆಗಳು ಹುಣ್ಣಿಮೆಯ ದಿನದ ರಾತ್ರಿ ಗಾನ ಮಾಡಿಕೊಂಡು ಸುತ್ತ ಮುತ್ತಲಿನ ಎಲ್ಲಾ ಬೆಟ್ಟಗಳನ್ನು ಸುತ್ತುತ್ತಿದ್ದರೆಂಬ ಐತಿಹ್ಯವಿದೆ. ಈ ರೀತಿಯ ಗಾನ ರಾತ್ರಿಯಲ್ಲಿ ಎಲ್ಲರಿಗೂ ಕೇಳಿಸುತ್ತಿತ್ತು. ಗಾನವು ಮೂಡಿಬಂದದ್ದರಿಂದ ಈ ಬೆಟ್ಟದ ತಪ್ಪಲಿನ ಊರಿಗೆ 'ಮೂಡಿಗಾನಹಳ್ಳಿ' ಎಂಬ ಹೆಸರು ಬಂದಿದೆಯೆಂಬ ಐತಿಹ್ಯವಿದೆ.

**ಹೊನ್ನಾವರ - ದೊ**

ಈ ಊರಿನಲ್ಲಿ ವಾಸವಿದ್ದ ಜೋಯಿಸನೊಬ್ಬ, ಶುಭದಿನದಲ್ಲಿ ಭತ್ತವನ್ನು ಬಿತ್ತನೆ ಮಾಡಿದರೆ. 'ಹೊನ್ನು' ಬೆಳೆಯುತ್ತದೆ ಎಂದು ತನ್ನ ಪತ್ನಿಯ ಬಳಿ ಹೇಳುತ್ತಿದ್ದುದನ್ನು ಕೇಳಿಸಿಕೊಂಡ ರೈತನೊಬ್ಬ ಅದನ್ನೆ ಅನುಸರಿಸಿದ. ಇದರಿಂದ ರೈತನಿಗೆ ಹೊನ್ನಿನ ಬೆಳೆ ಬಂದಿತು. ಜೋಯಿಸರು ತಕರಾರು ತೆಗೆದು ಪಂಚಾಯತಿ ಸೇರಿಸಿದರು. ನಂತರ ಅವರ ಅಹವಾಲು ಕೇಳಿದ ಪಂಚಾಯತಿಕಾರರು ಅರ್ಧಭಾಗ ಹೊನ್ನನ್ನು ಬ್ರಾಹ್ಮಣನಿಗೆ ಕೊಡಿಸಿದ್ದರಿಂದ. ಈ ಊರಿಗೆ 'ಹೊನ್ನಾವರ' ಎಂದು ಹೆಸರು ಬಂದಿತೆಂಬ ಐತಿಹ್ಯವಿದೆ

**ಮಳೂರು - ೬೩**

ಚನ್ನಪಟ್ಟಣ ತಾಲ್ಲೂಕಿನ 'ಮಳೂರು' ಕಣ್ವ ನದಿಯ ದಂಡೆಯ ಮೇಲಿದೆ. ಈ ಪ್ರದೇಶದಲ್ಲಿ ಮರಳು ಶೇಖರಣೆಯಾಗುತ್ತಿದ್ದುದರಿಂದ 'ಮರಳೂರು' ಆಗಿರುವ ಸಾಧ್ಯತೆ ಇದೆ.

ಮರಳು+ಊರು > ಮರಳೂರು > ಮಳಲೂರು > ಮಳೂರು ಆಗಿರುವ ಸಾಧ್ಯತೆ ಇದೆ.

ಇದರ ಜೊತೆಗೆ ಐತಿಹ್ಯವೊಂದು ಸೃಷ್ಟಿಯಾಗಿದೆ ಚನ್ನಪಟ್ಟಣವನ್ನು ಆಳುತ್ತಿದ್ದ ದೊರೆಗೆ 'ಸಾರಂಗಧರ' ಎಂಬ ಮಗನಿದ್ದ ಸಕಲ ವಿದ್ಯಾ ಪಾರಂಗತನಾಗಿದ್ದ, ದೊರೆಯ ಪತ್ನಿ ನಿಧನದ ನಂತರ 'ಚಿತ್ರಾಂಗದೆ' ಎಂಬ ರಾಜಕುಮಾರಿಯನ್ನು ಮರುಮದುವೆಯಾದ. ಚಿತ್ರಾಂಗದೆಯು ಮಲಮಗನಾದ 'ಸಾರಂಗಧರ'ನ ಮೇಲೆ ವ್ಯಾಮೋಹವನ್ನು ಹೊಂದಿದ್ದಳು. ರಾಜನು ಬೇಟೆಗೆ ಹೋದ ಸಂದರ್ಭವನ್ನು ಉಪಯೋಗಿಸಿಕೊಂಡ ಚಿತ್ರಾಂಗದೆಯು ಸಾರಂಗಧರನ ಬಳಿ ಬಂದು ತನ್ನ ಬಯಕೆಯನ್ನು ಈಡೇರಿಸುವಂತೆ ಕೇಳಿಕೊಂಡಳು. ಇದಕ್ಕೆ ವಿರೋಧ ವ್ಯಕ್ತಪಡಿಸಿದ ಸಾರಂಗಧರ, ತಾಯಿಯ ಜೊತೆ ಈ ರೀತಿಯ ಸಂಬಂಧ ತಪ್ಪೆಂದು ಹೇಳಿದನು. ಇದರಿಂದ ವ್ಯಗ್ರಳಾದ ಚಿತ್ರಾಂಗದೆಯು, ದೊರೆಯು ಹಿಂತಿರುಗಿದ ನಂತರ, ತನ್ನ ಮೇಲೆ ಬಲಾತ್ಕಾರ ಮಾಡಿದನೆಂದು ಸುಳ್ಳು ಹೇಳಿದಳು. ಇದರಿಂದ ಸಾರಂಗಧರನ ಕೈಕಾಲುಗಳನ್ನು ಕತ್ತರಿಸಿ ನದಿಗೆ ಎಸೆಯುವಂತೆ ಶಿಕ್ಷೆ ನೀಡಲಾಯಿತು. ಈ ರೀತಿ ದೇಹವು ಕಣ್ವ ನದಿಯಲ್ಲಿ ತೇಲಿ ಹೋಗುತ್ತಿರುವಾಗ ಮಳೂರು ಪ್ರದೇಶದಲ್ಲಿ ಜ್ಯೋತಿಯನ್ನು ನೋಡಿ, ದೇವರನ್ನು ಪ್ರಾರ್ಥಿಸಿದನು. ಕೂಡಲೇ ಅವನು ಕಳೆದುಕೊಂಡಿದ್ದ ಕೈಕಾಲುಗಳು ಮತ್ತೆ ಮೊಳೆಯಿತು (ಚಿಗುರಿತು). ಆದ್ದರಿಂದ ಈ ಊರಿಗೆ ಮೊಳೆತ + ಊರು > ಮೊಳೆತೂರು > ಮೊಳತೂರು > ಮೊಳೂರು > ಮೊಳೂರು > ಮಳೂರು ಎಂದು ಹೆಸರು ಬಂದಿದೆಯೆಂಬ ಐತಿಹ್ಯವಿದ್ದು, ಮೇಲಿನಂತೆ ಸ್ಥಿತ್ಯಂತರಗಳನ್ನು ಹೊಂದಿರುವ ಸಾಧ್ಯತೆ ಇದೆ.

## ೮.೩ ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಸ್ಥಳನಾಮಗಳು

ಶಾಸನಗಳ ಇತಿಹಾಸವನ್ನು ಒಂದು ಕಾಲದ ಜನಜೀವನವನ್ನು, ಸಂಸ್ಕೃತಿಯನ್ನು ರಾಜರ ಆಳ್ವಿಕೆಯನ್ನು ಪ್ರತಿನಿಧಿಸುತ್ತವೆ. ಶಾಸನಗಳು ಕಲ್ಲಿನಲ್ಲಿ ಕೆತ್ತಲ್ಪಟ್ಟಿರಬಹುದು ಅಥವಾ ತಾಮ್ರಫಲಕದಲ್ಲಿ ಕೆತ್ತನೆಯಾಗಿರಬಹುದು. ಹಲವಾರು ವಿಷಯಗಳನ್ನು ಒಳಗೊಂಡಿರುವ ಶಾಸನಗಳು ಸಾಮಾನ್ಯವಾಗಿ ರಾಜವಂಶದ ಹೆಸರನ್ನು ಊರಿನ ಹೆಸರನ್ನು, ವ್ಯಕ್ತಿಯ ಹೆಸರುಗಳನ್ನು ಹಾಗೂ ಕಾಲವನ್ನು ಒಳಗೊಂಡಿರುತ್ತವೆ.

"ಶಾಸನಗಳು ಐತಿಹಾಸಿಕ ದಾಖಲೆಗಳಷ್ಟೇ ಅಲ್ಲ, ಸ್ಥಳನಾಮಕೋಶಗಳೂ ಹೌದು"[೧೮] ಅನೇಕ ರಾಜಮನೆತನಗಳ, ವ್ಯಕ್ತಿಗಳ, ವ್ಯಕ್ತಿನಾಮಗಳ, ಊರುಗಳ, ಸ್ಥಳನಾಮಗಳ, ಅನೇಕ ಘಟನೆಗಳ, ಆಜ್ಞೆಗಳ, ನಿಯಮಗಳ, ಸಾಮಾಜಿಕ ವಿವರಗಳನ್ನು ಶಾಸನಗಳು ಒಳಗೊಂಡಿರುತ್ತವೆ. ಎಲ್ಲಾ ಶಾಸನಗಳಲ್ಲಿಯೂ ಈ ರೀತಿಯ ವಿವರಗಳು ದೊರೆಯುತ್ತವೆ ಎಂದು ಹೇಳಲು ಸಾಧ್ಯವಿಲ್ಲ. ಕೆಲವು ಶಾಸನಗಳಲ್ಲಿ ರಾಜಮನೆತನ ಅಥವಾ ಸ್ಥಳನಾಮಗಳ ವಿವರ ದೊರೆಯುತ್ತವೆ. ಶಾಸನಗಳಲ್ಲಿ ಉಕ್ತವಾಗಿರುವ ಸ್ಥಳನಾಮಗಳ ರೂಪವನ್ನು ಅತ್ಯಂತ ಪುರಾತನವಾದ ಅಥವಾ ಮೂಲರೂಪವೆಂದು ಗುರುತಿಸಬಹುದು. ಶಾಸನಗಳಿಗಿಂತಲೂ ಪೂರ್ವದಲ್ಲಿಯೇ ಸ್ಥಳನಾಮಗಳು ಸೃಷ್ಟಿಯಾಗಿದ್ದು ಅಲ್ಲಿಯವರೆಗೆ ಆಗಿರುವ ಭಾಷಿಕ ಬದಲಾವಣೆಗಳು ದೊರೆಯುವುದಿಲ್ಲ. ಶಾಸನೋಕ್ತ ಕಾಲದಲ್ಲಿ ಬಳಕೆಯಲ್ಲಿರುವ ರೂಪವನ್ನೆ ನಮೂದಿಸಲಾಗಿದ್ದು ಪರ್ಯಾಯ ಹೆಸರುಗಳಿದ್ದರೆ ಅದನ್ನು ನಮೂದಿಸುವ ಸಂದರ್ಭ ಇರುತ್ತದೆ.

ಅನ್ಯಭಾಷೆಯ ಪ್ರಭಾವದಿಂದ ಸ್ಥಳನಾಮಗಳು ಬದಲಾಗಿರುವ ಸಾಧ್ಯತೆ ಇರುತ್ತದೆ. ಅಂತಹ ಸಂದರ್ಭದಲ್ಲಿ ಸ್ಥಳನಾಮ ನಿಷ್ಪನ್ನವನ್ನು ಅರಿಯುವುದು ಕಷ್ಟ. ಸ್ಥಳನಾಮದ ನಿಷ್ಪನ್ನವನ್ನು ಅರಿಯಲು ಶಾಸನೋಕ್ತ ಸ್ಥಳನಾಮಗಳು ಸಹಾಯಕವಾಗಿವೆ.

"ಸೃಷ್ಟಿಯ ಪ್ರತಿಯೊಂದು ಪದಾರ್ಥಕ್ಕೂ ಒಂದು ಹಿನ್ನೆಲೆ ಇತಿಹಾಸವಿರುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ, ಪ್ರತಿಯೊಂದು ಊರಿಗೂ ಚರಿತ್ರೆಯಿರುತ್ತದೆ. ವ್ಯಕ್ತಿಯ ಹೆಸರು, ಊರಿನ ಹೆಸರು ಬರಿಯ ಹೆಸರುಗಳಲ್ಲ. ಆ ಹೆಸರುಗಳ ಉಸಿರಲ್ಲಿ, ಬಸಿರಲ್ಲಿ ಆತ್ಮಚರಿತ್ರೆ ಇರುತ್ತದೆ"[೧೯]

ಶಾಸನಗಳು ಇತಿಹಾಸವನ್ನು ವಿವರಿಸುವ ದಾಖಲೆಯಾಗಿದ್ದು, ಎಲ್ಲಾ ಕಾಲದ ವಿವರಗಳನ್ನು ತಿಳಿಯಲು ಸಾಧ್ಯವಿಲ್ಲ. ಎಲ್ಲಾ ಘಟನೆಗಳ ವಿವರಗಳನ್ನು ದಾಖಲಿಸುವ ಪ್ರವೃತ್ತಿ ಹಿಂದೆ ಇರಲಿಲ್ಲವಾದುದರಿಂದ, ಇತಿಹಾಸವೆಲ್ಲವನ್ನು ಅರಿಯಲು ಸಾಧ್ಯವಿಲ್ಲ. ಹಾಗೆಯೇ ಊರುಗಳು ಪ್ರಾರಂಭವಾದ ವಿವರಗಳೂ ಅಲಭ್ಯ. ಊರುಗಳು ನೆಲೆಗೊಂಡ ಮೇಲೆ ಅವುಗಳಿಗೆ ಹೆಸರುಗಳನ್ನು ಬಳಕೆಗೆ ಕಂಡುಕೊಂಡಿದ್ದು, ಅವುಗಳ ವಿವರಗಳು ದೊರೆಯುವುದಿಲ್ಲ. ಹೊಸ ಊರುಗಳನ್ನು ನಿರ್ಮಿಸಿದಾಗ ಕೆಲವು ರಾಜರ ಅಥವಾ ಗಣ್ಯ ವ್ಯಕ್ತಿಯ ಹೆಸರನ್ನು ನೀಡಿರುವಿಕೆಯನ್ನು ಇತಿಹಾಸದಲ್ಲಿ ಗುರುತಿಸಬಹುದಾಗಿದ್ದು, ಎಲ್ಲಾ ಸಂದರ್ಭದಲ್ಲಿಯೂ ಸಾಧ್ಯವಿರುವುದಿಲ್ಲ.

ಸ್ಥಳನಾಮಗಳ ಉಲ್ಲೇಖ ಅಧಿಕೃತವಾಗಿ ದಾಖಲಾಗುವಿಕೆ ಶಾಸನಗಳ ಮೂಲಕವಾಗಿಯೇ ಪ್ರಾರಂಭವಾಯಿತು. ಶಾಸನಗಳೆಲ್ಲವೂ ಉಳಿದಿವೆ ಎಂದು ಹೇಳಲು ಸಾಧ್ಯವಿಲ್ಲ. ಅನೇಕ ಆಕ್ರಮಣಗಳಲ್ಲಿ ಹಾಗೂ ಪ್ರಕೃತಿ ವಿಕೋಪಗಳಲ್ಲಿ ಶಾಸನಗಳು ನಾಶವಾಗಿವೆ. ಲಭ್ಯಶಾಸನಗಳೆಲ್ಲವೂ ಸ್ಥಳನಾಮ ಅಥವಾ ವ್ಯಕ್ತಿನಾಮಗಳ ವಿವರವನ್ನು ಹೊಂದಿರುವುದಿಲ್ಲ. ಕೆಲವು ಇಶಾಸನಗಳು ಅಪೂರ್ಣ ಬರಹಗಳನ್ನು ಒಳಗೊಂಡಿರುತ್ತವೆ.

"ಶಾಸನಗಳಿಲ್ಲದ ಊರುಗಳು ಅಪರೂಪವಾಗಿ ಸಿಗಬಹುದಾದರೂ, ಊರುಗಳ ಉಲ್ಲೇಖಗಳಿಲ್ಲದ ಶಾಸನಗಳು ಇಲ್ಲವೆಂದೆ ಹೇಳಬೇಕು. ರಾಜ್ಯಾಡಳಿತ, ಯುದ್ಧ ದೇವಾಲಯ ನಿರ್ಮಾಣ, ಧಾನಧರ್ಮ ಇವೇ ಮೊದಲಾದ ಹಲವಾರು ವಿಷಯಗಳ ಚಲಾವಣೆ ಸಾಧ್ಯವಿಲ್ಲದ್ದರಿಂದ ಅನೇಕ ಭೌಗೋಳಿಕ ಹಾಗೂ ಚಾರಿತ್ರಿಕಾಂಶಗಳು ಶಾಸನಗಳಲ್ಲಿ ದೊರೆಯುವುದರಿಂದ ಸ್ಥಳನಾಮ ಅಧ್ಯಯನಕ್ಕೆ ತುಂಬಾ ನೆರವಾಗುತ್ತವೆ.

ಅವುಗಳ ಸಹಾಯದಿಂದ ಊರುಗಳ ಗಡಿಗಳನ್ನು ಸಂದೇಹಕ್ಕೆಡೆಯಿರದಂತೆ ನಿರ್ಣಯಿಸಬಹುದು. ರಾಜರ ಇತಿಹಾಸದ ಜೊತೆಗೆ ಊರುಗಳ ಇತಿಹಾಸಕ್ಕೂ ಅವೇ ಆಕರವೆನ್ನ ಬಹುದು. ಅವುಗಳ ಸ್ಥಾನಮಾನ, ಏರಿಳಿತಗಳೂ ಕಾಲಕಾಲಕ್ಕೆ ಅವು ಪಡೆದ ಪ್ರತಿನಾಮಗಳ ವಿವರಗಳೂ ಆಗ್ಗಾಗ್ಗೆ ಪ್ರಾಪ್ತವಾದ ಉಚ್ಚರಣಾ ವ್ಯತ್ಯಾಸಗಳು ಶಾಸನಗಳಿಂದ ತಿಳಿಯುತ್ತವೆ"[೨೦]

ಸ್ಥಳನಾಮಗಳ ಮೂಲವನ್ನು ಅರಿಯಲು, ಒಂದು ಊರಿನ ಹಿನ್ನೆಲೆಯನ್ನು ಸಾಮಾಜಿಕ, ರಾಜಕೀಯ, ಆರ್ಥಿಕ ಸ್ಥಿತಿಯನ್ನು ಅರಿಯಲು ಶಾಸನಗಳು ಅತ್ಯಂತ ಸಹಕಾರಿಯಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸ್ಥಳನಾಮ ಉಲ್ಲೇಖವಾಗಿರುವ ಅನೇಕ ಶಾಸನಗಳನ್ನು ಗುರುತಿಸಬಹುದು.

### ೮.೩.೧ ಕನಕಪುರ ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು

| ಶಾಸನ ಸಂಖ್ಯೆ | ಉಲ್ಲೇಖಿತ ಸ್ಥಳನಾಮ | ಶಾಸನ ದೊರೆತ ಸ್ಥಳ | ಇಸವಿ |
|---|---|---|---|
| ೩. | ಹಾರುವಹಳ್ಳಿ | ವೆಂಗಳಯ್ಯನಕೆರೆ ಪಶ್ಚಿಮಕೋಡಿಯ ತೂಬಿನಬಳಿ, ಹಾರೋಹಳ್ಳಿ | |
| ೮. | ಚಿಕ್ಕಮಣಲವಾಡಿ | | |
| | ಅಬ್ಬುಹಳ್ಳಿ | ನೈಋತ್ಯ ದಿಕ್ಕಿನ ಓಣಿ, ಚಿಕ್ಕಮರಳವಾಡಿ | |
| ೧೦. | ಚಂನಪಟಣ | | |
| | ಬ್ರಹ್ಮಸಮುದ್ರ | ಅಗ್ರಹಾರ ಕೆರೆಯ ದಕ್ಷಿಣಭಾಗದ ಹೊಲ | |
| ೧೯. | ಬಸಹಳ್ಳಿ | ದೊಡ್ಡಹುಣಸೇಮರದ ದಕ್ಷಿಣದಲ್ಲಿ, ಕಬ್ಬಹಳ್ಳಿ | |
| ೩೧. | ಅಂಣಿಗಹಳ್ಳಿ | | |
| | ನಲ್ಲಹಳ್ಳಿ | ಶ್ರೀಕಂಠಯ್ಯನ ಹೊಲ ನಲ್ಲಹಳ್ಳಿ | ೧೪೨೩ |
| ೩೨. | ಕನಪುರ | | |
| | ಚಂಣ್ಣಸಮುದ್ರ | ರಾಚಪ್ಪನ ಹೊಲದಲ್ಲಿ, ನಾರಗೊಂಡ ಹಳ್ಳಿ | |
| ೩೬. | ಕಲ್ಲಾಪುರ | ಕೆಂಪೀರೆಗೌಡನಹೊಲ ಕೃಷ್ಣಯ್ಯನ ದೊಡ್ಡಿ | ೧೩೮೭ |
| ೩೭. | ಅರುಳಹಳಿ | ಮಾದೇಗೌಡನ ಹೊಲ ಸಾವನಕಟ್ಟೆ | |
| ೩೯. | ಮಾರೇಹಳ್ಳಿ | | |
| | ಮಾನ್ಯಪುರ | ಬಸವನ ಗುಡಿಯ ಬಳಿ, ಎಡಮಾರನಹಳ್ಳಿ | |
| ೪೧. | ಬಸಹಳ್ಳಿ | ಬಸವನಗುಡಿ ಬಳಿ, ಮುಳ್ಳಹಳ್ಳಿ | ೧೨೪೬ |
| ೪೬. | ಪುರುಸಗೊಂಡನಹಳ್ಳಿ | ಬಾನಾದೇವಿ ಗುಡಿಯ ದಕ್ಷಿಣದ ವೀರ ಗುಡಿಯಲ್ಲಿರುವ ಕಲ್ಲಿನಲ್ಲಿ, ಪುರುಸ ಗೊಂಡನಹಳ್ಳಿ | |
| ೪೭. | ಅರುಳೆ ಹೆಳ್ಳಿ | ಜವರನ ಮನೆಯ ಹಿತ್ತಲು, ನಾಯಕನಹಳ್ಳಿ | |
| ೬೪. | ಕಬ್ಬಹಾಳು | | |
| | ಹನಿಯೂರು | ಕಬ್ಬಾಳಮ್ಮನ ದೇವಾಲಯದ ವೀರಗುಡಿಯಲ್ಲಿ, ಕಬ್ಬಾಳು | |
| ೬೭. | ಬಂಡಹಳ್ಳಿ | ಬಾಬೂಸಾಬರ ಹೊಲದ ಬಳಿ, ಹಚ್ಚಲು | |
| ೬೮. | ಕಾಣಿಕಾಟಿಹಳ್ಳಿ (ಕನಕಪುರ) | ಮೊಹದೀನ್ ಸಾಬೀ ಹೊಲದಲ್ಲಿ, ಹಚ್ಚಲು | |
| | ಅಚಲು | | |

| | | | |
|---|---|---|---|
| ೭೦. | ಶಿವಪುರ | ಪೂಜಾರಿಬಸವಯ್ಯನ ಹೊಲ, ಚಿಕ್ಕಾಲಹಳ್ಳಿ | |
| | ಜೀಯನಾಥನಹಳ್ಳಿ | | |
| ೭೩. | ಹರಿಹರ | ಬಸವನಗುಡಿಗೆ ಉತ್ತರಭಾಗ, ಹರಿಹರ ಗ್ರಾಮ | |
| | ಚಂಬಾಪುರ | | |
| | ಸೂಲಿಗಿರಿ | | |
| ೭೬. | ಚಿಕ್ಕಗಂಗವಾಡಿ | ಅಂಕನಾಥದೇವಾಲಯದ | |
| | ನಿಟ್ಟೂರಹಳ್ಳಿ | ದಿಂಡುಕಲ್ಲಿನ ಮೇಲೆ ನಿಟ್ಟೂರು | ೧೨೨೫ |
| | ಗವುಡನಹಳ್ಳಿ | | |
| ೯೧. | ವಿರುಪಸಮುದ್ರ | ದೇಗುಲಮಠದ ಕಲ್ಲಿನಲ್ಲಿ ಕನಕಪುರ | ೧೬೦೮ |
| ೯೬. | ಬೂದಿಕುಪ್ಪೆ | ಶಂಕರಗೌಡನ ಹೊಲದಲ್ಲಿನ ವೀರಗಲ್ಲು, | |
| | | ಬೂದಿಕುಪ್ಪೆ ಗ್ರಾಮ | |
| ೧೦೨. | ಅಚಲು ಬೈಕುಪ್ಪೆ | ದೊಡ್ಡಕೆರೆಯ ಕೆಳಗಿನ ಗುಂಡಿನ ಮೇಲೆ | |
| | | ಶ್ರೀನಿವಾಸನಹಳ್ಳಿ | |
| ೧೦೬. | ರಾಮಪುರ | ಪಶ್ಚಿಮದ ಊರ ಬಾಗಿಲು ಬಳಿ ರಾಮಪುರ | |
| ೧೦೭. | ಕಳ್ಳೇನಹಳ್ಳಿ | ಸುಬ್ಬಯ್ಯನ ಚಿಕ್ಕ ತೋಟದಲ್ಲಿ, | |
| | | ಕಲ್ಲಹಳ್ಳಿ ಗ್ರಾಮ | ೧೨೧೬ |
| ೧೦೮. | ಅಲಾಳಸಮುದ್ರ | ಊರಬಾಗಿಲ ಬಳಿಯಲ್ಲಿ, ಅಲ್ಲಾಳು ಸಂದ್ರ | |
| ೧೧೮. | ಬಂಡಿಗಾನಹಳ್ಳಿ | ಆಂಜನೇಯ ದೇವಸ್ಥಾನದ ಬಂಡೆ ಮೇಲೆ, | |
| | | ಬಂಡಿಗನಹಳ್ಳಿ | |

**೮.೩.೨ ಚನ್ನಪಟ್ಟಣ ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು**

| ಶಾಸನ ಸಂಖ್ಯೆ | ಉಲ್ಲೇಖಿತ ಸ್ಥಳನಾಮ | ಶಾಸನ ದೊರೆತ ಸ್ಥಳ | ಇಸವಿ |
|---|---|---|---|
| ೧. | ಮಾಗಡಿ | ಬಸವನಗುಡಿಗೆ ಉತ್ತರದ ಭಾಗ, | |
| | | ಗೊಲ್ಲಹಳ್ಳಿ ಗ್ರಾಮ | |
| ೨. | ಸೊಂಡೆಯಕೊಪ್ಪ | ಲಕ್ಷ್ಮಿ ನಾರಾಣಪ್ಪನ ಹೊಲದಲ್ಲಿ | |
| | (ಸೊಂಡೆಕೊಪ್ಪ) | ಬನ್ನಿಕುಪ್ಪೆ ಗ್ರಾಮ | |
| | ಕಾಲವಳ್ಳಿ (ಬನ್ನಿ ಕುಪ್ಪೆ) | | |
| | ಬನ್ನಿಕುಪ್ಪೆ | | |

| | | | |
|---|---|---|---|
| ೨. | ಪರಾದಹಳ್ಳಿ (ಪುರದಹಳ್ಳಿ) | ಆಟ್ಟಬಸವನಗುಡಿ ಮುಂಭಾಗ ಕೆಂಪದ್ಯಾವನ ಹಳ್ಳಿ | |
| ೫. | ಕುಲೂಸ ಪೇಟೆ<br>(ಕ್ಲೋಸ್‌ಪೇಟೆ - ರಾಮನಗರ) | ಚಿಕ್ಕೇಗೌಡನದೊಡ್ಡಿಗೆ ಪೂರ್ವದ ನದಿ ಪಕ್ಕದಲ್ಲಿ,<br>ಹರಿಸಂದ್ರ | |
| ೮. | ಹಾಗಲಹಳ್ಳಿ | ವೀರಕಲ್ಲುಗುಡಿಯ ಕಲ್ಲಿನಲ್ಲಿ ಹಾಗಲಹಳ್ಳಿ | |
| ೯. | ಸುಗನಹಳ್ಳಿ<br>ಹರದೇವನಹಳ್ಳಿ (ಹರದೇನಹಳ್ಳಿ)<br>ಹಾಗಲಹಳ್ಳಿ | ಚಿಕ್ಕೇಗೌಡನ ಚನ್ನಮಾರನ ಜಮೀನು<br>ಚನ್ನಮಾರೇಗೌಡನ ದೊಡ್ಡಿ | ೧೩೩೫ |
| ೧೨. | ಚಂದಿಮಾದಿಯಹಳ್ಳಿ<br>(ಚನ್ನಮಾನಹಳ್ಳಿ)<br>ವೀರಂಣಗರಳ್ಳಿ | ಹನುಮಂತನ ರಾಯನ ದೇವಾಲಯದ<br>ಮುಂದೆ, ಚನ್ನ ಮಾನಹಳ್ಳಿ | ೧೨೪೧ |
| ೧೬. | ತಾಳವಾಡಿ<br>ಗಂಗವಾಡಿ<br>ಮಿಳೆಹಳ್ಳಿ<br>ಜೀಯುಗವುಂಡನಹಳ್ಳಿ | ಮಾರಮ್ಮ ದೇವಾಲಯದ ಬಳಿ, ಐಜೂರು | |
| ೧೮. | ಚಂನಪಟ್ಟಣ (ಚನ್ನಪಟ್ಟಣ)<br>ಬನ್ನಿ ಕುಪ್ಪೆ | ಆಗಸರ ಮನೆಮುಂದೆ<br>ಆಶ್ವತ್ಥ ಕಟ್ಟೆ ಬಳಿ ಬನ್ನಿಕುಪ್ಪೆ | ೧೬೮೯ |
| ೨೩. | ಮಳಊರು (ಮಳೂರು)<br>ಚಂನಪಟ್ಟಣ (ಚನ್ನಪಟ್ಟಣ)<br>ಬಲಕುಳಿ (ಬ್ಯಾಲಕುಳಿ) | ಬಸವನಗುಡಿ ಬಳಿ<br>ಬ್ಯಾಲಕುಳಿ ಗ್ರಾಮ | |
| ೨೬. | ನಾಗುವಳ್ಳಿ | ಊರಬಾಗಿಲಿನ ಉತ್ತರದಲ್ಲಿ,<br>ನಾಗೋಹಳ್ಳಿ | ೧೫೭೩ |
| ೨೮. | ಸುದಮಲು | ವೆಂಕಟನ ಮನೆಯ ಹಿತ್ತಿಲು ಬೆಣೆಹಳ್ಳಿ | |
| ೩೧. | ನಂಜಂನಹಳ್ಳಿ | ಚೂಡೇಗೌಡನಹೊಲದಲ್ಲಿ ಬನ್ನಿಕುಪ್ಪೆ | ೧೪೨೬ |
| ೩೨. | ಮೊಗೆಹಳಿ (ಮೊಗೇನಹಳ್ಳಿ)<br>ಚಂನಪಟ್ಟಣ (ಚನ್ನಪಟ್ಟಣ) | ಆಶಿಲಿಪಾ ಖಾದ್ರಿ ದರಗದಾರನ<br>ವಶದಲ್ಲಿದ್ದ ತಾಮ್ರಶಾಸನ, ಚನ್ನಪಟ್ಟಣ | ೧೬೮೨ |
| ೩೬. | ಹರಊರು (ಹರೂರು) | ವಾಜರ ನರಸಿಂಹನ ಮನೆಯ ಬಳಿ<br>ಹರೂರು ಗ್ರಾಮ | ೧೨೨೯ |
| ೫೧. | ಮಾಳಿಗೆಹಳ್ಳಿ | ಊರಬಾಗಿಲಿನ ದಕ್ಷಿಣಭಾಗ<br>ಮಾಳಿಗಾಳು ಗ್ರಾಮ | |

| | | | |
|---|---|---|---|
| ೫೨. | ಕೋಡಂಬಳ್ಳಿ | ಮಹಲೇಶ್ವರ ದೇವಾಲಯಕ್ಕೆ ದಕ್ಷಿಣರಾಜಬೀದಿ, ಕೋಡಂಬಳ್ಳಿ ಗ್ರಾಮ | |
| ೫೩. | ಪರಗೂರು ಕೋಡಂಬಳ್ಳಿ ನಿಟ್ಟೂರು ಹಲಸಹಳ್ಳಿ ಅಂಕನಹಳ್ಳಿ ತಾರಾಂಕನಹಳ್ಳಿ ಕೊಚಗೇರ್ ಬೀರನಕಟ್ಟೆ ಸಿಧಾಪುರ | ಮಹಲೇಶ್ವರ ದೇವಾಲಯದ ದಕ್ಷಿಣಭಾಗ ಕೋಡಂಬಳ್ಳಿ | ೧೪೫೭ |
| ೫೬. | ಗರಿಖಹಳ್ಳಿ | ಊರಬಾಗಿಲಿನ ಉತ್ತರದಲ್ಲಿ, ಗರಕಹಳ್ಳಿ | |
| ೭೪. | ಮುಗುಳನ ಹಳ್ಳಿ ಗೌಡಿಗೆರೆ ಹೊಸಹಳ್ಳಿ | ಊರಬಾಗಿಲಿನ ಉತ್ತರದಲ್ಲಿ ಮಾಗೇನ ಹಳ್ಳಿ | |
| ೧೧೪. | ಕೂಡ್ಲೂರು | ದೊಡ್ಡ ಎಲ್ಲೇಗೌಡನ ಮನೆಯ ಮುಂದೆ, ಕೂಡ್ಲೂರು ಗ್ರಾಮ | ೧೬೮೯ |
| ೧೪೭. | ಮಳಲೂರು ಕಳಲೆ | ಚೌಡೇಶ್ವರಿ ದೇವಸ್ಥಾನದ ದಕ್ಷಿಣದಲ್ಲಿದ್ದ ವೀರಗಲ್ಲು, ಮಳೂರು ಪಟ್ಟಣ | ೧೩೫೩ |

## ೮.೩.೩ ದೇವನಹಳ್ಳಿ ತಾಲ್ಲೂಕಿನ - ಶಾಸನೋಕ್ತ ಸ್ಥಳನಾಮಗಳು

| | | | |
|---|---|---|---|
| ೧. | ನಾಗವಾರ ಯಲಹಕ್ಕ ತಿಂಣಲು | ಹನುಮಂತನ ಗುಡಿಯ ಉತ್ತರದಲ್ಲಿ, ತಿಂಡಲು ಗ್ರಾಮ | |
| ೨. | ತಿಂಣಲು | ಹನುಮಂತನ ಹೊಲ ತಿಂಡಲು ಗ್ರಾಮ | |
| ೩. | ಎಲಹಕ್ಕ ಜಾಲಿಗೆ | ಕದಿರಿಗನ ಹೊಲ, ಜಾಲಿಗೆ ಗ್ರಾಮ | ೧೨೬೭ |
| ೬. | ಸಿಂಗಿರಿಹಳ್ಳಿ | ಪೂರ್ವಭಾಗದ ಬಂಡೆಯಲ್ಲಿ, ಸಿಂಗರಹಳ್ಳಿ | |
| ೮. | ಕೊಂಬಿರ ಬೊಮ್ಮವಾರ | ಆಂಜನೇಯನ ಗುಡಿ ದಕ್ಷಿಣ ಭಾಗ, ಚಿಕ್ಕಪೋಂಬನಹಳ್ಳಿ ಗ್ರಾಮ | |

| | | | |
|---|---|---|---|
| ೧೫. | ದೇವನಪುರ (ದೇವನಹಳ್ಳಿ) | ವೇಣುಗೋಪಾಲಸ್ವಾಮಿ ದೇವಾಲಯದ | |
| | ಆವತಿ | ನರಸಿಂಹಾಚಾರ್ಯರ ಬಳಿ ಇದ್ದ | |
| | ವಡಿಗೇಹಳ್ಳಿ (ವಿಜಯಪುರ) | ತಾಮ್ರಶಾಸನ ದೇವನಹಳ್ಳಿ | |
| | ಸೋಮೇತಿಹಳ್ಳಿ | | |
| | ಮೇಲೂರು | | |
| | ಮಡ್ಲೂರು | | ೧೬೧೯ |
| | ಸಾವಕನಹಳ್ಳಿ | | |
| | ಹೊಸಕರೆ | | |
| | ಬಯಿಚಾಪುರ | | |
| | ಬಯಿರಾಪುರ | | |
| ೧೬. | ಸೋಮತ್ತಹಳ್ಳಿ | ವೇಣುಗೋಪಾಲಸ್ವಾಮಿ ದೇವಾಲಯದಲ್ಲಿ | |
| | ಆವರಹಳ್ಳಿ | ದೇವನಹಳ್ಳಿ | ೧೬೦೯ |
| ೨೦. | ಆವತಿ | ಚನ್ನಕೇಶವ ದೇವಾಲಾಯ | |
| | ಸೆಟ್ಟಿಹಳ್ಳಿ | ಪೂರ್ವದ ಮಹಾದ್ವಾರ | |
| | ಅಂಗಟ್ಟಗ್ರಾಮ | ವಡಿಗೇನಹಳ್ಳಿ (ವಿಜಯಪುರ) | ೧೬೫೦ |
| ೨೩. | ಮಂಗಸಮುದ್ರ | ಸೂರ್ಯನಾರಾಯಣಪ್ಪನ ಹೊಲ | |
| | (ಮಂಗಸಂದ್ರ) | ಮಂಕಸಂದ್ರ | |
| ೨೪. | ದಂಡಿಗನ ಹಳ್ಳಿ | ಮಾರೀಗುಡಿ ಬಳಿ, | |
| | ಕೊಂಡನಹಳ್ಳಿ | ದಂಡಿಗಾನ ಹಳ್ಳಿ | |
| ೨೮. | ನಲ್ಲೂರು | ಊರಬಾಗಿಲ ಬಳಿ | |
| | ಬಿಳಿಯಣಾವನ ತೋಟ | ಸೋಮನಹಳ್ಳಿ ಗ್ರಾಮ | ೧೬೧೯ |
| | ಚನ್ನವೀರಂಮನ ತೋಟ | | |
| | ಅಪರಹಳ್ಳಿ | | |
| ೫೦. | ಕೊಡಿಗೆಹಳ್ಳಿ | ತೈಲಗೆರೆ ಕೆಂಪಣಹೊಲ ಕಟ್ಟಿಗೇನಹಳ್ಳಿ | ೧೩೮೧ |
| ೫೧. | ದೇವಣಪುರ | ಬೇಗೂರು ಊರಬಾಗಿಲ ಪೂರ್ವದಲ್ಲಿ | |
| | ಅಗ್ರಹಾರ | ಪೂರ್ವದಲ್ಲಿ | ೧೬೧೯ |
| | ನಲ್ಲೂರು | | |
| | ಬೇಗೂರು | | |
| | ಗೋಪಾಲಸಾಗರ | | |

| | | | |
|---|---|---|---|
| ೮೧. | ಮಾದಿಗೊಂಡನ ಹಳ್ಳಿ | ಅಪ್ಪಾಜಿ ಪಂಡಿತರ ಬಳಿ ಇದ್ದ | |
| | ಸಾದುಹಳ್ಳಿ | ತಾಮ್ರ ಶಾಸನ, ಸಾದಹಳ್ಳಿ | |
| | ನಾಗಮಂಗಲ | | |
| | ಉಗುನವಾಡಿ | | |
| | ಕಂದಮಂಗಲ | | |

## ೮.೩೪ ದೊಡ್ಡಬಳ್ಳಾಪುರ ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು

| ಶಾಸನ ಸಂಖ್ಯೆ | ಉಲ್ಲೇಖಿತ ಸ್ಥಳನಾಮ | ದೊರೆತ ಸ್ಥಳ | ಇಸವಿ |
|---|---|---|---|
| ೦೨. | ಆಗ್ರಹಾರ | ರಾಮಪುರದ ಉತ್ತರದಲ್ಲಿ ದೊರೆತ ತುಂಡುಕಲ್ಲು | |
| ೦೫. | ಆವತಿ | ಕೋಟೆರಾಮಣ್ಣನ ಮನೆಯ ಬಳಿ | |
| | ತಿಪ್ಪೂರು | ತಿಪ್ಪೂರು ಗ್ರಾಮ | |
| | ಹಣಬೆ | | ೧೫೦೮ |
| ೦೭. | ಅಂತರವಳಿ | ವೀರಣ್ಣನ ಮನೆಯ ಪೂರ್ವದಲ್ಲಿ, ಅಂತ್ರಹಳ್ಳಿ ಗ್ರಾಮ | |
| ೧೨. | ತೂಬಿಗೆರೆ | ವೆಂಕಟರಮದೇವಾಲಯದ ಈಶಾನ್ಯ ಭಾಗ, ತೂಬುಗೆರೆ ಗ್ರಾಮ | |
| ೧೪. | ಮಲದಿಪನಪುರ | ಮಲ್ಲಮ್ಮನ ಹೊಲ | |
| | ಗಹುಡನಹಳ್ಳಿ | ಹಾಡೋನಹಳ್ಳಿ | ೧೨೫೧ |
| ೧೮. | ಕುರುವಗೇಱ | ಪಿಲ್ಲೇಗೌಡನ ಹೊಲ, ಕುರುವಗೆರೆ ಗ್ರಾಮದ ಪೂರ್ವಭಾಗ | ೧೨೫೦ |
| ೧೯. | ಕಂಚಿಗಣಹಾಲು | ಶಿವಾಚಾರರುದ್ರನ ತೋಟ ಕಂಚಿಗನಾಳು ಗ್ರಾಮ | |
| ೨೫. | ರಾಜಗಟ | ಊರು ಬಾಗಿಲ ಬಲಗಡೆ ಕಂಭ, ರಾಜಘಟ್ಟ ಗ್ರಾಮ | |
| ೨೯. | ನಂದಿಗುಂದ | ತಮ್ಮಣ್ಣನ ಹೊಲ, ನಂದಿಗುಂದ | |
| ೩೩. | ಶಿವಪುರ | ಲಕ್ಷ್ಮೀರಮಣಸ್ವಾಮಿ ದೇವಸ್ಥಾನ, ಶಿವಪುರ | |
| ೪೧. | ಗಂತ್ರಗೂಲಿಪ್ರುರ | ಬಸವನಗುಡಿ ದಕ್ಷಿಣ, ಹೊನ್ನಾವಾರದ ಗ್ರಾಮ | ೧೪೮೪ |

| | | | |
|---|---|---|---|
| ೪೨. | ತಿಪ್ಪೂರು | ಊರ ಬಾಗಿಲಿನ ದಕ್ಷಿಣಭಾಗ | |
| | ಹೆಜಾಜಿ | ಪುಟ್ಟಯ್ಯನ ಅಗ್ರಹಾರ | ೧೪೧೫ |
| | ವರದೊಹಳ್ಳಿ | | |
| | ಬಯಿರಾಪುರ | | |
| | ಅಗ್ರಹಾರ | | |
| ೫೦. | ಹಣಬೆ | ಕಾಡನೂರು ಕೋಡಿಹಳ್ಳಿ ಹೋಬಳಿ | ೧೪೫೩ |
| ೫೧. | ನೆಲವಂಗಲ | | |
| | ಕನಸವಾಡಿ | ಕನಸವಾಡಿ, ಕೋಡಿಹಳ್ಳಿ ಹೋಬಳಿ | |
| ೫೫. | ತಿರುಮಲೆ | ಹಲಸೂರು ಹನುಮಂತಯ್ಯನ ಹೊಲದ | |
| | | ವೀರಗಲ್ಲು, ಮಧುರೆ | ೧೩೪೧ |
| ೫೮. | ಕಾಮಾಕ್ಷಿಪುರ | ಪಶ್ಚಿಮ ದಿನ್ನೆಯ ಕರಿಕಲ್ಲು, ಕಾಮಾಕ್ಷಿಪುರ | |
| | ವಿಶ್ವನಾಥಮಾಲಿಪುರ | | |
| ೬೩. | ಆವತಿ | ಊರುಬಾಗಿಲ ಸಮೀಪದ | |
| | ದೇವಣಾಪುರ | ಹನುಮಂತರಾಯ ದೇವಾಲಯದ ಬಳಿ, | |
| | ಸೀಗೇಕೋಟೆ | ಮಾವಳೀಪುರ | ೧೬೩೭ |
| | ಕುರುಬರಹಳ್ಳಿ | | |
| | ಮಾವಳಿಪುರ | | |
| | ಅಗ್ರಹಾರ | | |

### ೮.೩.೫ ನೆಲಮಂಗಲ ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು

| ಶಾಸನ ಸಂಖ್ಯೆ | ಶಾಸನೋಕ್ತ ಸ್ಥಳನಾಮ | ದೊರೆತ ಸ್ಥಳ | ಇಸವಿ |
|---|---|---|---|
| ೧. | ಆಲೂರು | ಉತ್ತರಕಾಶಿ ನಂಜುಂಡಯ್ಯನ ಶಾಸನ | |
| | ಸಣ್ಣನಾಡು | ಸೋಲದೇವನಹಳ್ಳಿ | |
| ೨. | ಭಿನ್ನಮಂಗಲ | ಮಾರನ ಹೊಲದಲ್ಲಿ ನೆಟ್ಟಿರುವಕಲ್ಲು, | |
| | | ಭಿನ್ನಮಂಗಲ | ೧೪೫೭ |
| ೮. | ನೆಲಮಂಗಲ | ಮಸೀದಿಗೆ ಸೇರಿದ ತಾಮ್ರಶಾಸನ | |
| | ಸೊಂಟಕೊಪ್ಪ | ಸೊಂಡೇಕೊಪ್ಪ | ೧೬೮೩ |
| ೧೦. | ಸೊಂಟೇಕೊಪ್ಪ | ತಿರುಮಲ ದೇವರ ಗುಡಿ | |
| | ಹಾರೊಕೇತನಹಳ್ಳಿ | ಹಾರೋಕ್ಯಾತಹಳ್ಳಿ | ೧೪೫೫ |
| ೧೫. | ಗೆಜಗಾಜಿಗುಪ್ಪೆ | ಊರು ಮುಂದೆ ನೆಟ್ಟಿರುವ ಕಲ್ಲು | |

| | | | |
|---|---|---|---|
| | ಬಟ್ರಗ್ರಹಾರ | ಬಟ್ರಹಳ್ಳಿ | |
| ೧೬. | ಅನಂತಪುರ | ಮಾಗಡಿ ರಸ್ತೆಯ ಬಂಡೆಯ ಮೇಲೆ | |
| | ಅಗ್ರಾರ | ಕಡಬಗೆರೆ | |
| ೨೨. | ತಿರುಮಲಾಪುರ | ಲಕ್ಕನ ಮನೆ ಮುಂದೆ ನೆಟ್ಟಿರುವಕಲ್ಲು | ೧೧೬೦ |
| | | ಕೊಡಗಿ ತಿರುಮಲಾಪುರ | |
| ೩೧. | ಹೆಸರುಘಟ್ಟ | ಚಂದ್ರಮೌಳೇಶ್ವರ ದೇವಾಲಯದಲ್ಲಿ | ೧೪೫೪ |
| | ಚೇಲೂರು | ಹೆಸರುಘಟ್ಟ | |
| | ಸೋಲದೇವನಹಳ್ಳಿ | | |
| | ಹುರುಳಿ ಚಿಕ್ಕನಹಳ್ಳಿ | | |
| | ದೊಡ್ಡಹಳ್ಳಿ, | | |
| | ಅಗ್ರಹಾರ | | |
| | ಎಲಹಂಕ | | |
| ೩೫. | ಬೆತ್ತಿಯಗೆರೆ | ಬಸವಣ್ಣನ ಗುಡಿಯ ಬಳಿ ನೆಟ್ಟಿರುವಕಲ್ಲು | |
| | | ಬೆತ್ನಿಗೆರೆ | ೧೩೮೧ |
| ೪೧. | ನಿಜಗಲ್ಲು ದುರ್ಗ | ಪ್ರಸನ್ನಗಂಗಾಧರೇಶ್ವರ ದೇವಾಲಯದ ಬಳಿ | |
| | (ಶೂರಗಿರಿ ದುರ್ಗ ಪ್ರತಿನಾಮ) | ನೆಟ್ಟಿರುವ ಕಲ್ಲು ಬೇಗೂರು | ೧೬೪೧ |
| ೪೫. | ಕೆಂಪೊಹಳಿ | ರಾಜಪ್ಪನ ಸಿದ್ದನಂಜಪ್ಪನ ಮನೆಯ | |
| | | ಮುಂದೆ ನೆಟ್ಟಿರುವ ಕಲ್ಲು | |
| | | ಮೊದಲಕೋಟೆ | |
| ೪೬. | ನಿಜಗಲ್ಲು | ೩೯ನೇ ಸರ್ವೆಸಂಖ್ಯೆಯ ಜಮೀನಿನಲ್ಲಿ | |
| | ತ್ಯಾಮಗೊಂಡ್ಲು | ಕುಲವನಹಳ್ಳಿ | |
| ೪೭. | ರಾಳೆ ಕೆಜೆ | ಗ್ರಾಮದಲ್ಲಿ ನೆಟ್ಟಿರುವ ಕಲ್ಲು ತಾಳೇಕೆರೆ | |
| ೪೮. | ಕೊಡಗಿ | ಕೊಡಗಿ ಬೊಮ್ಮನಹಳ್ಳಿ ಊರಿನಲ್ಲಿ | ೧೫೦೧ |
| | ಬೊಂಮರಹಳ್ಳಿ, | | |
| | ರಾಮಸಮುದ್ರ | | |
| ೪೯. | ಶಿವಪುರ | ವೆಂಕಟದಾಸಾಚಾರ್‌ಒಡೆಯರ | |
| | ಶೂರಗಿರಿ | ಮನೆಯ ಹಿತ್ತಿಲಿನಲ್ಲಿ ಬಿದ್ದಿರುವಕಲ್ಲು | |
| | ಕಂಬಾಳು | ದೊಡ್ಡಬೆಲೆ | ೧೬೭೪ |

| | | | |
|---|---|---|---|
| | ಮಾಚನಹಳ್ಳಿ | | |
| | ಗೊಟ್ಟಗೆರೆ ಪಾಳ್ಯ | | |
| | ಹೆಗ್ಗುಂದ | | |
| | ಅಪ್ಪುಗೊಂಡನಹಳ್ಳಿ | | |
| ೫೨. | ತೇಮಗೊಡ್ಲ | ಚೆಲುವನಾರಾಯಣ ದೇವಾಲಯದ | |
| | (ತ್ಯಾಮಗೊಂಡ್ಲು) | ಮುಂಭಾಗ ನೆಟ್ಟಿರುವ ಕಲ್ಲು, ದೊಡ್ಡ ಬೆಲೆ | |
| ೫೮. | ಶಿವಗಂಗೆ | ಶಕುನಿರಂಗನ ಗುಡ್ಡದ | |
| | ಮಂಣೆ | ಬಂಡೆಯ ಮೇಲೆ ಮಂಣೆ ಗ್ರಾಮ | |
| | ಅಂಬಲಿಗೆಜ಼್ | | ೧೪೪೯ |
| ೫೯. | ಅಂಪಿಸಂದ್ರ | ವಿಘ್ನೇಶ್ವರ ಗುಡಿಯ ಬಾಗಿಲು | |
| | ಓಬಲಪುರ (ಅಗ್ರಹಾರ) | ಕಲ್ಲಮೇಲೆ ಮಂಣೆ ಗ್ರಾಮ | |
| ೬೩ | ನರಸೆಯಪುರ | ನಿಜಗಲ್ ಗ್ರಾಮದ | |
| | ನಿಜಗಲಿಪುರ | ಕೆರೆಯ ಬಳಿಯಿರುವ ಕಲ್ಲು | |
| ೬೫ | ಕರಗಿರಿ ದುರ್ಗ | ನಿಜಗಲ್ ಗ್ರಾಮದ | ೧೬೦೦ |
| | | ಬಂಡೆಯ ಮೇಲೆ | |
| ೬೬ | ಬೆಳುಗುಲಿ | ನಿಜಗಲ್ ಗ್ರಾಮದಲ್ಲಿ | ೧೬೦೦ |
| | | ಗವಿ ಬಂಡೆಯ ಮೇಲೆ | |
| ೭೦ | ಶೂರಗಿರಿ | ನರಸಿಂಹಪುರ ಗ್ರಾಮದ | ೧೬೪೨ |
| | ಬಿಳಗಲಿ | ಶಾನುಭೋಗನ ಬಳಿ ನೆಟ್ಟಕಲ್ಲು | |
| | ಶೂರಗಿರಿ | | |
| | ಹೆಗ್ಗುಂದ | | |
| | ಗೊಟಿಗೆರೆ | | |
| | ನರಸಿಂಗಪುರ | | |
| | ಶ್ರೀರಂಗಪಟ್ಟಣ | | |
| ೭೨ | ಗೂಳೂರು | ಬಿಲ್ಲನಕೋಟೆ ಗ್ರಾಮದ | ೧೪೬೩ |
| | ಬಿಲನಕೋಟೆ | ತಿರುಮಲ ದೇವಾಲಯದ ಬಳಿ | |
| ೭೩ | ಗೂಳೂರು | ಆಂಜನೇಯ ದೇವಾಲಯದಲ್ಲಿ | ೧೪೨೩ |
| | ಹೊಸಹಳ್ಳಿ | ದೇವರ ಹೊಸಹಳ್ಳಿ ಗ್ರಾಮ | |

| | | | |
|---|---|---|---|
| ೮೧ | ಗವಿಪುರ | ಗಂಗಾಧರೇಶ್ವರ ದೇವಾಲಯ ಶಿವಗಂಗೆ | ೧೪೬೬ |
| ೮೩ | ಶ್ರೀಪತಿಹಳ್ಳಿ | ಗಂಗಾಧರೇಶ್ವರ ದೇವಾಲಯ ನಂದಿ ಮಂಟಪ, ಶಿವಗಂಗೆ | ೧೪೫೪ |
| ೮೫ | ಬಿಟಸಮುದ್ರ | ಗಂಗಾಧರೇಶ್ವರ ದೇವಾಲಯ | |

### ೮.೩.೬ ಮಾಗಡಿ ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು

| ಶಾಸನ ಸಂಖ್ಯೆ | ಶಾಸನೋಕ್ತ ಸ್ಥಳನಾಮ | ದೊರೆತ ಸ್ಥಳ | ಇಸವಿ |
|---|---|---|---|
| ೧. | ಕಂಚುಗಾರ್ರಹಳ್ಳಿ<br>ಹಾಲು ಶಿಘಿಂಗನಹಳ್ಳಿ | ಸೋಮೇಶ್ವರ ದೇವಾಲಯದ ಅರ್ಚಕರ ಬಳಿಯಿದ್ದ ತಾಮ್ರಶಾಸನ ಮಾಗಡಿ | |
| ೨. | ಅತಿಮಿಗೆರೆ<br>ಕೆಂಪಾಪುರ<br>ಹಂಚಿಕುಪೆ | ಸೋಮೇಶ್ವರ ದೇವಾಲಯದ ಅರ್ಚಕರ ಬಳಿಯಿದ್ದ ತಾಮ್ರಶಾಸನ, ಮಾಗಡಿ | ೧೫೯೨ |
| ೩. | ಉದ್ದುರಹಳ್ಳಿ | ಸೋಮೇಶ್ವರ ದೇವಾಲಯದ ಅರ್ಚಕರ ಬಳಿಯಿದ್ದ ತಾಮ್ರಶಾಸನ, ಮಾಗಡಿ | ೧೬೩೪ |
| ೪. | ವಜಟ್ಟನ ಹಳ್ಳಿ<br>ಶಿರುಪತಹಳ್ಳಿ | ಸೋಮೇಶ್ವರ ದೇವಾಲಯದ ಅರ್ಚಕರ ಬಳಿಯಿದ್ದ ತಾಮ್ರಶಾಸನ ಮಾಗಡಿ | ೧೬೩೯ |
| ೫. | ಹಾರಂಗಹಳ್ಳಿ<br>ಕೆಂಪಸಾಗರ<br>ಭೂಮಿಹಾಲಶೆಟ್ಟಿ ಹಳ್ಳಿ | ಶಿಲಾಶಾಸನ, ಮಾಗಡಿ | ೧೫೯೮ |
| ೬. | ಪೆಂಮನಹಳ್ಳಿ<br>ಬೊಮನಹಳ್ಳಿ | ರಂಗನಾಥ ದೇವಸ್ಥಾನದ ದಕ್ಷಿಣದ ಜಗಲಿ ಮೇಲೆ ಇರುವ ಶಾಸನ, ತಿರುಮಲೆ | |
| ೮. | ಯೆಲೆಯೂರು<br>ಡೊಂಕನಪುರ | ಶಿಂಗ್ರೈಯಂಗಾರರ ಬಳಿ ದೊರೆತ ತಾಮ್ರಶಾಸನ, ತಿರುಮಲೆ | ೧೬೦೩ |
| ೧೦. | ವುಡವಗೆರೆ<br>ಚಕ್ಕರಬಾವಿ | ಮಾಗಡಿ ಹೋಬಳಿ ಉಡುವಗೆರೆಗೆ ಸೇರಿರುವ ವಳಗೆರೆ ಪಾಳ್ಯದಲ್ಲಿ ದೊರೆತಿರುವ ಶಾಸನ | ೧೨೩೭ |
| ೧೧. | ಸೋಲೂರು<br>ಸೆಟ್ಟಿಹಳ್ಳಿ | ಬಸವಣ್ಣನ ದೇವಸ್ಥಾನದ ಪಶ್ಚಿಮದ ಗೋಡೆಯ | |

| | | | |
|---|---|---|---|
| | ಅಗ್ರಾರ | ನೆಟ್ಟಿರುವ ಕಲ್ಲು, ನಾಗಶೆಟ್ಟಿ ಹಳ್ಳಿ | ೧೪೪೨ |
| ೧೨. | ಬೇಲಕೆಟ್ | ಬ್ಯಾಲದಕೆರೆ, ಲಕ್ಷ್ಮಿದೇವಾಲಯದ | |
| | | ಎಡಭಾಗದಲ್ಲಿ ನೆಟ್ಟಿರುವ ಕಲ್ಲು | |
| ೧೭. | ಚೋಳಿ ನಾಯಕನ ಹಳ್ಳಿ | ಆಂಜನೇಯ ದೇವಾಲಯದ ಕಲ್ಯಗ್ರಾಮ | |
| | | ಮುಂದಿರುವ ಶಾಸನ | ೧೪೮೪ |
| ೧೮. | ತಿರುನಾರಾಯಣಪುರ | ಚಿಕ್ಕಣ್ಣನ ಹೊಲದಲ್ಲಿ ಕಲ್ಯ ಗ್ರಾಮ | ೧೨೯೦ |
| ೧೯. | ಹುಳೇನಹಳ್ಳಿ | ಕಲ್ಯಗ್ರಾಮದಲ್ಲಿರುವ ಹೊಲದಲ್ಲಿ | ೧೨೬೩ |
| ೨೩. | ದೇವನಕೆಟ್ | ಕಲ್ಲೇಶ್ವರದ ದೇವಾಲಯದ, | |
| | ಹುಳಿಕಟ್ಟೆ | ಗುಂಡಿನ ಮೇಲಿನ ಬರಹ ಸಾತನೂರು ಗ್ರಾಮ | |
| ೨೯. | ಹೆರಳಿಗನಹಳ್ಳಿ | ಬಸವಣ್ಣನ ದೇವಾಲಯದ | |
| | ಕೆಂಪಸಾಗರ | ದಕ್ಷಿಣದಲ್ಲಿ ನೆಟ್ಟಿರುವ ಕಲ್ಲು, ಕೆಂಪಸಾಗರ | ೧೫೯೦ |
| ೩೦. | ಹೊರಳಿಗನಹಳ್ಳಿ | | |
| | ಕೆಂಪಸಗರ | | |
| | ಭುಮಿಹಾಲಸೆಟ್ಟ ಹಳ್ಳಿ | | |
| | ಸಿರಿಪತಿಹಳ್ಳಿ | ಕೆರೆಯಕೋಡಿ ಶಾಸನ, ಹಾಲಶೆಟ್ಟಹಳ್ಳಿ | ೧೫೯೦ |
| ೩೩. | ಮರುಳದೇವರ ಕಟ್ಟೆ | ಮಾರನ ಹೊಲದಲ್ಲಿ ಸಿಕ್ಕ ಶಾಸನ, ಯಲಗದಹಳ್ಳಿ | |
| | ಚಿಕ್ಕ ವಡೇರ ಕಟ್ಟೆ | | |
| ೩೪. | ಆಳಲು ಕಪ್ಪೆ | ಊರಬಾಗಿಲ | |
| | | ತೊಲೇಕಲ್ಲಿನ ಮೇಲೆ, ಆಳಲು ಕುಪ್ಪೆ | |
| ೩೮. | ಗಜಗಾರಗುಪ್ಪೆ | ಊರ ಮುಂದೆ ಇರುವ ಶಿಲಾಶಾಸನ | |
| | | ಗೆಜ್ಜಗಾರಕುಪ್ಪೆ ಗ್ರಾಮ | |
| ೪೨. | ಮಾಯಿನಾಯಕಹಳ್ಳಿ | ಈಶ್ವರ ದೇವಾಲಯದ ಪೂರ್ವದಲ್ಲಿ | |
| | ಮಾದನಹಳ್ಳಿ | ನೆಟ್ಟಕಲ್ಲು, ಮಾಯಿನಾಯಕನಹಳ್ಳಿ | |
| | ಹನುಮಾಪುರ | | |
| | ಕೆಂಪಸಾಗರ | | |
| | ವಳಗೆರೆಯ ತೋಟ | | |
| | ಅಗ್ರಹಾರ | | |
| ೪೪. | ಬುವನಹಳ್ಳಿ | ನವಕೇರಿರಾಯ ದೇವಸ್ಥಾನದ ಗರುಡ | |
| | | ಕಂಭದ ಮೇಲೆ ನಾರಸಂದ್ರ ಗ್ರಾಮ | ೧೩೯೭ |

| | | | |
|---|---|---|---|
| ೪೫. | ಸೋಲೂರು<br>ಕೆಂಪನಪುರ | ಕೆಂಪೋಹಳ್ಳಿ ಗ್ರಾಮದ ಜಮೀನಿನಲ್ಲಿ,<br>ದಂಮಿನ ಕಟ್ಟೆ | |
| ೫೨. | ಬಿಸಗೂರು | ಊರಬಾಗಿಲಿನ ಮಾಳಿಗೆಗೆ ಹಾಕಿರುವ ಕಲ್ಲಿನ ಮೇಲೆ ಬಿಸ್ಗೂರು<br>೧೪೮೬ | |
| ೫೮ | ಹುಳಿಯನಹಳ್ಳಿ | ಸಣ್ಣೇನಹಳ್ಳಿ ಗುಡಿಬಳಿ ಹೆಬ್ಬಳಲು | ೧೨೩.೭ |
| ೫೯ | ಹುಳಿನಹಳಿ<br>ಬ್ರಹ್ಮಪುರ | ಬಸವಣ್ಣನ ದೇವಸ್ಥಾನ | ೧೨೪೦ |
| ೬೨ | ಸೋಲೂರು | ನನ್ನುಸಾಬಿ ತೋಟ<br>ಸೋಲೂರು | ೧೪೩.೨ |
| ೭೨ | ಗೊರಲುರಪುರ | ಪಾಳು ದೇವಸ್ಥಾನ<br>ಗೊರೂರು | |
| ೭೪ | ಬಾಣವಾಡಿ<br>ರಾಮಾಪುರ | ಕೆರೆಕೋಡಿ ಬಳಿ<br>ಬಾಣವಾಡಿ | ೧೪೬೯ |
| ೭೫ | ಮಣ್ಣೆ | ಪಾಳು ದೇವಾಲಯದ ಬಳಿ<br>ಮೂಡ್ಲುಪಾಳ್ಯ | |
| ೮೧ | ತಾವರೇಕೆರೆ<br>ಹೆಸರಹಳ್ಳಿ | ನಂಜುಂಡಯ್ಯನ ಹೊಲ<br>ಬೈಚಕುಪ್ಪೆ | - |
| ೮೨ | ಮಾರಯನಹಳ್ಳಿ<br>ದಣಾಯಕಪುರ | ಆಂಜನೇಯ ದೇವಸ್ಥಾನದ ಬಳಿ<br>ಮಾರೇನಹಳ್ಳಿ | ೧೪೪೬ |

### ೮.೩.೭ ಹೊಸಕೋಟೆ ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು

| ಶಾಸನ ಸಂಖ್ಯೆ | ಶಾಸನೋಕ್ತ ಸ್ಥಳನಾಮ | ದೊರೆತ ಸ್ಥಳ | ಇಸವಿ |
|---|---|---|---|
| ೧. | ಸುಗಟೂರು<br>ನಂಜಿಗುಳಿ<br>ಹಿಮಸಂದ್ರ | ಮಲ್ಲೇಶ್ವರ ದೇವಾಲಯದ ಮುಂದೆ<br>ನೆಟ್ಟಿರುವಕಲ್ಲು, ನಂದಗುಡಿ | ೧೪೮೨ |
| ೨. | ನಂಜಗುಳ<br>ಏಟ್ಟಸಂದ್ರ | ಅದೇ ದೇವಾಲಯದ ಆಗ್ನೇಯ ಭಾಗದಲ್ಲಿ<br>ನೆಟ್ಟಿರುವ ಕಲ್ಲು, ನಂದಗುಡಿ | ೧೪೮೩ |
| ೩. | ವಾಸರಹಳ್ಳಿ<br>(ಪ್ರತಿನಾಮ ದೇವಾಪುರ) | ಈಶ್ವರ ದೇವ ಸ್ಥಾನದ ಹಿಂಭಾಗದಲ್ಲಿ<br>ಬಿದ್ದಿರುವ ಕಲ್ಲು ನೆಲವಾಗಿಲಹಳ್ಳಿ | ೧೪೯೯ |

| | | | |
|---|---|---|---|
| ೪. | ಸೂಗೂಟೂರ | ಪಾಳುದೇವಸ್ಥಾನದ ಬಳಿಯಿರುವ ಅಶ್ವತ್ಥ | |
| | ದೇವಾಪುರ | ಮರದ ಕೆಳಗೆ ನೆಟ್ಟಿರುವಕಲ್ಲು | |
| | | ಎತ್ತಿನವಡೇರಪುರ | |
| ೧೫. | ಹೊಬಳಸಿದ್ದಹಳ್ಳಿ | ಬಗಳಕೆರೆ ಕೆಳಗೆ ಗದ್ದೆಯಲ್ಲಿ | |
| | | ಬಿದ್ದಿರುವ ಕಲ್ಲು, ಸಿದ್ಧನಹಳ್ಳಿ | |
| ೧೬. | ನಂದುಗುಳಿ | ಅದೇ ಸ್ಥಳದಲ್ಲಿ | |
| ೧೭. | ಬನಹಳ್ಳಿ | ಅದೇ ಸ್ಥಳದಲ್ಲಿ | |
| ೨೪. | ಹುಸುಕೂರು | ಕರಿಯಪ್ಪನ ಹೊಲದ ಬದುವಿನಲ್ಲಿರುವ | |
| | ಶಿವನಾಪುರ | ಕಲ್ಲು, ಶಿವನಾಪುರ ಗ್ರಾಮ | |
| ೨೮. | ಮುಳುವಾಗಲು | ಲಕ್ಷ್ಮೀನಾರಾಯಣ ದೇವಾಲಯದ | ೧೪೫೨ |
| | ಚತುರ್ವೇದಿ ಮಂಗಲ | ಈಶಾನ್ಯದಲ್ಲಿ ವೊಡ್ಡರಹಳ್ಳಿ ಗ್ರಾಮ | |
| | ನಲ್ಲೂರು | | |
| | ವೊಡ್ಡರಹಳ್ಳಿ | | |
| ೩೩. | ತಾವರೆಕೆರೆ | ವೆಂಕಟದಾಸಪ್ಪನ ಗದ್ದೆಯಲ್ಲಿ | |
| | ಹೊಸಹಳ್ಳಿ | ಹೊಸ ಹಳ್ಳಿ ಗ್ರಾಮ | |
| | ಮುದ್ದ ನಹಳ್ಳಿ | | |
| ೩೯. | ನೆಲವಾಗಿಲು | ಹುವ್ವರಸಿ ಗಿಡದ ಕೆಳಗೆ ನಿಲ್ಲಿಸಿರುವ ಕಲ್ಲು, ೧೪೬೧ | |
| | ವೋಬಳಹಳ್ಳಿ | ಓಬಳಹಳ್ಳಿ ಗ್ರಾಮ | |
| | ಓಬಳಹಳ್ಳಿ | | |
| ೪೧. | ದೊಡ್ಡಗಾವನಹಳ್ಳಿ | ಜಮಿನಿನಲ್ಲಿ ನೆಟ್ಟಿರುವ ಕಲ್ಲು ಕೊರಟಿ ಗ್ರಾಮ | |
| ೪೬. | ಹಡಕನಹಳ್ಳಿ | ಮುನಿಗೌರೇಗೌಡನ ಹೊಲದ | |
| | | ಬಂಡೆ ಮೇಲೆ ಹಡಕನಹಳ್ಳಿ | |
| ೫೩. | ಸೂಲಿಬೆಲೆ | ಬನಾಜಿರಾಯರ ಕೊಡಿಗಿ ಹೊಲದಲ್ಲಿ | |
| | | ಸೂಲಿಬೆಲೆ | |
| ೫೭. | ಬೆಟ್ಟಹಳ್ಳಿ | ಮುನಿಶಾಮೀ ತೋಟದಲ್ಲಿ ನೆಟ್ಟಿರುವ ಕಲ್ಲು | |
| | | ಸಿದ್ದೇನಹಳ್ಳಿ | ೧೪೨೮ |
| ೬೧. | ಚಿಕ್ಕ ಅರಳಗೆರೆ | ಒಳಗೆರೆಯಲ್ಲಿರುವ ಕಲ್ಲು | |
| | ತಿಮ್ಮರಸನ ಹಳ್ಳಿ | ಚಿಕ್ಕ ಅರಳಗೆರೆ | |

| | | | |
|---|---|---|---|
| ೬೨. | ಬಾಲೇನಹಳ್ಳಿ | ಮುನಿಚಿನ್ನಪ್ಪನ ಹೊಲದಲ್ಲಿ ನೆಟ್ಟಕಲ್ಲು<br>ಬಾವೇನ ಹಳ್ಳಿ | |
| ೬೪. | ಬೆಂಗುಳೂರು<br>ನಗರೇನಹಳ್ಳಿ | ತಿರುಮಲೆ ದೇವರ ಗುಡಿಯ ಉತ್ತರಭಾಗದಲ್ಲಿ<br>ನಗರೇನಹಳ್ಳಿ | |
| ೬೭. | ಗುಳನಹಳಿ | ಬಾಳಾಜಿರಾಯರ ಕೊಡುಗೆ ಹೊಲ ಗುಳ್ಳ ಹಳ್ಳಿ | |
| ೬೮. | ಗಿರಪನಹಳಿ<br>ಬೆಟ್ಟದ ಹಳ್ಳಿ | ಬೂಬಿಜಿ ಮಕ್ಕಾನ್ ಇನಾಮ್ತಿ ಹೊಲದ<br>ಆಗ್ನೇಯದಲ್ಲಿ ನೆಟ್ಟ ಕಲ್ಲು ಬೆಟ್ಟಹಳ್ಳಿ | |
| ೬೯. | ಕದುಮನಪುರ<br>ಅತ್ತಿಬೆಲೆ | ಗೋವಿಂದಪ್ಪನ ಹೊಲದಲ್ಲಿ<br>ಕದಮನಪುರ | |
| ೭೩. | ಅನುಪುಹಳ್ಳಿ<br>ಶಿವಗಂಗೆ | ಹುಣಸೇ ತೋಪಿನಲ್ಲಿ ನೆಟ್ಟಿರುವಕಲ್ಲು<br>ಅನುವುಹಳ್ಳಿ | ೧೪೮೨ |
| ೭೭. | ಕರಪನಹಳ್ಳಿ<br>ಸತ್ಯವರ | ಮುನೀಶ್ವರನ ಆಲದ ಮರದ ಬಳಿ<br>ನಟ್ಟಿರುವ ಕಲ್ಲು, ಕರಪನಹಳ್ಳಿ | |
| ೭೯. | ಪುರಚೋನಹಳ್ಳಿ | ಊರು ಬಾಗಿಲ ಎದುರು ನಟ್ಟಿರುವಕಲ್ಲು<br>ದೊಡ್ಡ ನಲ್ಲೂರು | ೧೫೯೨ |
| ೯೨. | ಅಟ್ಟೂರು | ಚನ್ನಬಸವೇಗೌಡನ ಗದ್ದೆಯಲ್ಲಿ<br>ನೆಟ್ಟಿರುವಕಲ್ಲು, ಅಟ್ಟೂರು | |

### ೮.೩.೮ ಶಾಸನೋಕ್ತ ಸ್ಥಳನಾಮಗಳ ಸ್ಥಿತ್ಯಂತರ ರೂಪ

ಶಾಸನೋಕ್ತ ಸ್ಥಳನಾಮಗಳು ಕಾಲಾಂತರದಲ್ಲಿ ಭಾಷಿಕವಾಗಿ ಸ್ಥಿತ್ಯಂತರವಾಗಿರುವುದನ್ನು ಗುರುತಿಸಬಹುದು. ಈ ರೀತಿಯ ಬದಲಾವಣೆಗೆ ಭಾಷೆಯ ಲಕ್ಷಣವೇ ಕಾರಣವಾಗಿದ್ದು, ಜನರ ಉಚ್ಚಾರಣೆಯಿಂದ ಈ ಬದಲಾವಣೆಯಾಗುತ್ತಿರುತ್ತದೆ. ಉಚ್ಚಾರಣೆಯ ರೂಪವನ್ನೆ ಶಿಷ್ಟ ಬರವಣಿಗೆಯಲ್ಲಿ ಅಳವಡಿಸಿಕೊಂಡಿರುವ ಸಾಧ್ಯತೆಯು ಇರುವುದರಿಂದ, ಶಾಸನದಲ್ಲಿರುವ ರೂಪವು ಬದಲಾಗಿರುವ ಸಾಧ್ಯತೆ ಇರುತ್ತದೆ. ಈ ರೀತಿ ಸ್ಥಿತ್ಯಂತರವಾಗಿರುವ ಸ್ಥಳನಾಮಗಳನ್ನು ಗುರುತಿಸಲಾಗಿದ್ದು, ಕೆಲವೊಮ್ಮೆ ಶಾಸನದಲ್ಲಿರುವ ರೂಪವು ಪ್ರಸ್ತುತ ಶಿಷ್ಟ ಬರವಣಿಗೆಯ ಲಕ್ಷಣಕ್ಕಿಂತಲೂ ಭಿನ್ನವಾಗಿರುವುದು ಕಂಡುಬರುತ್ತದೆ.

| ಶಾಸನ ಸಂಖ್ಯೆ ತಾಲ್ಲೂಕು | ಶಾಸನೋಕ್ತ ರೂಪ | ಸ್ಥಿತ್ಯಂತರ ರೂಪ |
|---|---|---|
| ೮ - ಕ | ಚಿಕ್ಕಮಣಲವಾಡಿ | ಚಿಕ್ಕಮರಳವಾಡಿ |
| ೩೧ - ಕ | ಅಂಣೆಗಹಳ್ಳಿ | ಅಣ್ಣೆಗರಹಳ್ಳಿ |
| ೩೭ - ಕ | ಅರುಳಹಳ್ಳಿ | ಅರಳೇಹಳ್ಳಿ |
| ೪೬ - ಕ | ಪುರುಸಗೊಂಡನಹಳ್ಳಿ | ಪುರುಷಗೊಂಡನಹಳ್ಳಿ |
| ೭೬ - ಕ | ಗವುಡನಹಳ್ಳಿ | ಗೌಡನಹಳ್ಳಿ |
| ೯೧ - ಕ | ವಿರುಪಸಮುದ್ರ | ವಿರೂಪಸಂದ್ರ |
| ೧೦೭ - ಕ | ಕಳ್ಳೇನಹಳ್ಳಿ | ಕಲ್ಲಹಳ್ಳಿ |
| ೨ - ಚ | ಸೊಂಡೆಯಕೊಪ್ಪ | ಸೊಂಡೆಕೊಪ್ಪ |
| ೩ - ಚ | ಪರಾದಹಳ್ಳಿ | ಪುರದಹಳ್ಳಿ |
| ೯ - ಚ | ಹರದೇವನಹಳ್ಳಿ | ಹರದೇನಹಳ್ಳಿ |
| ೧೨ - ಚ | ಚಂದಿಮಾದಿಯಹಳ್ಳಿ | ಚನ್ನಮಾನಹಳ್ಳಿ |
| ೨೩ - ಚ | ಮಳಲೂರು | ವಳೂರು |
| ೨೩ - ಚ | ಬಲಕುಳಿ | ಬ್ಯಾಲಕುಳಿ |
| ೨೬ - ಚ | ನಾಗುವಳ್ಳಿ | ನಾಗೋಹಳ್ಳಿ |
| ೩೬ - ಚ | ಹರಲೂರು | ಹರೂರು |
| ೧ - ದೇ | ಯಲಹಕ್ಕ | ಯಲಹಂಕ |
| ೧೫ - ದೇ | ದೇವನಪುರ | ದೇವನಹಳ್ಳಿ |
| ೧೫ - ದೇ | ವಡಿಗೇ ಹಳ್ಳಿ | ವಿಜಯಪುರ |
| ೧೫ - ದೇ | ಬಯಿಚಾಪುರ | ಬೈಚಾಪುರ |
| | ಬಯಿರಾಪುರ | ಬೈರಾಪುರ |
| ೧೪ - ದೊ | ಗಹುಡನಹಳ್ಳಿ | ಗೌಡನಹಳ್ಳಿ |
| ೨೫ - ದೊ | ರಾಜಗಟ | ರಾಜಘಟ್ಟ |
| ೪೧ - ದೊ | ಗಂಡ್ರಗೂಲಿಪುರ | ಗಂಡ್ರಗೂಳಿಪುರ |
| ೩೫ - ನೆ | ಬೆತ್ತಿಯಗೆರೆ | ಬೆತ್ನಿಗೆರೆ |
| ೩೨ - ನೆ | ತೇಮಗೊಡ್ಲ | ತ್ಯಾಮಗೊಂಡ್ಲು |
| ೧೦ - ಮಾ | ಚಿಕ್ಕರಬಾವಿ | ಚಿಕ್ಕಬಾವಿ |
| ೧೨ - ಮಾ | ಬೇಲಕೆರೆ | ಬ್ಯಾಲದಕೆರೆ |
| ೩೦ - ಮಾ | ಭುಮಿಹಾಲಸೆಟ್ಟಿಹಳ್ಳಿ | ಹಾಲಶೆಟ್ಟಿಹಳ್ಳಿ |
| ೧ - ಹೊ | ನಂಜಿಗುಳಿ | ನಂವಗುಡಿ |

| | | |
|---|---|---|
| ೩ - ಹೊ | ದೇವಾಪುರ | ದಾಸರಹಳ್ಳಿ |
| ೬೪ - ಹೊ | ಬೆಂಗುಳೂರು | ಬೆಂಗಳೂರು |

ಮೇಲಿನ ಪಟ್ಟಿಯಲ್ಲಿರುವ ಸ್ಥಳನಾಮಗಳಲ್ಲಿ ಶಾಸನೋಕ್ತ ರೂಪ ಹಾಗೂ ಸ್ಥಿತ್ಯಂತರಗೊಂಡಿರುವ ರೂಪಗಳೆರಡೂ ಗುರುತಿಸಲಾಗಿದೆ.

ಅನುನಾಸಿಕ ವ್ಯಂಜನಗಳ ದ್ವಿತ್ವಾಕ್ಷರ ಬಂದಿರುವ ಸಂದರ್ಭದಲ್ಲಿ, ಸಬಿಂದುಕವಾಗಿರುವುದರ ಜೊತೆಗೆ ಅನುನಾಸಿಕ ಅಕ್ಷರ ಬಳಕೆಯಾಗಿದೆ.

| | ಶಾಸನೋಕ್ತ ರೂಪ | | ಶಿಷ್ಟರೂಪ |
|---|---|---|---|
| ಉದಾ : | ಚಂನ ಪಟ್ಟಣ | > | ಚನ್ನಪಟ್ಟಣ (ಚ) |
| | ತಂಮರಸನ ಹಳ್ಳಿ | > | ತಮ್ಮರಸನ ಹಳ್ಳಿ (ಹೊ) |
| | ನಂಜಂಮನ ಹಳ್ಳಿ | > | ನಂಜಮ್ಮನ ಹಳ್ಳಿ (ಚ) |
| | ಬೊಂಮರ ಹಳ್ಳಿ | > | ಬೊಮ್ಮನ ಹಳ್ಳಿ |

ಸ್ಥಳ ನಾಮಗಳಲ್ಲಿ ಬಳಕೆಯಾಗಿರುವ ಗುಣಿತಾಕ್ಷರವು ವ್ಯತ್ಯಾಸ ಹೊಂದಿ ಅಕ್ಷರ ಪಲ್ಲಟ (Meta Thesis) ಆಗಿರುವುದನ್ನು ಇಲ್ಲಿ ಗುರುತಿಸಬಹುದು.

| | ಶಾಸನೋಕ್ತ ನಾಮ | ಅಕ್ಷರಪಲ್ಲಟ ರೂಪ |
|---|---|---|
| ಉದಾ: | ಚಿಕ್ಕ ಮಣಲವಾಡಿ | ಚಿಕ್ಕ ಮರಳವಾಡಿ (ಕ) |

### ೮.೩.೯ ಶಾಸನೋಲ್ಲೇಖಿತ ಸ್ಥಳನಾಮಗಳು ಭಾಷಿಕ ವ್ಯತ್ಯಾಸಗಳು

**ಸಬಿಂದುಕ ಮತ್ತು ಅಬಿಂದುಕ ಸ್ಥಳನಾಮಗಳು**

ಶಾಸನೋಕ್ತ ಸ್ಥಳನಾಮಗಳಲ್ಲಿ ಅನುನಾಸಿಕಗಳಿಗೆ ಪರ್ಯಾಯವಾಗಿ ಬಳಸುವ 'ಂ' ಸಂಕೇತವನ್ನು ಬಳಸಿರುವುದು ಕಂಡುಬರುತ್ತದೆ. ವರ್ಗೀಯ ವ್ಯಂಜನದ ಪೂರ್ವದಲ್ಲಿ ಈ ಸಬಿಂದುಕಗಳು ಬಂದಿದ್ದು, 'ಂ' ಈ ಸಂಕೇತದ ನಂತರ ಅನುನಾಸಿಕವೇ ಬಂದಿರುವುದನ್ನೂ ಗುರುತಿಸಬಹುದು. 'ಂ' ಅನುಸ್ವಾರದ ನಂತರ ಅನುನಾಸಿಕ ವ್ಯಂಜನಗಳು ಸೇರಿರುವ ಸ್ಥಳನಾಮಗಳು ನಂತರ ಬದಲಾವಣೆಯಾಗಿ ಅನುನಾಸಿಕ ವ್ಯಂಜನಾಕ್ಷರಗಳು ಮಾತ್ರ ಬಳಕೆಯಾಗಿದ್ದು, ಅಬಿಂದುಕಗಳಾಗಿವೆ.

| | ಶಾಸನೋಕ್ತ ರೂಪ | ಪ್ರಸ್ತುತ ರೂಪ | ಶಾಸನ ಸಂಖ್ಯೆ |
|---|---|---|---|
| ಉದಾ: | ಅಂಣೆಗರಹಳ್ಳಿ | ಅಣ್ಣೆಗರಹಳ್ಳಿ | ೩೧-ಕ |
| | ಚಂನಪಟ್ಟಣ | ಚನ್ನಪಟ್ಟಣ | ೧೮-ಚ |
| | ವೀರಂಣೆಗರಳ್ಳಿ | ವೀರಣ್ಣೆಗರಹಳ್ಳಿ | ೧೨-ಚ |
| | ಚನ್ನವೀರಂಮನತೋಟ | ಚನ್ನವೀರಮ್ಮನತೋಟ | ೨೭-ದೇ |
| | ಬೊಂಮರಹಳ್ಳಿ | ಬೊಮ್ಮನಹಳ್ಳಿ | ೪೮ (ನೆ) |

| | | |
|---|---|---|
| ಮಂಣೆ | ಮಣ್ಣೆ | ೫೮ (ನೆ) |
| ಪೆಂಮನಹಳ್ಳಿ | ಪೆಮ್ಮನಹಳ್ಳಿ | ೪೫ (ಮಾ) |
| ತಂಮರಸನಹಳ್ಳಿ | ತಮ್ಮರಸನಹಳ್ಳಿ | ೬೧ (ಹೊ) |

ಮೇಲಿನ ಪಟ್ಟಿಯಲ್ಲಿನ ಸ್ಥಳನಾಮಗಳಲ್ಲಿ ಸಬಿಂದುಕಗಳನ್ನು ಗುರುತಿಸಬಹುದು. ಸಬಿಂದುಕಗಳು ಅನುನಾಸಿಕ ಅಕ್ಷರದ ಮೊದಲು ಬಂದಿರುತ್ತದೆ. ಈ ಸ್ಥಳನಾಮಗಳು ಕಾಲಾಂತರದಲ್ಲಿ ಅಬಿಂದುಕ ಸ್ಥಳನಾಮಗಳಾಗಿ ಸ್ಥಿತ್ಯಂತರವಾಗಿವೆ. ಈ ರೀತಿ ಬದಲಾಗುವಾಗ ಸಜಾತೀಯ ಅನುನಾಸಿಕ ದ್ವಿತ್ವವನ್ನು ಒಳಗೊಂಡಿದೆ.

ಉದಾ: ಂಣ್ > ಣ್ಣ

ಂಮ್ > ಮ್ಮ

ಂನ್ > ನ್ನ ಆಗಿ ಬದಲಾವಣೆ ಹೊಂದಿರುತ್ತದೆ.

## ೮೩೧ ಶಕಟರೇಫೆ ಇರುವ ಶಾಸನೋಕ್ತ ಸ್ಥಳನಾಮಗಳು

ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಸ್ಥಳನಾಮಗಳಲ್ಲಿ ಶಕಟರೇಫಗಳಾದ 'ಱ' ಅಕ್ಷರಗಳನ್ನು ಬಳಸಿರುವುದನ್ನು ಗುರುತಿಸಬಹುದು. ನಂತರದಲ್ಲಿ 'ರ' ಅಕ್ಷರವನ್ನು ಬಳಸಿಕೊಳ್ಳಲಾಗಿದೆ.

| **ಶಾಸನೋಕ್ತ ರೂಪ** | **ಸ್ಥಿತ್ಯಂತರ ರೂಪ** |
|---|---|
| ಕಾಣಿಕಾಱನಹಳ್ಳಿ | ಕಾಣಿಕಾರನಹಳ್ಳಿ (ಕ) |
| ಕಱುವಗೆಱೆ | ಕುರುವಗೆರೆ (ದೊ) |
| ಗೆಜಗಾಱಗುಪ್ಪೆ | ಗೆಜಗಾರಗುಪ್ಪೆ (ನೆ) |
| ರಾಳಕೆಱೆ | ರಾಳ್ಳಕೆರೆ (ನೆ) |
| ಅಂಬಲಿಗೆಱೆ | ಅಂಬಲಿಗೆರೆ (ನೆ) |
| ಬೇಲಕೆಱೆ | ಬೇಲಕೆರೆ (ಮಾ) |
| ದೇವನಕೆಱೆ | ದೇವನಕೆರೆ (ಮಾ) |

ಮೇಲಿನ ಪಟ್ಟಿಯಲ್ಲಿ 'ಱ' ಕಾರ ಬಳಕೆಯಾಗಿದ್ದು, ಇದರ ಜೊತೆಯಲ್ಲಿ 'ರ' ಕಾರದ ಬಳಕೆಯೂ ಇದ್ದಿತು. ಈ ಎರಡೂ ವರ್ಣಗಳ ರೂಪಗಳು ಕನ್ನಡದಲ್ಲಿ ಬಳಕೆಯಲ್ಲಿದ್ದುದಕ್ಕೆ ಮೇಲಿನ ಸ್ಥಳನಾಮಗಳು ಉದಾಹರಣೆಗಳಾಗಿವೆ.

## ೮.೪ ಪುರಾಣ ಮತ್ತು ಸ್ಥಳನಾಮಗಳು

ಸ್ಥಳನಾಮಗಳಲ್ಲಿ ಪುರಾಣ ಸಂಬಂಧಿತ ಘಟನೆ ಅಥವಾ ಕಲ್ಪಿತವಾದ ದೈವಿಕ ಅಂಶಗಳನ್ನು ಗುರುತಿಸಬಹುದು. 'ಪುರಾಣ'ವು ಪ್ರಾಚೀನ ಅಥವಾ ಹಳೆಯ ಅಥವಾ ಹಿಂದೆ ನಡೆದಿರಬಹುದಾದ ಪೂರ್ವ ಕಥೆಯನ್ನು ವಿವರಿಸುತ್ತದೆ. ಐತಿಹ್ಯ ಹಾಗೂ ಪುರಾಣಗಳು, ಜನಪದ ಕಥೆ ನಿರೂಪಣೆಯ ಬೇರೆ ಬೇರೆ ಪ್ರಕಾರಗಳಾಗಿವೆ. ಪುರಾಣ ಹಾಗೂ

ಐತಿಹ್ಯಗಳು ಒಂದು ಕಾಲದಲ್ಲಿ ನಡೆದಿರಬಹುದಾದ ಘಟನೆಯ ವಿವರಗಳನ್ನು ರಂಜನೀಯವಾಗಿ ವಿವರಿಸುತ್ತಾ ಕೆಲವೊಮ್ಮೆ ಭೌಗೋಳಿಕ, ಪ್ರಾಕೃತಿಕ ಪುರಾವೆಗಳನ್ನು ಒದಗಿಸುವ ಪ್ರಯತ್ನ ಮಾಡುತ್ತಿರುತ್ತವೆ. ಈ ಪುರಾವೆ ಗಳಿಗನುಸಾರವಾಗಿಯೇ ಕಥಾ ವಿವರಣೆಯಿರುವುದನ್ನು ಅಲ್ಲಗಳೆಯಲಾಗದು. ಪುರಾವೆಗಳನ್ನು ಒದಗಿಸುವಾಗ ಪಳೆಯುಳಿಕೆ, ಹಬ್ಬ-ಜಾತ್ರೆ-ಆಚರಣೆಗಳು, ನಂಬಿಕೆಗಳು ಹಾಗೂ ಸ್ಥಳನಾಮ - ಕುಲನಾಮಗಳನ್ನು ಮುಖ್ಯವಾಗಿ ಗುರುತಿಸಲಾಗುತ್ತದೆ. “ ‘ಐತಿಹ್ಯ’ ಇಲ್ಲವೆ- ಲೆಜೆಂಡ್’ ಪದಕ್ಕೆ ವಿವಿಧ ಪಾಶ್ಚಿಮಾತ್ಯ, ಭಾರತೀಯ ಹಾಗೂ ಕನ್ನಡಿಗ ಜಾನಪದ ತಜ್ಞರು-ವಿದ್ವಾಂಸರು ನೀಡಿದ ಅರ್ಥ-ವಿವರಣೆ-ನಿರ್ವಚನಗಳಲ್ಲಿ ಇಂತಹ ಕುರುಹು ಅವಶೇಷಗಳಿಗೇನೂ ಪ್ರಾತಿನಿತ್ಯವಿದ್ದುದು ಕಂಡುಬರುವುದಿಲ್ಲ. ಪಾಶ್ಚಿಮಾತ್ಯರಲ್ಲಂತೂ ಐತಿಹ್ಯ (ಲೆಜೆಂಡ್)ದಲ್ಲಿ ಕುರುಹಿಗೆ ಏನೇನೂ ಪ್ರಾಧಾನ್ಯವಿದ್ದಿಲ್ಲವೆಂದು ಹೇಳಬೇಕಾಗುತ್ತದೆ. ಹಾಗೆಂದು ನಮ್ಮಲ್ಲಿ ಐತಿಹ್ಯವು ವಿವರಿಸುವ ಘಟನೆಗಳೊಂದಿಗೆ ಅವಿನಾ ಸಂಬಂಧವಿರುವಂತೆ ಭಾಸವಾಗುವ ಇಂತಹ ಕುರುಹುಗಳನ್ನು ಸಾರಾಸಗಟಾಗಿ ತಳ್ಳಿ ಹಾಕುವಂತಿಲ್ಲ.”[೨೧] ಈ ಮಾತು ‘ಪುರಾಣ’ಕ್ಕೂ ಅನ್ವಯವಾಗುತ್ತದೆ. ಪುರಾಣ ಹಾಗೂ ಐತಿಹ್ಯಗಳೆರಡರ ನಡುವೆ ಸಂಬಂಧವಿದ್ದು ಇವೆರಡೂ ಪ್ರಾಚೀನವಾದವುಗಳು.

ಪುರಾಣಗಳು ಹಳೆಯ ವೃತ್ತಾಂತಗಳಾಗಿದ್ದು ಅವುಗಳ ಜೊತೆಗೆ ಇತರೆ ಕೆಲವು ಅಂಶಗಳನ್ನು ಸೇರಿಸಬಹುದಾಗಿದೆ. “ಹಿಂದೆ ನಡೆದವುಗಳೆಂದೇ ಹೇಳಲಾಗುವ ಅತಿಮಾನುಷ ವ್ಯಕ್ತಿಗಳ, ದೈವ-ದೇವರುಗಳ, ಸಾಂಸ್ಕೃತಿಕ ವೀರಪುರುಷರ ಸಾಹಸ ಮಹಿಮೆ - ಪವಾಡಗಳನ್ನು ಪುರಾತನ ಸಂಪ್ರದಾಯ ಹಾಗೂ ಧಾರ್ಮಿಕ ನಂಬಿಕೆಗಳನ್ನು ವಿವರಿಸುವ ಕಥೆಗಳನ್ನು ‘ಪುರಾಣ’ (Myth) ಎಂದು ಕರೆಯಲಾಗುವುದು.”[೨೨] ಪುರಾಣಗಳಲ್ಲಿ ಧಾರ್ಮಿಕ ಅಂಶಗಳೇ ಕಂಡುಬರುವುದಿದ್ದು ದೇವರು, ಋಷಿಗಳು, ಪೌರಾಣಿಕ ವ್ಯಕ್ತಿಗಳ ಘಟನೆಗಳ ಕಥೆ ಗುರುತಿಸುವುದರಿಂದ, ಅವುಗಳನ್ನು ‘ಪುರಾಣ’ ಎಂದು ಕರೆಯಬಹುದು. ಪುರಾತನ ಕಾಲದಲ್ಲಿ ಸೃಷ್ಟಿಯಾಗಿರುವ ಐತಿಹ್ಯಗಳೇ, ನಂತರದ ಕಾಲದಲ್ಲಿ ಪುರಾಣಗಳಾಗಿ ಪರಿವರ್ತನೆಯಾಗಿರುವುದನ್ನು ತಳ್ಳಿಹಾಕುವಂತಿಲ್ಲ. ಮೌಖಿಕ ಪರಂಪರೆಯಿಂದ ಸೃಷ್ಟಿಯಾದ ದಂತಕಥೆಗಳು, ಐತಿಹ್ಯಗಳಾಗಿ ವಿಶೇಷ ಪರಿಸ್ಥಿತಿಗಳಲ್ಲಿ (ಪ್ರಸಾರಕರ ದೃಷ್ಟಿಕೋನ) ಅದು ಪೌರಾಣಿಕ ಮಹತ್ವವನ್ನು ಪಡೆಯುತ್ತದೆ. ಸಾಮಾನ್ಯವಾದ ಘಟನೆಗಳಾದರೆ ಅದು ಮುಂದುವರಿಯುವ ಸಾಧ್ಯತೆ ಕಡಿಮೆ. ಐತಿಹ್ಯಗಳಲ್ಲಿ ಕಂಡುಬರುವ ಧಾರ್ಮಿಕ ಅಂಶಗಳ ಜೊತೆಗೆ ಮತ್ತಷ್ಟು ಅಂಶಗಳನ್ನು ಅಂದರೆ ಪವಾಡ ಮುಂತಾದ ಮಾನವಾತೀತ ಶಕ್ತಿಯಿಂದ ನಡೆಯಬಹುದಾದ ಘಟನೆಗಳ ವಿವರಗಳ ಸೇರಿಸುವುದರಿಂದ ಐತಿಹ್ಯಗಳೆ ಪುರಾಣಗಳಾಗಿರುತ್ತವೆ. ರಾಮಾಯಣ, ಮಹಾಭಾರತ, ಭಾಗವತ, ವೇದೋಪನಿಷತ್ತುಗಳ ಸೃಷ್ಟಿಯ ಹಿಂದಿನ ಮನೋಭಾವಗಳು ಇದಕ್ಕೆ ಪೂರಕವಾಗಿವೆ.

ಪುರಾಣಗಳು ಗ್ರಂಥ ರೂಪಕ್ಕೆ ಬರುವ ಮೊದಲು ಮೌಖಿಕ ಪರಂಪರೆಯ ಪುರಾಣಗಳಾಗಿದ್ದವು. ಪುರಾಣ ಕಥೆ ಹಾಗೂ ಪಾತ್ರಗಳನ್ನು ತಮ್ಮ ಊರಿಗೆ, ಊರಿನ ಸುತ್ತಮುತ್ತಲಿನ ಸ್ಥಳಗಳಿಗೆ ಸಮೀಕರಿಸಿಕೊಂಡು, ಊರಿನ ಮಹತ್ವ ಹೆಚ್ಚಿಸಿಕೊಳ್ಳುವಿಕೆ ಸ್ಥಳೀಯ ಪುರಾಣ ಸೃಷ್ಟಿಕರ್ತರ ಪ್ರತಿಭೆಯಾಗಿರುತ್ತದೆ.

‘ಸ್ಥಳಪುರಾಣ’ವನ್ನು ‘ಸ್ಥಳ ಮಹಾತ್ಮೆ’ಯೆಂದೂ ಕರೆಯಲಾಗಿದೆ. ಇದು ಪುರಾಣಸಂಬಂಧಿತ

ನಿರ್ದಿಷ್ಟತೆಯನ್ನೊಳಗೊಂಡಿರುವ ಸ್ಥಳನಾಮವಾಗಿದೆ. ಸ್ಥಳೀಯ ದೇವಾಲಯ, ಭೌಗೋಳಿಕ- ಪ್ರಾಕೃತಿಕ, ಸ್ಥಳೀಯರ ಆಚರಣೆಗಳು, ಪವಾಡಗಳನ್ನು ಗುರುತಿಸಿಕೊಳ್ಳುವಿಕೆ ಪುರಾಣ ಸಂಬಂಧಿತ ಸ್ಥಳನಾಮಗಳ ವಿಶಿಷ್ಟ (Specific) ಆಗಿರುತ್ತವೆ. ಅಸಂಭಾವ್ಯ ಘಟನೆಗಳನ್ನು ವಿವರಿಸುವ ಸ್ಥಳಪುರಾಣಗಳನು ಸ್ಥಳನಾಮಗಳಲ್ಲಿ ಗುರುತಿಸಬಹುದು. ''ಎಷ್ಟೋ ದೇವಾಲಯ ಕ್ಷೇತ್ರಗಳಿಗೆ ಸಂಬಂಧಪಟ್ಟ ಸ್ಥಳಪುರಾಣಗಳಲ್ಲಿ ಆ ಸ್ಥಳಗಳಿಗೆ ಆಯಾ ಹೆಸರು ಪ್ರಾಪ್ತವಾದುದರ ವಿವರಣೆಯೂ ಇದೆ. ಇಂತಹ ಐತಿಹ್ಯ (ಸ್ಥಳಪುರಾಣ)ಗಳಲ್ಲಿ ವ್ಯಕ್ತಿಗಳಿಗೂ ಪ್ರಾಧಾನ್ಯವಿದೆ. ಅವರಿಂದಲಾಗಿಯೇ ಹೆಚ್ಚಿನ ಕ್ಷೇತ್ರಗಳಿಗೆ ಹೆಸರು ಪ್ರಾಪ್ತವಾಗಿದೆ. ಇಲ್ಲಿ ನಂಬಲರ್ಹವಾದ ಅಸಂಭಾವ್ಯವೆನಿಸುವ ಪವಾಡಾದಿ ಘಟನೆಗಳಿರುವುದರಿಂದ ಇವು ಸ್ಥಳಕ್ಕೆ ಸಂಬಂಧಪಟ್ಟ ಐತಿಹ್ಯಗಳಾಗುಳಿಯದೆ ಪುರಾಣಗಳಾಗಿಬಿಡುತ್ತದೆ. ಆದುದರಿಂದಲೇ ಇಂಥವನ್ನು ಸ್ಥಳಪುರಾಣಗಳೆನ್ನುತ್ತಾರೆ.''[೨]

ಸ್ಥಳನಾಮಗಳಲ್ಲಿರುವ ಪೌರಾಣಿಕ ಅಂಶವನ್ನು ಗುರುತಿಸಬಹುದಾದರೂ, ಕೆಲವೊಮ್ಮೆ ಅದಕ್ಕೆ ಸಂಬಂಧಿಸಿದ ವಿವರಗಳು ದೊರೆಯುವುದಿಲ್ಲ. ಪುರಾಣ ಸಂಬಂಧಿತ ವಿಶಿಷ್ಟತೆ ಇರುವ ಸ್ಥಳನಾಮಗಳಲ್ಲಿ ಕಂಡುಬರುವ ವಿವರಗಳನ್ನು ವಿಶ್ಲೇಷಣೆ ಮಾಡದೆ ಒಪ್ಪಿಕೊಂಡಿರುವ ಸಾಧ್ಯತೆ ಇರುತ್ತದೆ. ಇಂತಹ ಸಂದರ್ಭದಲ್ಲಿ ಜನರಲ್ಲಿರುವ ನಂಬಿಕೆಯೇ ಮುಖ್ಯವಾಗಿದ್ದು ಇದು ಬದಲಾಗುವುದಿಲ್ಲ .

''ಸ್ಥಳ ಪುರಾಣಗಳು ಎಷ್ಟೋ ಸಂದರ್ಭಗಳಲ್ಲಿ ಈ ನಾಡಿನ ಪೂರ್ವಸಂಸ್ಕೃತಿ, ನಡೆವಳಿಕೆ, ಆಚಾರ - ವಿಚಾರಗಳ ಬಗ್ಗೆ ಬೆಳಕು ಚೆಲ್ಲುತ್ತದೆಂಬುವ ಅಂಶವನ್ನು ನಾವು ಅಲ್ಲಗಳೆಯುವಂತಿಲ್ಲ''[೮] ಸ್ಥಳನಾಮಗಳಲ್ಲಿ ರಾಮಾಯಣ, ಮಹಾಭಾರತ ಕೃತಿ ಸಂಬಂಧಿತ ಹಾಗೂ ಇತರೆ ದೈವ - ದೇವರ ಹೆಸರನ್ನು ಸೂಚಿಸುವ ಅಂಶಗಳನ್ನು ಗುರುತಿಸಬಹುದು . ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪುರಾಣ ಸಂಬಂಧಿತ ಸ್ಥಳನಾಮಗಳನ್ನು ಗುರುತಿಸಲಾಗಿದೆ. ಈ ಸ್ಥಳನಾಮಗಳಲ್ಲಿ ರಾಮಾಯಣ - ಮಹಾಭಾರತಕ್ಕೆ ಸಂಬಂಧಿತ ಹಾಗೂ ಇತರೆ ದೈವವಾಚಿ ಸ್ಥಳನಾಮಗಳನ್ನು ಗುರುತಿಸಬಹುದು. ಇಂತಹ ಸ್ಥಳನಾಮಗಳನ್ನು ವಿಶ್ಲೇಷಣೆ ಒಳಗು ಮಾಡಿದರೂ ಯಾವುದೇ ಅಂಶವೂ ಸ್ಪಷ್ಟವಾಗುವುದಿಲ್ಲ. ಊರಿನಲ್ಲಿರುವ ದೇವಾಲಯಗಳಿಂದಲೇ ಈ ಹೆಸರು ಬಂದಿರುವ ಸಾಧ್ಯತೆಯನ್ನು ಗುರುತಿಸಬಹುದು. ಕೆಲವು ಊರುಗಳಲ್ಲಿ ಕಂಡುಬರುವ ದೈವನಾಮ ಸೂಚಕ ದೇವಾಲಯಗಳಿಲ್ಲವಾದರೂ ಅಂತಹ ವಿಶಿಷ್ಟವನ್ನೊಳಗೊಂಡಿರುವ ಸ್ಥಳನಾಮಗಳಿವೆ.

**ಶಿವಗಂಗೆ - ನೆ**

ನೆಲಮಂಗಲ ತಾಲ್ಲೂಕಿನ 'ಶಿವಗಂಗೆ'ಯು ಐತಿಹಾಸಿಕ ಹಾಗೂ ಧಾರ್ಮಿಕವಾಗಿ ವಿಶಿಷ್ಟತೆಯನ್ನು ಪಡೆದಿದೆ. ಈ ಊರಿಗೆ 'ಗಂಗಪಟ್ಟಣ', 'ಕಕುದ್ಗಿರಿ', 'ಮಂದಾಕಿನಿ ಧರಾಚಲ', 'ಗಂಗಾಧರಾಚಲ', 'ಮಂದಾಕಿನೀ ಕ್ಷೇತ್ರ', ಏಕಶೃಂಗಾದ್ರಿ, ಪುಂಗವಾದ್ರಿ ಮುಂತಾದ ಹೆಸರುಗಳಿವೆ. ಮಲ್ಲಿಕಾರ್ಜುನ ಕವಿಯ ಪ್ರಕಾರ, ಏಕಸ್ತಂಭ ಶೈಲ, ವೃಷಭೇಂದ್ರ ಪರ್ವತ, ಜಾಳಾಂಧ್ರ ಪರ್ವತ ಹಾಗೂ ಕಕುದ್ಗಿರಿ ಎಂಬ ಹೆಸರುಗಳಿವೆ.

ಈಶ್ವರನ ಅಂತರಂಗ ಭಕ್ತನಾದ ನಂದಿಯು 'ಭಾಸುರಾಂಗನೆ' ಎಂಬ ಮಾಯೆಯಿಂದ ಮೋಹಕ್ಕೊಳಗಾದ. ಈ ಶಾಪದಿಂದ ಪಾರಾಗಲು ನಂದಿಯು, ನೆಲಕ್ಕೆ ಬೆನ್ನಿನ ಹಿಳಲೂರಿ (ಕಕುದ) ತಲೆಕೆಳಗಾಗಿ ನಿಂತು ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡನು. ಆದುದರಿಂದ ಸ್ಥಳಕ್ಕೆ 'ಕಕುದ್ಗಿರಿ' ಎಂಬ ಹೆಸರು ಬಂದಿದೆ ಎಂಬ ಪೌರಾಣಿಕ ಕಥೆಯೊಂದಿದೆ.

'ಕಣಾದ' ಎಂಬ ಋಷಿಯು ಶಿವನನ್ನು ಒಲಿಸಿಕೊಳ್ಳಲು ತಪಸ್ಸು ಮಾಡಿದ ಕ್ಷೇತ್ರವಾಗಿದೆಯೆಂಬ ಸ್ಥಳಪುರಾಣವೊಂದಿದೆ. ಪ್ರತಿನಿತ್ಯ ಒಂದು ಹನಿ ನೀರನ್ನು ಸೇವಿಸುತ್ತಾ, ಮಾಸಿಕವಾಗಿ ಆಹಾರವನ್ನು ಸೇವಿಸುತ್ತಾ, ಪಂಚಾಗ್ನಿ ನಡುವೆ ತಪಸ್ಸು ಮಾಡಿ, ಶಿವನನ್ನು ಮೆಚ್ಚಿಸಿ ಗಂಗೆಯನ್ನು ಭೂಮಿಗೆ ತಂದನೆಂದು ಪುರಾಣ ಹೇಳುತ್ತದೆ. ಏಕಪಾದದಲ್ಲಿ ನಿಂತು ಉಗ್ರವಾದ ತಪಸ್ಸು ಮಾಡಿದ್ದರಿಂದ, ಜ್ವಾಲೆಗಳು ಉಂಟಾಗಿ ಸ್ವರ್ಗವನ್ನು ತಾಕಿತು. ದೇವತೆಗಳು ಶಿವನ ಮೊರೆಹೊಕ್ಕಾಗ, ಶಿವ ಪ್ರತ್ಯಕ್ಷನಾದನು. ಶಿವನ ಜಟೆಯಿಂದ ಇಳಿಯುತ್ತಿದ್ದ ಗಂಗೆಯನ್ನು ನೋಡಿದ ಕಣಾದ ಮುನಿಯು, 'ಶಿವಾ-ಗಂಗಾ' ಎಂಬ ಉದ್ಗಾರ ಮಾಡಿ, ನಾಮಸ್ಮರಣೆ ಮಾಡಿದ. ಆಗ ಶಿವನು ಪ್ರತ್ಯಕ್ಷನಾಗಿ, ಈ ಸ್ಥಳವು 'ಶಿವಗಂಗಾ' ಕ್ಷೇತ್ರವಾಗಲಿ ಎಂದು ವರ ನೀಡಿದ. ಅಂದಿನಿಂದ ಈ ಊರಿಗೆ 'ಶಿವಗಂಗೆ' ಎಂಬ ಹೆಸರು ಪ್ರಚಲಿತವಾಯಿತೆಂದು ಮತ್ತೊಂದು ಪುರಾಣಕತೆಯಿದೆ.

ಗಿರಿಜಾ ಕಲ್ಯಾಣದ ಸಂದರ್ಭದಲ್ಲಿ ಉತ್ತರದ ಹಿಮಾಲಯ ಪರ್ವತದಲ್ಲಿ , ಗಿರಿಜಾ ಕಲ್ಯಾಣ ನೋಡಲು, ದೇವಾನುದೇವತೆಗಳು ಒಂದೇ ಕಡೆ ನೆರೆದರು. ಅವರುಗಳ ಉಪಸ್ಥಿತಿಯಿಂದ ಭೂಮಿಯ ತೂಕ ಪಲ್ಲಟವಾಯಿತು. ಈ ಪಲ್ಲಟವನ್ನು ತಪ್ಪಿಸುವ ಉದ್ದೇಶದಿಂದ ಬ್ರಹ್ಮ ಹಾಗೂ ವಿಷ್ಣು ಆಲೋಚಿಸಿ, ಅಗಸ್ತ್ಯ ಮಹರ್ಷಿಯನ್ನು ದಕ್ಷಿಣ ಭಾಗಕ್ಕೆ, ಅಂದರೆ ಈ ಪ್ರದೇಶದಲ್ಲಿ ನೆಲೆಸುವಂತೆ ಸೂಚಿಸಿದರು. ಅವರ ಸೂಚನೆಯಂತೆ ಬಂದು ನೆಲೆಸಿದ ಅಗಸ್ತ್ಯರು, ಇಲ್ಲಿಯೂ ಗಿರಿಜಾಕಲ್ಯಾಣವನ್ನು ಆಚರಿಸಬೇಕೆಂದಾಗ ಶಿವನು ಗಂಗಾಧರೇಶ್ವರ ರೂಪದಲ್ಲಿ ಪ್ರತ್ಯಕ್ಷನಾದ. ಈ ಉತ್ಸವಕ್ಕೆ ಗಂಗೆಯು ಉದ್ಭವಿಸಲೆಂದು ಅಗಸ್ತ್ಯರು ಪ್ರಾರ್ಥಿಸಿದರು. ಅಲ್ಲಿನ ಕಂಬದ ಅಡಿಯಿಂದ ಬಂದ ಗಂಗೆಯಿಂದ ಅಭಿಷೇಕ ಮಾಡಿ ಕಲ್ಯಾಣೋತ್ಸವ ಮಾಡಿ ತೋರಿಸಿದ ಶಿವ ಮತ್ತು ಗಂಗೆ ಕಾಣಿಸಿಕೊಂಡದ್ದರಿಂದ, 'ಶಿವಗಂಗೆ' ಎಂಬ ಹೆಸರು ಬಂದಿತೆಂಬ ಸ್ಥಳಪುರಾಣವನ್ನು ಗುರುತಿಸಬಹುದು.

### ಬಿಳಿಕಲ್ ಬೆಟ್ಟ - ಕ

ಬಿಳಿಕಲ್ ಬೆಟ್ಟ - ಎಂಬುದು ನಿರ್ವಸಿತ ಸ್ಥಳನಾಮವಾಗಿದೆ ಈ ಬೆಟ್ಟದಲ್ಲಿ ಶ್ರೀರಂಗನಾಥಸ್ವಾಮಿಯ ದೇವಾಲಯವಿದ್ದು ಹುಲಿಯೊಂದು ಈ ದೇವರ ವಾಹನವಾಗಿತ್ತೆಂದೂ, ಸ್ವಯಂ ರಂಗನಾಥ ಸ್ವಾಮಿಯೇ ಹುಲಿಯೆಂದೂ ಸ್ಥಳಪುರಾಣ ವಿದೆ. ಇದಕ್ಕೆ ಸಂಬಂಧಿಸಿದಂತೆ ಮೂರು ರೀತಿಯ ಸ್ಥಳಮಹಾತ್ಮೆಗಳಿದ್ದು ಸ್ಥಳ ನಿಷ್ಪನ್ನವನ್ನು ಸೂಚಿಸುವುದಿಲ್ಲ.

ಬಿಳಿಕಲ್ ಬೆಟ್ಟವು ಕಾಡಿನಿಂದಾವೃತ್ತವಾಗಿದ್ದರಿಂದ ಬೇಟೆಯಾಡಲು ಬಂದ ಬೇಟೆಗಾರನನ್ನು ನೋಡಿದ ಹುಲಿಹಿಂಡು ತಪ್ಪಿಸಿಕೊಂಡಿತು. ಆಗ ಹುಲಿ ಮರಿಯೊಂದು ಮೇಯುತ್ತಿದ್ದ ದನಗಳ ಹಿಂಡಿನಲ್ಲಿ ಸೇರಿಕೊಂಡು ತಪ್ಪಿಸಿಕೊಂಡಿತು. ಅದು ದೊಡ್ಡದಾಗುವವರೆಗೂ ದನಗಳ ಹಿಂಡಿನಲ್ಲೆ ಬೆಳೆಯಿತು. ಈ ಸಮಯದಲ್ಲಿ ಹುಲಿಮರಿಯನ್ನು ದನಗಳ ಗುಂಪು ರಕ್ಷಿಸಿ ಪೋಷಿಸಿತು. ದೊಡ್ಡದಾದ ಮೇಲೆ ತಾನು ಕಾಡಿಗೆ ಹಿಂದಿರುಗಿ ಹೊರಡುವಾಗ, ದನಗಳ ಉಪಕಾರವನ್ನು ಸ್ಮರಿಸಿ, ಕಷ್ಟ ಬಂದಾಗ ನೆನೆಸಿಕೊಂಡಲ್ಲಿ ಕೈಲಾದ ಸಹಾಯ ಮಾಡುವುದಾಗಿ ತಿಳಿಸಿತು. ಆ ಹುಲಿಯೇ ಶ್ರೀರಂಗನಾಥನ ವಾಹನವಾಗಿದೆಯೆಂಬ ನಂಬಿಕೆಯಿದೆ. ಈ ಕಾರಣದಿಂದಾಗಿಯೇ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತಿದ್ದು ದನಕರುಗಳಿಗೆ ಏನೂ ರೋಗಗಳು ಬರದಂತೆ, ತಮಗೆ ಏನೂ ಕಷ್ಟಗಳು ಬರದಂತೆ ಪೂಜೆಗಳನ್ನು

ಸಲ್ಲಿಸುತ್ತಾರೆ.

ಬೈರೇದೇವರ ಗುಡ್ಡ ಬಿಳಿಕಲ್ ಬೆಟ್ಟದ ಪ್ರದೇಶದಲ್ಲಿಯೇ ಇರುವ ಮತ್ತೊಂದು ನಿರ್ವಸಿತ ಪ್ರದೇಶವಾಗಿದ್ದು ಇಲ್ಲಿನ ಪೂಜಾರಿಯೊಬ್ಬನು ರಾತ್ರಿಯ ಹೊತ್ತು ಹೆಂಡ, ಮಾಂಸವನ್ನು ಸೇವಿಸುತ್ತಿದ್ದನು. ಈ ರೀತಿ ಇತರರ ಕಣ್ತಪ್ಪಿಸಿ ದುಶ್ಚಟಕ್ಕೆ ಬಲಿಯಾಗಿದ್ದ ಪೂಜಾರಿಯು, ಒಮ್ಮೆ ಅಧಿಕವಾದ ಮದ್ಯ ಸೇವನೆಯಿಂದ, ಕಾಡಿನ ದಾರಿಯಲ್ಲಿಯೇ ಎಚ್ಚರ ತಪ್ಪಿ ಬಿದ್ದನು. ಅವನನ್ನು ರಕ್ಷಿಸುವ ಸಲುವಾಗಿ ರಾತ್ರಿಯಿಡೀ ಹುಲಿಯು ಕಾವಲಿದ್ದು ಅವನಿಗೆ ಎಚ್ಚರಿಕೆಯಾದ ನಂತರ ಹೊರಡುತ್ತದೆ. ಅದನ್ನು ನೋಡಿದ ಪೂಜಾರಿಗೆ ತನ್ನ ತಪ್ಪಿನ ಅರಿವಾಗಿ, ಇನ್ನು ಮುಂದೆ ಆ ರೀತಿ ಮಾಡುವುದಿಲ್ಲವೆಂದು ಶ್ರೀರಂಗನಾಥ ಸ್ವಾಮಿಯ ಬಳಿ ಕ್ಷಮೆಯಾಚಿಸಿದನು.

ಬಿಳಿಕಲ್ ಬೆಟ್ಟದಲ್ಲಿಯೇ ವಾಸವಾಗಿದ್ದ ಪೂಜಾರಿಯ ನಿಧನದ ನಂತರ ಆತನ ಪತ್ನಿಯು ಪೂಜೆಯನ್ನು ಮುಂದುವರೆಸುತ್ತಾಳೆ. ಒಂದು ದಿನ ರಾತ್ರಿ ಕಳ್ಳರು, ಹೊರಗಿನಿಂದ ಚಿಲಕ ಹಾಕಿ ಕಳ್ಳತನ ಮಾಡಲು ಬಂದಾಗ ಪೂಜಾರಿಯ ಪತ್ನಿಯು 'ರಂಗಾ, ಬಾ' ಎಂದು ಕರೆದ ಕೂಡಲೇ, ಹುಲಿಯವೇಷದ ಶ್ರೀರಂಗನಾಥ ಸ್ವಾಮಿಯು ಮನೆಯ ಬಾಗಿಲಿನಲ್ಲಿ ಕುಳಿತನಂತೆ. ಇದರಿಂದ ಗಾಬರಿಗೊಂಡ ನಂತರ ಕಳ್ಳರು ಓಡಿಹೋದರು.

ಮೇಲಿನ ಪುರಾಣ ಸಂಬಂಧಿತ ಕಥೆಗಳು, ಸ್ಥಳನಾಮಕ್ಕೆ ನೇರವಾಗಿ ಸಂಬಂಧಪಡದಿದ್ದರೂ, ಆ ಸ್ಥಳಪುರಾಣವನ್ನು ಒಳಗೊಂಡಿದೆ. ಶ್ರೀರಂಗನಾಥ ಸ್ವಾಮಿಯೇ ಹುಲಿಯಾಗಿದ್ದನೆಂಬ ನಂಬಿಕೆ ಜನರಲ್ಲಿದೆ.

### ಕಣಿವೆ ಮಾದೇಶ್ವರ - ಕ

ಕನಕಪುರ ತಾಲ್ಲೂಕಿನಲ್ಲಿರುವ ತಟ್ಟೇಕೆರೆ ಊರಿಗೆ ಹೊಂದಿಕೊಂಡಿರುವ 'ಕಣಿವೆ ಮಾದೇಶ್ವರ' ಎಂಬುದು ನಿರ್ವಸಿತ ಸ್ಥಳನಾಮವಾಗಿದೆ. ಇರುಳಿಗರ ಜನಾಂಗದ ಕಾಳಪ್ಪನು, ಗೆಡ್ಡೆಗೆಣಸುಗಳನ್ನು ತರಲು ಕಾಡಿಗೆ ಹೋಗುತ್ತಿದ್ದನು ಈ ರೀತಿಯ ಜೀವನ ನಡೆಸುತ್ತಿದ್ದ ಕಾಳಪ್ಪ ಒಮ್ಮೆ ಯಾವುದೇ ಸ್ಥಳದಲ್ಲಿ ನೆಲ ಅಗೆದರೂ ಗೆಡ್ಡೆ ಗೆಣಸು ಸಿಗದೆ ಕಪ್ಪುಕಲ್ಲು ಇರುತ್ತಿತ್ತಂತೆ. ಸುಮಾರು ಎರಡು ತಿಂಗಳು ಇದೇ ರೀತಿ ನಡೆಯಿತಂತೆ. ಇದರಿಂದ ಬೇಸತ್ತ ಕಾಳಪ್ಪ, ತನ್ನ ತಂದೆ ಬೋಳಪ್ಪನ ಬಳಿ ಈ ವಿಷಯ ಪ್ರಸ್ತಾಪಿಸಿದನಂತೆ. ಅದಕ್ಕೆ ಬೋಳಪ್ಪ ತನ್ನ ಮಗನಿಗೆ ಸಲಹೆ ನೀಡಿ, ಬೆಳಗ್ಗೆ ಸ್ನಾನ ಮಾಡಿ, ಮಡಿಯಿಂದ ಹೋಗಿ ತಾನು ನೆಲ ಅಗೆಯುತ್ತಿದ್ದ ಸ್ಥಳದಲ್ಲಿ ಧ್ಯಾನದ ಸ್ಥಿತಿಯಲ್ಲಿ ಕುಳಿತು, "ಈ ರೀತಿ ಕಲ್ಲಾಗಿರುವ ನೀನು ದೇವರೋ? ದೆವ್ವವೋ? ತಿಳಿಯದು. ನೀನು ದೇವರಾಗಿದ್ದರೆ ನನ್ನ ಅಂಗೈಯಲ್ಲಿ ಕುಳಿತುಕೊ" ಎಂದು ಪ್ರಾರ್ಥಿಸಿದ. ಕೂಡಲೇ ಕಪ್ಪುಕಲ್ಲು ಕಾಳಪ್ಪನ ಅಂಗೈಯಲ್ಲಿ ಕುಳಿತುಕೊಂಡಿತೆಂದೂ, ಅದನ್ನೇ, ಕಟ್ಟೆಕೆರೆಯ ಪ್ರದೇಶದ ಕಣಿವೇ ಪ್ರದೇಶದಲ್ಲಿ ಪ್ರತಿಷ್ಠಾಪನೆ ಮಾಡಿದರು. ಆ ಕಪ್ಪುಕಲ್ಲು ಮಾದೇಶ್ವರ ದೇವರೆಂದೂ, ಕಣಿವೆಯಲ್ಲಿ ದೇವಾಲಯ ಕಟ್ಟಿ ಪ್ರತಿಷ್ಠಾಪನೆ ಮಾಡಿದ್ದರಿಂದ 'ಕಣಿವೆ ಮಾದೇಶ್ವರ' ಎಂಬ ಹೆಸರಿದೆಯೆಂದು ಸ್ಥಳಪುರಾಣ ಹೇಳುತ್ತದೆ. ಈಗ ದೇವಾಲಯವನ್ನು ಸ್ಥಳಾಂತರಗೊಳಿಸಿದ್ದು ಅದೇ ಹೆಸರು ಮುಂದುವರೆದಿದೆ.

### ಶಿವರಾಮಗಿರಿ - ರಾ

ರಾಮನಗರ ತಾಲ್ಲೂಕಿನ ಶಿವರಾಮಗಿರಿಯನ್ನು 'ರಾಮದೇವರಬೆಟ್ಟ' ಎಂದೂ ಕರೆಯಲಾಗುತ್ತದೆ. ಈ ಬೆಟ್ಟದಲ್ಲಿ ರಾಮ-ಲಕ್ಷ್ಮಣರು ಸುಗ್ರೀವನ ಭುಜಾರೋಹಿಗಳಾಗಿ ಬಂದು 'ರಾಮತೀರ್ಥ' ಉದ್ಭವಿಸುವಂತೆ ಮಾಡಿ

ಆ ಮೂಲಕ ಶುಚಿರ್ಭೂತರಾಗಿ 'ರಾಮತೀರ್ಥ' ಉದ್ಭವಿಸುವಂತೆ ಮಾಡಿ, ಆ ಮೂಲಕ ಶುಚಿರ್ಭೂತರಾಗಿ 'ರಾಮೇಶ್ವರ ಲಿಂಗ' ವನ್ನು ಪೂಜಿಸಿದರೆಂಬ ಸ್ಥಳಪುರಾಣವಿದೆ. ರಾವಣನ ಸಂಹಾರದ ನಂತರ, ರಾಮನ ವಿಗ್ರಹವನ್ನು ಪಡೆದ ಸುಗ್ರೀವನು ಈ ಮಾರ್ಗದಲ್ಲಿ ಬರುತ್ತಿದ್ದಾಗ, ಸೂಕರಾಸುರ ಎಂಬ ರಾಕ್ಷಸನು ಯಜ್ಞಯಾಗಾದಿಗಳಿಗೆ ತೊಂದರೆ ನೀಡುತ್ತಿದ್ದನು. ನಾರದನ ಸಲಹೆಯ ಮೇರೆಗೆ ಸುಗ್ರೀವನು ಈ ರಾಕ್ಷಸನನ್ನು ಸಂಹರಿಸಿದನು. ಯುದ್ಧ ಮಾಡುವ ಸಂದರ್ಭದಲ್ಲಿ ರಾಮನ ವಿಗ್ರಹವನ್ನೂ ಈ ಭಾಗದಲ್ಲಿನ ನೆಲದ ಮೇಲಿಟ್ಟನು. ಯುದ್ಧದ ನಂತರ ವಿಗ್ರಹವನ್ನು ಎತ್ತಲು ಪ್ರಯತ್ನಿಸಿದರೆ ಸಾಧ್ಯವಾಗಲಿಲ್ಲ. ಆ ಸಂದರ್ಭದಲ್ಲಿ ಶ್ರೀರಾಮನೇ', 'ಈ ಬೆಟ್ಟವೇ ನನಗೆ ಕಿಷ್ಕಿಂದೆ. ಇಲ್ಲಿಯೇ ದೇವಾಲಯ ಕಟ್ಟಿಸು' ಎಂದು ಆದೇಶಿಸಿದ್ದರಿಂದ, ಸುಗ್ರೀವನು ಇಲ್ಲಿಯೇ ದೇವರನ್ನು ಪ್ರತಿಷ್ಠಾಪಿಸಿದನೆಂಬ ಪುರಾಣವಿದೆ.

---

**ಅಡಿ ಟಿಪ್ಪಣಿಗಳು**

1. ಡಾ। ಶಂಬಾ ಜೋಶಿ, ಎಡೆಗಳು ಹೇಳುವ ಕಂನಾಡ ಕತೆ, ಪುಟ 6-7
2. ಡಾ। ಜಮುನ ಎಂ., (ಪ್ರಧಾನ ಸಂಪಾದಕರು) ಬೆಂಗಳೂರಿನ ಬಚ್ಚೆರುಗಳು, ಪ್ರಸಾರಾಂಗ ಬೆಂ.ವಿ.ವಿ. ಪುಟ
3. ಕನ್ನಡ ವಿಶ್ವಕೋಶ, ಸಂಪುಟ-3, ಪುಟ 252
4. ಡಾ। ಸುಬ್ಬಣ್ಣ ರೈ ಎ., ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು ಪುಟ 10
5. ಅದೇ ೯......, ಪುಟ 11
6. ಡಾ। ಜವರೇಗೌಡ ದೇ.,ಸ್ಥಳನಾಮ ವ್ಯಾಸಂಗ, ಪುಟ 111
7. ಡಾ। ಗೋಪಾಲಕೃಷ್ಣ ವಿ. ಸ್ಥಳನಾಮ ಅಧ್ಯಯನಗಳು, ಪುಟ 16
8. ಡಾ। ಆರ್ಯಮಣಿಪಾಲ, ಹೆಸರಿನಲ್ಲೇನಿದೆ ?, ಪುಟ 16
9. ಡಾ। ಜವರೇಗೌಡ ದೇ., ಜಾನಪದ ಅಧ್ಯನದ (1985) ಪುಟ 16
10. ವಸಂತ ಕುಮಾರ್ ತಾಳ್ತಜೆ, ಸಾರಸ, (1985) ಪುಟ 121
11. ಪರಮ ಶಿವಯ್ಯ ಜೀ.ಶಂ. ಅವಲೋಕನ (ಕನ್ನಡ - ಸಂಸ್ಕೃತಿ ಇಲಾಖೆ ಪ್ರಕಟಣೆ ) ಪುಟ 206
12. ಡಾ। ಸುಬ್ಬಣ್ಣ ರೈ ಎ., ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಪುಟ 33
13. ಡಾ। ಲಕ್ಷಪ್ಪ ಗೌಡ ಎಚ್.ಜೆ., ಉದ್ಧೃತ, ಜಾನಪದ ಕೈಪಿಡಿ, ಪುಟ 28
14. ಡಾ। ಸುಬ್ಬಣ್ಣ ರೈ ಎ., ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು , ಪುಟ 32
15. ಅದೇ ೯......, ಪುಟ 36
16. ನಾಗರತ್ನ ಟಿ.ಎನ್. ಕನಕದಾಸ, ಕನ್ನಡ ಸಾಹಿತ್ಯ ಅಕಾಡೆಮಿ, ಪುಟ 95
17. ಬೈರೇಗೌಡ ಎಂ. ಅರ್ಕಾವತಿ (ಸಂಪಾದಿತ ಕೃತಿ) ಕ.ಸಾ.ಪ. ಪುಟ 154
18. ಡಾ। ಜವರೇಗೌಡ ದೇ., ಸ್ಥಳನಾಮ ವ್ಯಾಸಂಗ, ಪುಟ 22
19. ಡಾ। ಶಂಬಾ ಜೋಶಿ, ಎಡೆಗಳು ಹೇಳುವ ಕಂನಾಡ ಕತೆ, ಪುಟ 6-7
20. ಡಾ। ಜವರೇಗೌಡ ದೇ.,ಸ್ಥಳನಾಮ ವ್ಯಾಸಂಗ, ಪುಟ 22
21. ಡಾ। ಸುಬ್ಬಣ್ಣ ರೈ ಎ., ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು ಪುಟ 26
22. ಅದೇ ......, ಪುಟ 27
23. ಅದೇ ......, ಪುಟ 49

# ೯

# ಸಮಾರೋಪ

## ೯.೧ ಅಧ್ಯಯನದ ಒಳನೋಟ

ನಾಮಾಧ್ಯಯನವು ಇತರ ಶಾಸ್ತ್ರಗಳಂತೆ ವೈಜ್ಞಾನಿಕ ಹಾಗೂ ಶಾಸ್ತ್ರೀಯ ನೆಲೆಯನ್ನು ಪಡೆದಿದೆ. ಒಂದು ಕಾಲದ ಸಂಸ್ಕೃತಿಯನ್ನು ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಜೀವನದ ರೀತಿಯನ್ನು ಅರಿಯುವುದಕ್ಕೆ ಇದು ಸಹಾಯಕವಾಗಿದೆ. "ಸ್ಥಳ ನಾಮಾಧ್ಯಯನವು ಭಾಷಾ ವಿಜ್ಞಾನ, ಇತಿಹಾಸ, ಪುರಾತತ್ವ ಶಾಸ್ತ್ರ, ಮನಶಾಸ್ತ್ರ, ಭೂಗೋಳ, ಜಾನಪದ, ಸಸ್ಯಶಾಸ್ತ್ರ ಇತ್ಯಾದಿಗಳಿಂದ ಸಹಾಯ ಪಡೆದು ಅವುಗಳಿಗೂ ಸಹಾಯ ನೀಡಬಲ್ಲ ಒಂದು ಶಾಸ್ತ್ರೀಯ ವಿಷಯ".[೧]

ಮಾನವನ ಬುದ್ಧಿಶಕ್ತಿಗೆ ನಿದರ್ಶನವೆಂದರೆ, ತಾನು ಒಂದೆಡೆ ನೆಲೆಯೂರಿ ತನಗೆ ಬೇಕಾದಂತೆ ಜೀವಿಸಲು ಹಾಗೂ ಬೇಕಾದ್ದನ್ನು ಸೃಷ್ಟಿಸಿಕೊಳ್ಳುವುದನ್ನು ಕಲಿತದ್ದು, ತಮ್ಮ ನೆಲೆಗಳನ್ನು ಗುರುತಿಸಿಕೊಳ್ಳುವಿಕೆಗಾಗಿ ಸಾಪೇಕ್ಷವಾದ, ಸಾಂಕೇತಿಕವಾದ ವಸ್ತು ಅಥವಾ ಪ್ರಾಕೃತಿಕ ಅಂಶಗಳ ಬಳಕೆಮಾಡಿರುವುದು. ಇದು ಸಹಜವಾದ ಕ್ರಿಯೆಯಾಗಿದ್ದು, ಉದ್ದೇಶಪೂರ್ವಕವಾಗಿ ಸೃಷ್ಟಿಯಾದುದಲ್ಲ, ತನ್ನಿಂದ ತಾನೆ ಸೃಷ್ಟಿಯಾಗಿ ಪ್ರಚಾರದಲ್ಲಿ ಬರುತ್ತಿತ್ತು. ಇಂತಹ ಸಂದರ್ಭದಲ್ಲಿ ಸ್ಥಳೀಯ ಭಾಷೆಯದೇ ಪ್ರಾಬಲ್ಯ. ನಂತರದಲ್ಲಿ ಇದನ್ನು ಬದಲಾಯಿಸಲು ಪ್ರಯತ್ನಪಟ್ಟರೂ ಬಹಳಷ್ಟು ಸಂದರ್ಭದಲ್ಲಿ ವಿಫಲವಾಗುತ್ತಿತ್ತು.

ಸ್ಥಳನಾಮಗಳ ಸೃಷ್ಟಿಯನ್ನು ಗಮನಿಸಿದಾಗ, ಪ್ರಾರಂಭದಲ್ಲಿ ಬಳಕೆಯಾಗಿರುವ ವಿಶಿಷ್ಟಗಳು ಪ್ರಾಕೃತಿಕ ಹಾಗೂ ಭೌಗೋಳಿಕ ಅಂಶಗಳನ್ನು ಪ್ರತಿನಿಧಿಸುತ್ತವೆ. ಬೆಟ್ಟ, ಗುಡ್ಡ, ನದಿ, ಮರಗಳು, ನೀರು ನಿಂತಿರುವ ಹಳ್ಳ, ಮುಂತಾದ ಪ್ರಾಕೃತಿಕ ವೈಲಕ್ಷಣಗಳು ವಿಶಿಷ್ಟಗಳಲ್ಲಿ ಸೇರಿವೆ. ಈ ವೈಲಕ್ಷಣಗಳನ್ನು ಸೂಚಿಸುವ ಭಾಷೆಗಳಲ್ಲಿ ವೈವಿಧ್ಯತೆ ಇದ್ದಾಗ, ಅಲ್ಲಿನ ಉಪಭಾಷೆಯ ಅಂಶಗಳೇ ಬಳಕೆಯಾಗಿರುತ್ತವೆ. ಶಿಷ್ಟಭಾಷೆ ಬಳಕೆಯಾಗಿರುವುದು ವಿದ್ಯಾವಂತ ಸಮುದಾಯದಲ್ಲಿ ಹಾಗೂ ಬರವಣಿಗೆಗಳಲ್ಲಿ, ಉಳಿದಂತೆ ಗ್ರಾಮೀಣ ಆಡುಮಾತಿನ ಪದಗಳೇ ಬಳಕೆಯಾಗಿವೆ.

ಸ್ಥಳನಾಮಗಳಲ್ಲಿ ಗಮನಿಸಬಹುದಾದ ಮತ್ತೊಂದು ಮುಖ್ಯ ಅಂಶವೆಂದರೆ, ನಿರ್ದಿಷ್ಟ ಭೂಪ್ರದೇಶವು ನೀರಿನಿಂದ ಆವೃತವಾಗಿದ್ದರೆ ಅಥವಾ ನೀರಿನ ಒರತೆಗಳು ಹೆಚ್ಚಾಗಿದ್ದರೆ ಜಲವಾಚಿ ಸೂಚಕ ಸ್ಥಳನಾಮಗಳು ಕಂಡುಬರುತ್ತವೆ.

---

೧ ಡಾ। ಚಿದಾನಂದಮೂರ್ತಿ ಎಂ., ಕರ್ನಾಟಕ ಸ್ಥಳನಾಮಗಳು, ವಾಗರ್ಥ, ಪುಟ ೯೨

ಬೆಟ್ಟ-ಗುಡ್ಡ ಎತ್ತರದ ಭೂಪ್ರದೇಶವಾಗಿದ್ದರೆ ವಿಶಿಷ್ಟ ಹಾಗೂ ವಾರ್ಗಿಕಗಳು ಇದೇ ನಿರ್ದಿಷ್ಟವನ್ನು ಒಳಗೊಂಡಿರುತ್ತವೆ. ಆಯಾ ಪ್ರದೇಶದ ವಿಶಿಷ್ಟತೆಯನ್ನು ಬಿಂಬಿಸುವುದೇ ಸ್ಥಳನಾಮದ ಮುಖ್ಯ ಗುಣವಾಗಿದೆ. ನೆಲ, ಜಲ, ಬೆಟ್ಟ ಗಿಡಮರಗಳು ವಿಶಿಷ್ಟವಾಗಿ ಬಳಕೆಯಾಗಿದ್ದು, ಕೆಲವೊಮ್ಮೆ ಉತ್ಪ್ರೇಕ್ಷೆಯನ್ನೂ ಸ್ಥಳನಾಮಗಳು ಒಳಗೊಂಡಿವೆ. ಕೆರೆಯು - ಸಮುದ್ರ ಅಥವಾ ಸಾಗರವೆಂದು ಉತ್ಪ್ರೇಕ್ಷೆಗೊಂಡು ವಾರ್ಗಿಕಗಳಾಗಿ ಬಳಕೆಯಾಗಿದೆ. ಭೌಗೋಳಿಕ ವೈವಿಧ್ಯತೆ ಅರಿಯಲು, ಗಡಿಗಳನ್ನು ಗುರುತಿಸಲು ಸ್ಥಳನಾಮಗಳು ಸಹಾಯಕವಾಗಿರುತ್ತವೆ.

ಭೌಗೋಳಿಕ ವಿಶ್ಲೇಷಣೆಗೆ ಸಹಾಯಕವಾಗುವ ಸ್ಥಳನಾಮಗಳು ಇತಿಹಾಸ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡುತ್ತವೆ. ರಾಜಕೀಯ ಸ್ಥಿತಿಗತಿಗಳನ್ನು ಅರಿಯಲು, ಒಂದು ಸಂಸ್ಕೃತಿಯಲ್ಲಿ ಕಂಡುಬರುವ ದೈವ, ವ್ಯಕ್ತಿ, ಜಾತಿ, ಧರ್ಮ, ವೃತ್ತಿ, ಪ್ರಾಣಿ, ಪಕ್ಷಿ, ಆಚರಣೆ, ಜಾತ್ರೆ ಮುಂತಾದ ವಿಶಿಷ್ಟಗಳನ್ನು ಸ್ಥಳನಾಮಗಳು ಒಳಗೊಂಡಿವೆ.

ಸ್ಥಳನಾಮಗಳಲ್ಲಿ ಗುರುತಿಸಬಹುದಾದ ಅತ್ಯಂತ ಮುಖ್ಯವಾದ ಮತ್ತೊಂದು ಅಂಶವೆಂದರೆ ಜಾತಿ ಮತ್ತು ವೃತ್ತಿಗಳು. ಹಿಂದೆ ಜಾತಿ ಮತ್ತು ವೃತ್ತಿಗಳು ಪರಸ್ಪರ ಸಂಬಂಧಿತವಾಗಿದ್ದವು. ಆಧುನಿಕ ಕಾಲದಲ್ಲಿ ಇವೆರಡಕ್ಕೂ ನೇರ ಸಂಬಂದವಿಲ್ಲ. ಹಿಂದೆ ವೃತ್ತಿಗನುಸಾರವಾಗಿ ಜಾತಿಯನ್ನು ಗುರುತಿಸಲಾಗುತ್ತಿತ್ತು. ನಿರ್ದಿಷ್ಟ ಜನಾಂಗ ಈ ವೃತ್ತಿಯನ್ನು ಮಾಡುತ್ತಿದ್ದುದು ಸಮಾಜದಲ್ಲಿ ಕಾಣಬಹುದಿತ್ತು. ಇವರು ಪರಸ್ಪರ ಅವಲಂಬಿಗಳಾಗಿರುತ್ತಿದ್ದರು. ಇವರ ಮೂಲಕವೇ ಒಂದು ಸ್ಥಳವನ್ನು ಗುರುತಿಸುವುದೂ ಸಹಜವಾಗಿಯೇ ಬಳಕೆಗೆ ಬಂದಿದೆ.

ದೇವರು ಮತ್ತು ಧರ್ಮ ಸಮಾಜದಲ್ಲಿದ್ದ ಮತ್ತೊಂದು ಸಾಂಸ್ಕೃತಿಕ ಅಂಶವಾಗಿದೆ. ಮಾನವನ ನಿಯಂತ್ರಣಕ್ಕೆ ಸಿಗದಿರುವ, ಇಡೀ ವಿಶ್ವವನ್ನು ನಿಯಂತ್ರಿಸುವ ಶಕ್ತಿಯನ್ನು 'ದೇವರು' ಎನ್ನುವ ವಿಶಿಷ್ಟ ಪರಿಕಲ್ಪನೆಯನ್ನು ಸೃಷ್ಟಿಸಿಕೊಂಡನು. ಪ್ರಕೃತಿಯಲ್ಲಿಯೂ ಈ ಅಂಶವನ್ನು ಕಂಡುಕೊಂಡ ಮಾನವ ಅನೇಕ ಆಕಾರಗಳ ಮೂಲಕ, ಪುರಾಣಗಳ ಮೂಲಕ ದೇವರ ಶಕ್ತಿಯನ್ನು ಆರಾಧಿಸತೊಡಗಿದನು. ದೈವಕ್ಕೆ ಮಹತ್ವ ನೀಡುವ ದೃಷ್ಟಿಯಿಂದ ಅನೇಕ ದೈವನಾಮಗಳನ್ನು ವ್ಯಕ್ತಿಗಳಿಗೆ, ಸ್ಥಳಗಳಿಗೆ ನೀಡಿದನು. ದೈವದ ಬಗೆಗಿನ ಭಯ-ಭಕ್ತಿ ಇದಕ್ಕೆ ಕಾರಣವಾಗಿದ್ದು , ಸ್ಥಳನಾಮಗಳಲ್ಲಿ ದೈವವಾಚಿ ವಿಶಿಷ್ಟಾಂಶಗಳನ್ನು ಗುರುತಿಸಬಹುದು. ಇಂತಹ ಸ್ಥಳನಾಮವು ಆ ಊರಿನಲ್ಲಿನ ದೇವಾಲಯ ಅಥವಾ ಸ್ಥಳನಾಮ ನಿಷ್ಪನ್ನಕ್ಕೆ ಸಂಬಂಧಿಸಿದಂತೆ ಐತಿಹ್ಯ, ಕಟ್ಟುಕಥೆ ಅಥವಾ ಪುರಾಣವನ್ನು ಒಳಗೊಂಡಿರುತ್ತವೆ. ಹೀಗೆ ಧರ್ಮ ಸೂಚಿಸುವ ಅಂಶಗಳನ್ನು ಸ್ಥಳನಾಮಗಳಲ್ಲಿ ಗುರುತಿಸಬಹುದು. ಅನಕ್ಷರಸ್ಥ ಸಮುದಾಯಕ್ಕೆ ಬೇಕಾದ ಮಾರ್ಗದರ್ಶನ, ಧಾರ್ಮಿಕ ಆಚರಣೆಗೆ ಬೇಕಾದ ಸಹಕಾರವನ್ನು ಸಮಾಜದಲ್ಲಿನ ಮೇಲ್ಜಾತಿಯ ಬ್ರಾಹ್ಮಣ ಸಮುದಾಯ ಮಾಡುತ್ತಿತ್ತು. ಈ ನಂಬಿಕೆಗಳು ಹಾಗೂ ಆಚರಣೆಗಳು ಆದುನಿಕ ಕಾಲದಲ್ಲಿಯೂ ಇರುವುದನ್ನು ಕಾಣಬಹುದು. ಜನರಿಗೆ ಬೇಕಾದ ಆರ್ಥಿಕ ಸಹಕಾರ, ಇತರೇ ವಸ್ತುಗಳನ್ನು ಒದಗಿಸುವುದಕ್ಕೆ ವೈಶ್ಯ ಸಮುದಾಯ, ಸಮಾಜದಲ್ಲಿ ಶಿಸ್ತನ್ನು ಕಾಪಾಡಲು, ಪರಸ್ಪರ ಸಹಕಾರವನ್ನು ರೂಪಿಸಲು ಸಹಕಾರಿಯಾಗಿದ್ದ ಗೌಡ ಅಥವಾ ಪಟೇಲ, ಕಲೆಯನ್ನು ಬಿಂಬಿಸುವ ವಿವಿಧ ಜನರನ್ನು ಪ್ರತಿನಿಧಿಸುವ ಸ್ಥಳನಾಮಗಳನ್ನೂ ಗುರುತಿಸಬಹುದು. ವಿಶಿಷ್ಟಾಂಶಗಳಲ್ಲಿ ಕಸುಬು ಅಥವಾ ಜಾತಿಸೂಚಕ ಅಂಶಗಳು ಹಿಂದೆ ಇದ್ದಿತಾದರೂ, ಕಾಲಕ್ರಮೇಣ ತನ್ನ ಹೆಸರಿನಲ್ಲಿ ಸ್ಥಿತ್ಯಂತರ ಆಗಿರಬಹುದು ಅಥವಾ ಹೆಸರೇ ಬದಲಾಗಿರುವ ಸಾಧ್ಯತೆಯೂ ಇದೆ

ಸ್ಥಳನಾಮಗಳಲ್ಲಿ ವ್ಯಕ್ತಿನಾಮ ಸೂಚಕ ನಿರ್ದಿಷ್ಟವನ್ನು ಗುರುತಿಸಬಹುದಾಗಿದ್ದು, ಊರಿನ ಪ್ರಮುಖ ವ್ಯಕ್ತಿ ಅಥವಾ ಅಲ್ಲಿ ಬಂದು ನೆಲೆಸಿದ ಮೊದಲ ವ್ಯಕ್ತಿಯ ಹೆಸರೇ ಇಲ್ಲಿ ನಿರ್ದಿಷ್ಟ ಅಂಶವಾಗಿರುತ್ತದೆ. ವ್ಯಕ್ತಿ ಕೇಂದ್ರಿತ ಕುಟುಂಬಗಳೂ ಇಂತಹ ಊರಿನಲ್ಲಿ ಕಂಡುಬರುತ್ತದೆ. ಇದರ ಜೊತೆಯಲ್ಲಿಯೇ ಸೇರುವ ಮತ್ತೊಂದು ಅಂಶವೆಂದರೆ ಕುಟುಂಬನಾಮಗಳು. ಕುಟುಂಬನಾಮದಿಂದ ಒಂದು ಊರನ್ನು ಗುರುತಿಸುವ ಸಂಪ್ರದಾಯವೂ ಇದ್ದು, ಕೆಲವೊಮ್ಮೆ ಊರಿನ ಹೆಸರು ವ್ಯಕ್ತಿನಾಮಗಳಲ್ಲಿ ಎರಡನೆಯ ಹೆಸರಾಗಿ ಸೇರಿರುವ ಸಾಧ್ಯತೆಯೂ ಇರುತ್ತದೆ. ವ್ಯಕ್ತಿಯನ್ನು ಗುರುತಿಸುವಾಗ ಊರಿನ ಹೆಸರೇ ಹೆಚ್ಚು ಮಹತ್ವ ಪಡೆದಿರುವುದನ್ನು ಕಾಣಬಹುದು.

ಪ್ರಾಕೃತಿಕ ಅಂಶಗಳನ್ನು ಬಿಂಬಿಸುವ ಸ್ಥಳನಾಮಗಳಲ್ಲಿ ಗಿಡ-ಮರಗಳ ಹೆಸರುಗಳನ್ನೂ ಬಳಸಿಕೊಂಡಿದ್ದಾನೆ. ಈ ಗಿಡಮರಗಳಲ್ಲಿ ಕೆಲವು ದೈವಿಕವಾಗಿ ಮಹತ್ವವನ್ನು ಪಡೆದಿವೆ. ದೈವತ್ವದ ಪ್ರಾತಿನಿಧಿಕ ಅಂಶಗಳೆಂದೆ ಪರಿಗಣಿಸಿರುವ ಮರಗಳ ಜೊತೆಗೆ, ಆಯಾ ಪ್ರದೇಶದಲ್ಲಿ ಯಥೇಚ್ಚವಾಗಿ ಬೆಳೆದಿರುವ ಅಥವಾ ಅದರ ಬಳಕೆ ಹೆಚ್ಚಾಗಿರುವುದನ್ನು ಸೂಚಿಸುವ ಸಂಕೇತವಾಗಿ ಬಳಸಿದ್ದಾನೆ. ನಿರ್ದಿಷ್ಟ ಭೂಪ್ರದೇಶದಲ್ಲಿ ಬೆಳೆಯುವ ಮರಗಳಿಂದ ಭೂಗುಣ, ವಾತಾವರಣ ಮುಂತಾದುವನ್ನು ಅರಿಯಲು ಸ್ಥಳನಾಮಗಳು ಸಹಾಯಕವಾಗಿವೆ. ಪೂರ್ವದಲ್ಲಿನ ಸ್ಥಳನಾಮಗಳಲ್ಲಿ ಬಂದಿರುವ ನಿರ್ದಿಷ್ಟಗಳಿಗೆ ಅನ್ವರ್ಥತೆಯನ್ನು ಗುರುತಿಸಲು ಸಾಧ್ಯವಿಲ್ಲದಿದ್ದರೂ, ಒಂದು ಕಾಲದ ಸ್ಥಿತಿಯನ್ನು ಅರಿಯಬಹುದು.

ಭಾಷೆಯು ನಿರಂತರವಾಗಿ ಬದಲಾಗುವ ವಿಶಿಷ್ಟ ಗುಣವಿಶಿಷ್ಟವನ್ನು ಹೊಂದಿರುವುದರಿಂದ, ಕಾಲದಿಂದ ಕಾಲಕ್ಕೆ ಪದದ ಬಳಕೆ ಹಾಗೂ ಅರ್ಥ ಬದಲಾಗುತ್ತಿರುತ್ತದೆ. ಇದು ಸ್ಥಳನಾಮಗಳ ಮೇಲೆ ಪ್ರಭಾವ ಬೀರುತ್ತಿರುತ್ತದೆ. ಆದುದರಿಂದ ಉಚ್ಚಾರಣೆಯಲ್ಲಿ ವ್ಯತ್ಯಾಸ, ಬೇರೆಯ ಭಾಷೆಯ ಪ್ರಭಾವದಿಂದ ಹೊಸ ಪದಗಳ ಬಳಕೆ ಅಥವಾ ಈಗಾಗಲೇ ಬಳಕೆಯಾಗುತ್ತಿರುವ ಪದಕ್ಕೆ ಪರ್ಯಾಯ ಪದಗಳ ಬಳಕೆ ಸ್ಥಳನಾಮಗಳಲ್ಲಿ ಆಗುತ್ತಿರುತ್ತದೆ. ಸಂಸ್ಕೃತೀಕರಣ, ಆಂಗ್ಲೀಕರಣದ ಪ್ರಕ್ರಿಯೆಗಳು ಕನ್ನಡದಲ್ಲಿ ನಡೆಯುತ್ತಿದೆಯಾದರೂ, ಕೆಲವೊಮ್ಮೆ ಮೂಲ ಹೆಸರು ಬದಲಾಗದೆ ಸ್ವಂತಿಕೆ ಉಳಿಸಿಕೊಂಡಿರುವ ಸಾಧ್ಯತೆಯೂ ಇರುತ್ತದೆ. ಪ್ರತಿನಾಮಕರಣಗಳ ಸಂದರ್ಭಗಳಲ್ಲಿ ಇದನ್ನು ಗುರುತಿಸಬಹುದಾಗಿದ್ದು, ಇದಕ್ಕೆ ಆಡಳಿತ ನಡೆಸುತ್ತಿದ್ದ ರಾಜಮನೆತನಗಳೂ ಕಾರಣವಾಗಿರುತ್ತವೆ.

ವ್ಯವಸಾಯವು ಪ್ರಾಚೀನ ಮಾನವನ ಮುಖ್ಯ ಕಸುಬಾಗಿದ್ದು ಇದರ ಜೊತೆಯಲ್ಲಿ ಪಶು ಸಾಕಾಣಿಕೆಯು ಇವನ ಉಪಕಸುಬಾಗಿದ್ದಿತ್ತು. ಸಾಕು ಪ್ರಾಣಿಗಳು ಹಾಗೂ ಕಾಡು ಪ್ರಾಣಿಗಳು ಎರಡನ್ನೂ ಸ್ಥಳನಾಮಗಳಲ್ಲಿನ ವಿಶಿಷ್ಟಗಳಲ್ಲಿ ಗುರುತಿಸಬಹುದು. ಇದಲ್ಲದೆ ಪಕ್ಷಿಯನ್ನು ಸೂಚಿಸುವ ಅಂಶಗಳು ಸ್ಥಳನಾಮಗಳೂ ಇವೆ. ಕೆಲವು ಪ್ರಾಣಿಗಳಿಗೆ ದೈವೀ ಸ್ವರೂಪವನ್ನು ನೀಡಲಾಗಿದ್ದು, ಇಂತಹ ಪ್ರಾಣಿಗಳ ಹೆಸರಿನ ಸ್ಥಳನಾಮಗಳಲ್ಲಿ, ಕೆಲವೊಮ್ಮೆ ಐತಿಹ್ಯ, ಕಟ್ಟುಕಥೆಗಳನ್ನು ಸೃಷ್ಟಿಸಲಾಗಿರುತ್ತದೆ. ಕಾಡುಪ್ರಾಣಿಗಳನ್ನು ವಿಶಿಷ್ಟವಾಗಿ ಹೊಂದಿರುವ ಸ್ಥಳನಾಮಗಳು, ಮಾನವನ ಸಾಹಸ ಸೂಚಿಸುವ ಐತಿಹ್ಯಗಳ ಸೃಷ್ಟಿಯಾಗಿರುತ್ತದೆ

ಕರ್ನಾಟಕವು ಅನೇಕ ರಾಜಮನೆತನಗಳು, ಸ್ಥಳೀಯ ಪಾಳೇಗಾರರು, ಬ್ರಿಟಿಷರು ಹಾಗೂ ಸ್ವಾತಂತ್ರ್ಯ ನಂತರದ ಸರ್ಕಾರದ ಆಡಳಿತಕ್ಕೆ ಒಳಗಾಗಿವೆ. ಅನೇಕ ಪ್ರದೇಶಗಳು ಒಂದೊಂದು ಕಾಲದಲ್ಲಿ ಒಂದೊಂದು ರಾಜಮನೆತನಗಳ ಒಡೆತನಕ್ಕೆ ಸೇರುತ್ತಿದ್ದವು. ಇಂತಹ ಸಂದರ್ಭದಲ್ಲಿ ಅಲ್ಲಿನ ಸ್ಥಳನಾಮಗಳ ಹೆಸರುಗಳನ್ನು ಬದಲಾವಣೆ

ಒಳಗಾಗಿರುವ ಸಾಧ್ಯತೆಯನ್ನೂ ಗುರುತಿಸಬಹುದು. ಬ್ರಿಟಿಷರ ಆಡಳಿತಕಾಲದಲ್ಲಿಯೂ ಈ ರೀತಿಯ ಬದಲಾವಣೆಗಳು ನಡೆದಿದೆ.

ಸ್ಥಳನಾಮಗಳಲ್ಲಿ ಬಳಕೆಯಾಗಿರುವ ವಿಶಿಷ್ಟಗಳನ್ನು ಆಧರಿಸಿ, ಪ್ರತ್ಯೇಕ ವರ್ಗೀಕರಣ ಮಾದರಿಯನ್ನು ಅಧ್ಯಯನದಲ್ಲಿ ಸಿದ್ಧಪಡಿಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಅನುಕೂಲವಾಗುವಂತೆ ಐದು ರೀತಿಯ ವಿಭಾಗಗಳನ್ನು ಮಾಡಿಕೊಂಡು, ವಿಶಿಷ್ಟಗಳನ್ನನುಸರಿಸಿ ವರ್ಗೀಕರಣ ಪಟ್ಟಿಯನ್ನು ಮಾಡಲಾಗಿದೆ. ಭಾಷಿಕ ಮಾದರಿಗಳಲ್ಲಿ, ವಿಶಿಷ್ಟ ಮತ್ತು ವಾರ್ಗಿಕಗಳ ಪರಿಮಾಣವನ್ನನುಸರಿಸಿ, ಮೂರು ವಿಧವನ್ನು ಗುರುತಿಸಿಕೊಳ್ಳಲಾಗಿದೆ. ಸಂಸ್ಕೃತೀಕರಣ, ಪುನರ್ನಾಮಕರಣ, ಹ್ರಸ್ವೀಕರಣ ಶಿಷ್ಟ ಮತ್ತು ಬಳಕೆಯ ರೂಪ, ಇಂಗ್ಲೀಷ್ ಪ್ರಭಾವ-ಸ್ವರಾಂತ್ಯ, ವ್ಯಂಜನಾಂತ್ಯ ಸ್ಥಳನಾಮಗಳೆಂದು ವರ್ಗೀಕರಣ ಅಧ್ಯಯನದಲ್ಲಿ ಒಳಗುಮಾಡಿಕೊಂಡಿದೆ.

ಪ್ರಾಕೃತಿಕ ಲಕ್ಷಣ ಸೂಚಿಸುವ-ಶಿಲಾವಾಚಿ, ಜಲವಾಚಿ, ಸಸ್ಯವಾಚಿ, ಪ್ರಾಣಿ-ಪಕ್ಷಿವಾಚಿ, ಮಣ್ಣಿನ ಗುಣ ಸೂಚಿಸುವ, ಕ್ಷೇತ್ರವಾಚಕ ಸ್ಥಳನಾಮಗಳ ಮಾದರಿಯ ವರ್ಗೀಕರಣ ಮಾಡಲಾಗಿದೆ. ಸಾಮಾಜಿಕ-ಸಾಂಸ್ಕೃತಿಕ ಲಕ್ಷಣ ಸೂಚಿಸುವ ಜಾತಿವಾಚಿ, ವೃತ್ತಿವಾಚಿ, ವ್ಯಕ್ತಿವಾಚಿ ಹಾಗೂ ದೈವವಾಚಿ ಸ್ಥಳನಾಮಗಳನ್ನು ಅಧ್ಯಯನ ಮಾಡಲು ಅವಶ್ಯಕವಾದ ವರ್ಗೀಕರಣವನ್ನು ಸಿದ್ಧಪಡಿಸಿಕೊಳ್ಳಲಾಗಿದೆ.

ಸ್ಥಳನಾಮಗಳು ಹಾಗೂ ಇತಿಹಾಸ, ಐತಿಹ್ಯ ಪುರಾಣ, ಶಾಸನಗಳು-ಇವುಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ವರ್ಗೀಕರಣ ಮಾದರಿಯನ್ನು ಅಧ್ಯಯನವು ಹೊಂದಿದೆ ಕೆಲವು ಸ್ಥಳನಾಮಗಳನ್ನು ನಿರ್ದಿಷ್ಟ ವರ್ಗೀಕರಣ ಮಾದರಿಗೆ ಸೇರಿಸಲು ಸಾಧ್ಯವಿರುವುದಿಲ್ಲ, ಅಂತಹ ಸ್ಥಳನಾಮಗಳನ್ನು ಸಂಕೀರ್ಣ ಸ್ಥಳನಾಮಗಳೆಂದು ಗುರುತಿಸಲಾಗಿದೆ. ದಿಗ್ವಾಚಕ, ಪರಿಮಾಣವಾಚಿ, ಪೌರ್ವಾಪರ್ಯ-ಸಾಪೇಕ್ಷ ಸ್ಥಳನಾಮಗಳು, ಪ್ರತಿಕರಣ, ವಸತಿ, ನಿರ್ವಸತಿ ಹಾಗೂ ನಿರ್ವಸಿತ ಸ್ಥಳನಾಮಗಳನ್ನು ಸಂಕೀರ್ಣ ಮಾದರಿಯಲ್ಲಿ ಸೇರಿಸಲಾಗಿದೆ.

## ೯.೨ ಪ್ರಸ್ತುತ ಅಧ್ಯಯನದ ಫಲಿತಗಳು

ಸ್ಥಳನಾಮಗಳ ಅಧ್ಯಯನವನ್ನು ವಿವಿಧ ದೃಷ್ಟಿಕೋನಗಳಿಂದ ನೋಡುವ ಉದ್ದೇಶದಿಂದ, ಈಗಾಗಲೇ ಪ್ರಕಟಿತವಾಗಿರುವ ಕೃತಿಗಳ ಅಧ್ಯಯನವನ್ನು ಮಾಡಿ, ಹೊಸ ಮಾದರಿಯನ್ನು ಅಳವಡಿಸಿಕೊಳ್ಳಲಾಗಿದೆ. ಲಭ್ಯವಾದ ಕೃತಿ, ಲೇಖನ, ಮೌಖಿಕ ಮಾಹಿತಿಗಳನ್ನು ಗ್ರಹಿಸಿ, ಈ ಮಾದರಿ ಸಿದ್ಧಪಡಿಸಲಾಗಿದೆ.

ಭಾಷಿಕ ಮಾದರಿಯ ಅಧ್ಯಯನದಲ್ಲಿ, ಸ್ಥಳನಾಮಗಳಲ್ಲಿರುವ ಘಟಕಗಳನ್ನು ಮುಖ್ಯ ಅಂಶವಾಗಿರಿಸಿಕೊಂಡು, ನಾಲ್ಕು ರೀತಿಯ ವರ್ಗೀಕರಣ ಮಾಡಿಕೊಳ್ಳಲಾಗಿದೆ. ಘಟಕಗಳ ಸಂಖ್ಯೆಯು ಒಂದರಿಂದ ಐದರವರೆಗೆ ಇರುವುದನ್ನು ಗುರುತಿಸಿ, ಕೆಲವು ಸ್ಥಳನಾಮಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಸೌಲಭ್ಯಾಕಾಂಕ್ಷೆಯ ಉದ್ದೇಶದಿಂದ ಹೆಚ್ಚು ಘಟಕಗಳನ್ನು ಹೊಂದಿರುವ ಸ್ಥಳನಾಮಗಳನ್ನು ಹ್ರಸ್ವೀಕರಣ ಮಾಡಿ ಬಳಸುವುದನ್ನು ಗುರುತಿಸಲಾಗಿದೆ. ಇಂತಹ ಹ್ರಸ್ವೀಕರಣ ಕ್ರಿಯೆಯಲ್ಲಿ ಇಂಗ್ಲಿಷ್ ಅಕ್ಷರದ ಬಳಕೆ ಹೆಚ್ಚಾಗಿಯೇ ಕಂಡುಬರುತ್ತದೆ. ಕನ್ನಡದ ಅಕ್ಷರವನ್ನೇ ಬಳಸುವ ಅಥವಾ ಅಕ್ಷರಲೋಪ ಮಾಡಿಕೊಳ್ಳುವುದನ್ನು ಗುರುತಿಸಲಾಗಿದೆ. ಸ್ಥಳನಾಮಗಳಲ್ಲಿ ಗುರುತಿಸುವ ವಿಶಿಷ್ಟಗಳನ್ನು ಬಳಸಿಕೊಳ್ಳದೆ.

ವಾರ್ಗಿಕಗಳ ಬಳಕೆಯಾಗಿ ಸ್ಥಳನಾಮ ರಚನೆಯಾಗಿರುವುದನ್ನು ಗುರುತಿಸಲಾಗಿದೆ. ವಾರ್ಗಿಕಗಳು ವಿಶಿಷ್ಟವಾಗಿ ಬಳಕೆಯಾಗಿರುವುದಕ್ಕೆ ಮಾದರಿಗಳನ್ನು ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ಸ್ಥಳನಾಮಗಳ ಮೇಲೆ ಸಂಸ್ಕೃತ ಭಾಷೆ ಪ್ರಭಾವ ಬೀರಿರುವುದನ್ನು ಅಧ್ಯಯನಕ್ಕೆ ಒಳಗು ಮಾಡಲಾಗಿದೆ. ಸ್ಥಳೀಯ ಕನ್ನಡ ಭಾಷೆಯ ಸ್ಥಳನಾಮಗಳನ್ನು ಸಂಸ್ಕೃತೀಕರಣಗೊಳಿಸಿರುವ ಪ್ರಕ್ರಿಯೆಯನ್ನು ಗುರುತಿಸಲಾಗಿದೆ. ಆದರೆ ಈ ರೀತಿಯ ಸಂಸ್ಕೃತೀಕರಣಗಳು ಜನಬಳಕೆಯಲ್ಲಿ ಇಲ್ಲದಿರುವ ಕೆಲವು ಮಾದರಿಗಳನ್ನು ಗುರುತಿಸಲಾಗಿದೆ.

ಸ್ಥಳನಾಮಗಳು ಪುನರ್ನಾಮಕರಣ ಪ್ರಕ್ರಿಯೆಗೆ ಒಳಗಾಗಿರುವುದನ್ನು ಅಧ್ಯಯನವು ಒಳಗೊಂಡಿದೆ. ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಭೌಗೋಳಿಕ, ಭಾಷಿಕ ಹಾಗೂ ನಿರ್ದಿಷ್ಟ ಘಟನೆಗಳು ಪುನರ್ನಾಮಕರಣಕ್ಕೆ ಕಾರಣವಾಗಿರುವುದನ್ನು ಮಾದರಿಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

ಸ್ಥಳನಾಮಗಳ ಮೇಲೆ ಇಂಗ್ಲಿಶ್ ಭಾಷೆಯ ಪ್ರಭಾವ ಇರುವುದನ್ನು ಗುರುತಿಸಲಾಗಿದೆ. ಸಾಮಾನ್ಯವಾಗಿ ಊರ ಹೆಸರುಗಳ ಒಂದು ಅಥವಾ ಎರಡು ನಿರ್ದಿಷ್ಟಗಳನ್ನು ಹ್ರಸ್ವೀಕರಣಗೊಂಡು ಬಳಸಲಾಗುತ್ತಿರುವುದನ್ನು ಅಧ್ಯಯನವು ಒಳಗೊಂಡಿದೆ.

ಶಿಷ್ಟ ರೂಪದ ಸ್ಥಳನಾಮಗಳು ಹಾಗೂ ಜನಸಾಮಾನ್ಯರ ಉಚ್ಚಾರಣೆಯ ನಡುವೆ ವ್ಯತ್ಯಾಸವನ್ನು ಗುರುತಿಸಲಾಗಿದೆ. ಹ್ರಸ್ವೀಕರಣವು ಸಾಮಾನ್ಯವಾದ ಬದಲಾವಣೆಯಾಗಿರುತ್ತದೆ. ಅಕ್ಷರಸ್ಥರ ಉಚ್ಚಾರಣೆಯು ಶಿಷ್ಟರೂಪ ಅಥವಾ ಅದಕ್ಕೆ ಹತ್ತಿರವಾದ ರೂಪವನ್ನು ಹೊಂದಿರುತ್ತದೆ. ಅನಕ್ಷರಸ್ಥರ ಉಚ್ಚಾರಣೆ ಗ್ರಾಮ್ಯರೂಪ ಹೊಂದಿರುವುದನ್ನು ಮಾದರಿಗಳೊಂದಿಗೆ ವಿಶ್ಲೇಷಿಸಲಾಗಿದೆ.

ಸ್ಥಳನಾಮಗಳು ಸ್ವರಾಂತ್ಯವಾಗಿರುವುದನ್ನು ಅಧ್ಯಯನದಲ್ಲಿ ಗುರುತಿಸಲಾಗಿದ್ದು, ಕೆಲವು ಸ್ಥಳನಾಮಗಳ ಈ ರೀತಿಯ ಬದಲಾವಣೆಗೆ ಒಳಗಾಗದಿರುವುದನ್ನು ಗುರುತಿಸಿದೆ. ಪುರ, ಪೇಟೆ , ಊರು, ನಗರ, ಕಾವಲು ಮುಂತಾದ ವಾರ್ಗಿಕಗಳು ವ್ಯಂಜನಾಂತ್ಯವಾಗಿದ್ದು, ಗುಡ್ಡೆ ಕುಪ್ಪೆ, ಕುಂಟೆ, ಸಂದ್ರ ಮುಂತಾದ ವಾರ್ಗಿಕಗಳು ಸ್ವರಾಂತ್ಯವಾಗಿಯೇ ಇರುವುದನ್ನು ಗುರುತಿಸಲಾಗಿದೆ. 'ಇ'ಕಾರಾಂತ್ಯ ಹೊಂದಿರುವ ಸ್ಥಳನಾಮಗಳು ಹ್ರಸ್ವೀಕರಣಕ್ಕೆ ಒಳಗಾಗಿದ್ದರೂ ಅಂತ್ಯಸ್ವರ 'ಇ' ಆಗಿರುವುದನ್ನು ಗುರುತಿಸಲಾಗಿದೆ.

ಮಹಾಪ್ರಾಣಾಕ್ಷರಗಳಿಂದ ಆರಂಭವಾಗುವ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದ್ದು ಇಂತಹ ಎಲ್ಲಾ ಸ್ಥಳನಾಮಗಳೂ 'ಭ', 'ಫ' ಅಕ್ಷರದಿಂದಲೇ ಪ್ರಾರಂಭವಾಗಿರುವುದು ವಿಶೇಷವಾಗಿದೆ. 'ಭ', 'ಫ', 'ಝ' ವ್ಯಂಜನ ಹೊರತಾಗಿ ಇತರೆ ಯಾವುದೇ ಮಹಾಪ್ರಾಣಾಕ್ಷರಗಳಿಂದ ಆರಂಭವಾಗುವ ಸ್ಥಳನಾಮಗಳು ಅಧ್ಯಯನದ ವ್ಯಾಪ್ತಿ ಪ್ರದೇಶದಲ್ಲಿ ದೊರೆಯುವುದಿಲ್ಲ. ಆದರೆ ಸ್ಥಳನಾಮಗಳ ಮಧ್ಯದಲ್ಲಿ ಇತರೆ ಮಹಾಪ್ರಾಣಾಕ್ಷರಗಳ ಬಳಕೆ ಆಗಿದೆ.

ಸಾಮಾಜಿಕ ಅಂತಗಳನ್ನು ಸೂಚಿಸುವ ಜಾತಿ ಮತ್ತು ವೃತ್ತಿ ಸೂಚಕ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಇವೆರಡೂ ಪರಸ್ಪರ ಸಂಬಂಧಿತವಾಗಿದ್ದು ಕೆಲವೊಮ್ಮೆ ವೃತ್ತಿವಾಚಿ ಸ್ಥಳನಾಮಗಳು ಜಾತಿಯನ್ನು ಸೂಚಿಸುವುದಿಲ್ಲ. ಅಧ್ಯಯನ ವ್ಯಾಪ್ತಿಯಲ್ಲಿರುವ ಎಲ್ಲಾ ಜಾತಿವಾಚಿ ಸ್ಥಳನಾಮಗಳನ್ನು ಪ್ರತ್ಯೇಕವಾಗಿ ಗುರುತಿಸಲಾಗಿದೆ. ಜಾತಿವಾಚಿ ಸ್ಥಳನಾಮಗಳಲ್ಲಿ ಆಯ್ಕೆ ಮಾಡಿದ ಮಾದರಿಗಳನ್ನು ವಿಶ್ಲೇಷಣೆಗೆ ಒಳಗು ಮಾಡಲಾಗಿದೆ.

ವೃತ್ತಿವಾಚಿ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಮಾದರಿ ವೃತ್ತಿವಾಚಿ ಸ್ಥಳನಾಮಗಳನ್ನು ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ವೃತ್ತಿಸೂಚಕ ವಿಶಿಷ್ಟ ಅಂಶಗಳಲ್ಲಿ ಆಗಿರುವ ಭಾಷಿಕ ವ್ಯತ್ಯಾಸಗಳನ್ನು ಗುರುತಿಸಲಾಗಿದೆ.

ವ್ಯಕ್ತಿವಾಚಿ ಸ್ಥಳನಾಮಗಳು ಸಾಮಾಜಿಕ ಅಂಶಗಳನ್ನು ಸೂಚಿಸುತ್ತವೆ. ವ್ಯಕ್ತಿವಾಚಿ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಆಯ್ಕೆಮಾಡಿಕೊಂಡ ಮಾದರಿಗಳನ್ನು ವಿಶ್ಲೇಷಣೆಗೆ ಒಳಗುಮಾಡಲಾಗಿದೆ.

ದೈವವಾಚಿ ಸ್ಥಳನಾಮಗಳು ಸಾಂಸ್ಕೃತಿಕ ಅಂಶಗಳನ್ನು ಸೂಚಿಸುತ್ತವೆ. ದೈವವಾಚಿ ಸ್ಥಳನಾಮಗಳನ್ನು ಅಧ್ಯಯನ ವ್ಯಾಪ್ತಿಯ ಎಲ್ಲಾ ಪ್ರದೇಶಗಳಲ್ಲೂ ಗುರುತಿಸಬಹುದು. ಸ್ಥಳೀಯ ದೇವರುಗಳ ಹೆಸರುಗಳು ಸ್ಥಳನಾಮಗಳಲ್ಲಿ ಸೇರಿರುತ್ತದೆ. ಕೆಲವೊಮ್ಮೆ ಊರಿನ ಹೆಸರುಗಳ ನಿರ್ದಿಷ್ಟಗಳೇ ಊರಿನ ಅಧಿ ದೇವತೆಯ ಹೆಸರೂ ಆಗಿರುವುದನ್ನು ಗುರುತಿಸಬಹುದು. ಊರಿನ ಅಧಿದೇವತೆಯ ಹೆಸರಿನ ನಿರ್ದಿಷ್ಟ ಭಾಗವನ್ನು ಸೇರಿಸಿಕೊಳ್ಳುವುದು ಹಿರಿಮೆ ಅಥವಾ ಭಕ್ತಿಯನ್ನು ಸೂಚಿಸುತ್ತದೆ. ಆದುದರಿಂದ ಈ ರೀತಿ ದೈವಿಕ ಅಂಶಸೂಚಿಸುವ ಸ್ಥಳನಾಮಗಳನ್ನು ಎಲ್ಲಾ ಪ್ರದೇಶದಲ್ಲಿಯೂ ಗುರುತಿಸಬಹುದು. ಹೀಗೆ ಬರುವ ದೈವವಾಚಿ ಸ್ಥಳನಾಮಗಳನ್ನು ಗುರುತಿಸಿ, ವಿಶ್ಲೇಷಣೆಗೆ ಒಳಗುಮಾಡಲಾಗಿದೆ. ಇವುಗಳಲ್ಲಿ ಮುಖ್ಯವಾಗಿ ಹಿಂದೂ ಸಂಸ್ಕೃತಿಗೆ ಸೇರಿದ ಸ್ಥಳನಾಮಗಳು ಹೆಚ್ಚಾಗಿ ಕಂಡುಬಂದರೂ, ಇಸ್ಲಾಂ ಸೂಚಕ ಸ್ಥಳನಾಮಗಳೂ ಇವೆ.

ಪ್ರಾಕೃತಿಕ ಹಾಗೂ ಭೌಗೋಳಿಕ ಲಕ್ಷಣವನ್ನು ಸೂಚಿಸುವ ಸ್ಥಳನಾಮಗಳ ಅಧ್ಯಯನ ಮಾಡುವ ಉದ್ದೇಶದಿಂದ, ವಿಶಿಷ್ಟಗಳನ್ನು ಗಮನಿಸಿ ವರ್ಗಿಕರಣ ಮಾಡಲಾಗಿದೆ. ಭೌಗೋಳಿಕ ಅಂಶಗಳಲ್ಲಿ ಶಿಲೆ, ಬೆಟ್ಟ-ಗುಡ್ಡ, ಮಣ್ಣಿನ ಗುಣ ಸೂಚಿಸುವ ಹಾಗೂ ಪ್ರಾಕೃತಿಕ ಲಕ್ಷಣಗಳಾದ ಜಲ, ಸಸ್ಯ, ಪ್ರಾಣಿ-ಪಕ್ಷಿ ಅಂಶವನ್ನು ಸೂಚಿಸುವ ಸ್ಥಳನಾಮಗಳನ್ನು ಗುರುತಿಸಲಾಗಿದೆ. ಬೆಟ್ಟ-ಗುಡ್ಡ ಅಂಶವನ್ನು ವ್ಯಕ್ತಪಡಿಸುವ ಸ್ಥಳನಾಮಗಳನ್ನು ಗುರುತಿಸಿ ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ಮಣ್ಣಿನ ಗುಣವನ್ನು ಸೂಚಿಸುವ ಸ್ಥಳಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ.

ಜಲವಾಚಿ ಸ್ಥಳನಾಮಗಳಲ್ಲಿ ವಿಶಿಷ್ಟ ಹಾಗೂ ವಾರ್ಗಿಕಗಳಲ್ಲಿ ಬಳಕೆಯಾಗಿರುವ ಜಲಸೂಚಕ ಅಂಶಗಳನ್ನು ಗುರುತಿಸಿ, ಅಂತಹ ಸ್ಥಳನಾಮಗಳಲ್ಲಿ ಮಾದರಿ ವಿಶ್ಲೇಷಣೆ ಮಾಡಲಾಗಿದೆ. ಸಂದ್ರ, ಕೆರೆ, ಕುಂಟೆ, ಆಲ್, ಸಾಗರ, ತೊರೆ, ಕೋಡಿ, ಕಲ್ಯಾಣಿ, ಮಂಗಲ, ಮಳೆ ನೀರಿನ ಹನಿ ಮುಂತಾದ ಅಂಶಗಳನ್ನು ಸೂಚಿಸುವ ಸ್ಥಳನಾಮಗಳನ್ನು ಗುರುತಿಸಲಾಗಿದೆ

ಸ್ಥಳನಾಮಗಳಲ್ಲಿ ಕಂಡುಬರುವ ಗಿಡಮರಗಳ ಹೆಸರನ್ನು ಸೂಚಿಸುವ ವಿಶಿಷ್ಟಗಳನ್ನು ಗುರುತಿಸುವ ಮೂಲಕ, ಸಸ್ಯವಾಚಿ ಸ್ಥಳನಾಮಗಳನ್ನು ಗುರುತಿಸಲಾಗಿದೆ. ಗಿಡಮರಗಳಿಗೆ ನೀಡುತ್ತಿದ್ದ ಮಹತ್ವ, ಅವುಗಳಿಂದ ಆಗುತ್ತಿದ್ದ ಪ್ರಯೋಜನಗಳ ಮೂಲಕ ಹಾಗೂ ಒಂದು ಪ್ರದೇಶದಲ್ಲಿ ಬೆಳೆಯುತ್ತಿದ್ದ ನಿರ್ದಿಷ್ಟ ಮರಗಳಿಂದ ಹೆಸರು ಬಂದಿರುವುದನ್ನು ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ಈ ಮರಗಳು ಮಾನವನ ಜೀವನದ ಜೊತೆ ಸಂಬಂಧ ಹೊಂದಿವೆ.

ಸ್ಥಳನಾಮಗಳಲ್ಲಿ ಶಿಲೆಯನ್ನು ಸೂಚಿಸುವ ಅಂಶಗಳನ್ನು ನಿರ್ದಿಷ್ಟ ಹಾಗೂ ವಾರ್ಗಿಕಗಳಲ್ಲಿ ಗುರುತಿಸಲಾಗಿದೆ.

